# ದೇವದೂತರು.

## ಪ್ರಕರಣ ೧

## ನಿದ್ರಾಭಂಗ.

ದೇವ, ದಾನವ, ಮಾನವ, ಇವರೊಳಗಿನ ದ್ವೇಷ ಕ್ಲೇಶಗಳು ಅನಾದಿಯಿಂದ ಬಂದುವೆಂದು ನಮ್ಮ ಪುರಾಣಗಳೆಲ್ಲ ಒಂದೊಂದಾಗಿ ಸಾರುತ್ತಿವೆ. ಸೃಷ್ಟಿ ಪೂರ್ವಕ್ಕೂ ತೊಡಗಿದ್ದಿರಬೇಕಾದ ದೇವದಾನವ ಕಲಹವಾಗಲೀ, ಮಾನವದಾನವ ಕಲಹವಾಗಲೀ ಈಗಲಾದರೂ ಶಾಂತವಾಗಿದೆಯೆಂದು ಊಹಿಸಲು ಬರುವುದಿಲ್ಲ. ಕಾರಣ, ಇದು ವರೆಗೆ ನಮ್ಮ ಶಿಲಾಶಾಸನ ಶೋಧಕರು ಕಂಡುಹಿಡಿದ ಯಾವತ್ತೂ ಶಿಲಾಶಾಸನ, ತಾಮ್ರ ಶಾಸನಗಳಲ್ಲಿ ಇಂಥದೊಂದು ಸಂಧಿಯಾಯಿತೆಂಬುದಕ್ಕೆ ಯಾವ ಪ್ರಮಾಣಗಳೂ ಕಂಡುಬರುವುದಿಲ್ಲ ಇತ್ತ ಅವರನ್ನೂ ಅವರ ವಂಶಜರನ್ನೂ ಕೇಳಿ ತಿಳಿದುಕೊಳ್ಳೋಣವೆಂದರೆ ಅವರ ಇರವು ನಮಗೆ ತಿಳಿದುಬರುವುದಿಲ್ಲ ಅಲ್ಲದೆ- ದೇವದಾನವ ಕುಲಗಳು ಸಂಪೂರ್ಣ ನಾಶವಾದುವೆಂದು ತಿಳಿಯುವುದಕ್ಕಾದರೂ ಅವಕಾಶವಿಲ್ಲ. ಕಾರಣ-ಅಲ್ಲಲ್ಲಿ ಭೂತ, ಪ್ರೇತಗಳ ಕಾಟವೂ ಕಂಡುಬರುತ್ತದೆ. ಅಷ್ಟೇ ಅಲ್ಲ, ಮಾನವನ ಸ್ವಾತಂತ್ರ್ಯವು ಇನ್ನೂ ನಿರಾತಂಕವಾಗಿಲ್ಲ.

ದೇವದಾನವರ ಸುದ್ದಿಯನ್ನು ಬರೆಯುವುದು ನನ್ನ ಉದ್ದೇಶವಲ್ಲ. ಮುಖ್ಯವಾಗಿ, ದೇವ ಮಾನವರ ಸ್ಪರ್ಧೆಯನ್ನು ತರ್ಕಿಸುವುದು ನನ್ನ ಉದ್ದೇಶ. ಹಿಂದಿನ ಕಾಲದಲ್ಲಿ ದೇವತೆಗಳು ದಾನವರ ಎದುರಿಗೆ ಬಹಿರಂಗ ಯುದ್ಧವನ್ನು ಮಾಡುತ್ತಿದ್ದರಂತೆ. ಆದರೆ ಆ ದಾನವ ಕುಲವು ನಾಶವಾದ ಬಳಿಕ ಈ ದೇವತೆಗಳು ನಾಗರಿಕ ಮಾನವರೊಡನೆ ಎದುರೆದುರಿಗೆ ನಿಂತು ಯುದ್ಧಮಾಡುವ ಸಾಹಸವಿಲ್ಲದೆ ಹಿಂದಿನಿಂದಲೇ ತಮ್ಮ ಪಿಕಲಾಟವನ್ನು ನಡೆಸುತ್ತಿರುವರು ಅವರಿಗೆ ಮಾನವನ ಶ್ರೇಷ್ಠತ್ವವನ್ನು ಒಪ್ಪಿಕೊಳ್ಳಲು ಅಹಂಕಾರವು ಬಿಡುವುದಿಲ್ಲ; ಎದುರೆದುರಿಗೆ ನಿಂತು ಯುದ್ಧಮಾಡಲು ತ್ರಾಣವಿಲ್ಲ. ನಿಶ್ಚಯವಾಗಿ ಆಧುನಿಕ ಕ್ರ್ಯೂಸರ್, ಬಾಂಬ್, ವಿಷಗಾಳಿ, ವಾಯುವಿಮಾನ, ಇವುಗಳ ಎದುರು ಮುಖಾಮುಖಿ ಯುದ್ಧಮಾಡುವ ಶಕ್ತಿಯು—ವಜ್ರಾಯುಧವನ್ನು ಹಿಡಿದ ಇಂದ್ರನಿಗಾಗಲಿ, ಶಂಖ ಚಕ್ರ ಗದಾ ಪದ್ಮಧಾರಿಯಾದ ಆ ವಿಷ್ಣುವಿಗಾಗಲಿ, ತ್ರಿಶೂಲವನ್ನು ಹಿಡಿದ ಈಶ್ವರನಿಗಾಗಲಿ ಎಂದೆಂದೂ ಸಾಧ್ಯವಿಲ್ಲ. ಇದು ಅವರಿಗಾದರೂ ತಿಳಿದೇ ಇದೆ ಆದರೆ ತಾವು ಜನ್ಮತಃ ದೇವತೆಗಳು ಎಂಬ ಅಹಂಕಾರ, ಪ್ರತಿಷ್ಠೆಗಳ ನಿಮಿತ್ತ, ಮಾನವೀ ರಾಜ್ಯವೆನಿಸಿದ ಪೃಥ್ವಿಯನ್ನು ತಮ್ಮದೆಂದು ತಿಳಿದಿರುವರು ಆಗಾಗ, ಬಿರುಗಾಳಿ, ಜ್ವಾಲಾಮುಖಿ, ಜಲಪ್ರಳಯ, ಮೊದಲಾದ ಕೈಲಾಗದ ಸಾಹಸಗಳಿಂದ ಇಲಿಯು ಸಿಂಹನನ್ನು ಕಣಿಕಿದಂತ ಕೆಣಕುವರು.

ಇವರು ಮಾನವನ ಒಂದು ಸೇತುವೆ ಸುಟ್ಟರೆ–ಮಾನ ವನು ಇನ್ನು ನಾಲ್ಕು ಸೇತುವೆಗಳನ್ನೂ, ಒಂದು ನಗರ ವನ್ನು ಸುಟ್ಟರೆ–ಇನ್ನು ನಾಲ್ಕು ನಗರಗಳನ್ನೂ ಸಿದ್ಧಪಡಿಸಿ ಅವರ ಮರುಳಾಟಿಕೆಯನ್ನು ಅವರಿಗೇ ತೋರಿಸುವನು

ಇಷ್ಟೆಲ್ಲಾ ಸುದ್ದಿ ಏತಕ್ಕೆ ಹೇಳುತ್ತೇವೆಂದರೆ— ಮೊನ್ನೆ ಮೊನ್ನೆ ಆ ನಾರದನೆಂಬವನೊಬ್ಬನು ದೇವ ಲೋಕಕ್ಕೆ ಹೋಗಿ ಭೂಲೋಕದವರ ಮೇಲೆ ತನ್ನ ದೊಂದು ದೊಡ್ಡ ದೂರನ್ನು ಕೊಟ್ಟಿರುವನು. ಪೌರಾ ಣಿಕ ಕಾಲದಲ್ಲಿ ದೇವತೆಗಳ ಕಿವಿಯೂದಿ, ದಾನವರ ಬಾಯಿಗೆ ಮಣ್ಣು ಹಾಕಿದವರಲ್ಲಿ ಇವನು ಅಗ್ರಗಣ್ಯ ನಂತ ಇಷ್ಟು ದಿನ ಇವನ ಸವಾರಿಯು ಅದೆಲ್ಲಿ ತಾಕಡಿಸುತ್ತಿತ್ತೋ ತಿಳಿಯದು–ಅಂತು ಈಗ ಒಮ್ಮಿಂ ದೊಮ್ಮೆಗೆ ತನ್ನ ಆ ಒಂದಾನೊಂದು ಕಾಲದ ವೈಭವವು ಗತವಾಯಿತೆಂದು, ತಿರಿಗಿ ಅದು ದೊರಕುವ ಬಗೆಯಿಲ್ಲ ವೆಂದು ತಿಳಿದುಬಂದುದರಿಂದ, ಹೇಗಾದರೂ ಮಾಡಿ ಆ ಗತವದವಿಯನ್ನು ಗಳಿಸಲು ಹೋರಾಡುತ್ತಿರುವನು ಧರೆಯಲ್ಲಿ ಮಾನವನ ಅಧಿಕಾರವು ನಡೆಯುವಷ್ಟು ದಿನ ಅವನ ಅಳಿದುಹೋದ ಸಂಪತ್ತು ಮರಳಿ ದೊರಕಲಾ ರದು. ಹಾಗೆ ದೊರೆಯಬೇಕಾದರೆ ತಿರುಗಿ ಪೃಥ್ವಿ ಯಲ್ಲಿ ದೇವತೆಗಳ ಅಧಿಕಾರವು ನೆಲೆಯಾಗಬೇಕು. ದೇವತೆಗಳಿಗಾದರೂ ಮಾನವರೊಡನೆ ಸ್ಪರ್ಧೆಗೆ ನಿಲ್ಲಲು ಧೈರ್ಯವಿಲ್ಲ. (ಹೀಗೆಂದು ಅವರಾಗಿ ಒಪ್ಪಿಕೊಳ್ಳು

ವಂತಿಲ್ಲ.) ಅಂತು ಕೇಳಿದವರೊಡನೆ ಹೀಗೆ ಹೇಳು ವರು: 'ದಾನವರು ನಮ್ಮಿಂದ ಎಂದೇ ನಾಶವಾಗಿರು ವರು. ಇನ್ನು ಮಾನವರ ನಡವಳಿಕೆಗಾಗಿ ವೇದ, ಸ್ಮೃತಿ, ಶ್ರುತಿ ಮೊದಲಾದ ಶಾಸ್ತ್ರಗಳನ್ನು ಹಾಕಿ ಬಂದಿರುವೆವು; ಅವರು ಅದರಂತೆ ನಡೆಯುತ್ತಿರಬೇಕು' ಇದೇ ನಿಜವೆಂದು ಅವರಲ್ಲಿ ಬಹಳ ಮಂದಿ ಕಣ್ಮುಚ್ಚಿ ನಂಬಿ ಕುಳಿತಿರುವರು. ಪರಿಸ್ಥಿತಿಯು ಇದಕ್ಕೆ ಸರಿ ವಿರುದ್ಧವಾಗಿದೆ ಎಂದು ಸಿದ್ಧಾಂತಗೊಳಿಸಿ, ಅವರ ಕೋಪವನ್ನು ನರರ ಮೇಲೆ ಹೆಚ್ಚಿಸಿ, ಇನ್ನೊಂದು ಮಹಾಯುದ್ಧಕ್ಕೆ ಸೀರಿಕೆಯನ್ನು ಹಾಕಬೇಕಂದು ನಾರದನ ಹಂಚಿಕೆ.

ನಾರದನಿಗೆ ಇಷ್ಟು ಕೋಪವೇಕೆಂದು ನೀವು ಕೇಳ ಬಹುದು. ಅದರ ಗುಟ್ಟು ಹೀಗಿದೆ: ವಿಷ್ಣುವು ಕೃಷ್ಣಾ ವತಾರಿಯಾಗಿ ಕಂಸವಧೆ ಮಾಡಿದ ಬಳಿಕ–ಇನ್ನುದಾನ ವರ ತಂಟೆ ಇಲ್ಲ; ತಾವು ಇದುವರೆಗೆ ಪಟ್ಟ ಪರಿಶ್ರ ಮದ ಪರಿಹಾರಕ್ಕಾಗಿ ಒಂದು ದೀರ್ಘ ನಿದ್ದೆಮಾಡಬ ಹುದು—ಎಂದು ದೇವತೆಗಳು ತಿಳಿದರು. ತಿಳಿದು ಸಿದ್ರೆ ಯನ್ನೇನೋ ಮಾಡಿದರು ಎಷ್ಟೆಂದರೂ ದೇವತೆಗಳ ನಿದ್ರೆಯಲ್ಲವೇ. ಮೊದಲನೆಯ ಬಾರಿ ನಿದ್ದೆಹೋದ ನಾರದನಿಗೆ ೫೦೦೦ವರುಷ ಕಳೆದುಹೋಯಿತು. ಇಂಥ ನಿದ್ರಾಭಂಗವೇ ನಾರದನ ತಳಮಳದ ರಹಸ್ಯ. ಈ ಸಮಯದಲ್ಲಿ ನಾರದನು ಮಂಗಳಗ್ರಹದಲ್ಲಿನ ಒಂದು ಸುಂದರವಾದ ಅರಮನೆಯಲ್ಲಿ ಹಂಸತೂಲಿಕಾತಲ್ಪದ

ಮೇಲೆ ನಿದ್ದೆಮಾಡುತ್ತಿದ್ದ. ತಲೆಯೊಳಗೆ–ನಿದ್ರೆಯಿಂದ ಎಚ್ಚೆತ್ತ ಬಳಿಕ ತಾನು ಕನಿಷ್ಠಪಕ್ಷ ೩೦ಸಾವಿರ ಸ್ತ್ರೀಯ ರನ್ನಾದರೂ ವರಿಸಿ, ಶ್ರೀ ಕೃಷ್ಣನನ್ನು ನಾಚಿಸುವೆ; ವೈಭವದಲ್ಲಿ ತೇಲಾಡುತ್ತಿರುವ ತನ್ನ ಅದ್ಭುತಸಾಹಸ ವನ್ನು ಕಂಡು ಶ್ರೀಕೃಷ್ಣನು ತನ್ನ ಮುಂದೆ ತಲೆಬಾಗ ಸಿಲ್ಲುವನು; ಆಗ ತಾನು ಕೃಷ್ಣನೂಡನ ಮಾತನಾಡ ಬೇಕಾದರೆ ಅವನು ತನ್ನ ಪರಾಜಯುವನ್ನು ಒಪ್ಪಿಕೊಂ ಡು, ತನ್ನ ಪಾದಧೂಳಿಯ ಚುಂಬನವನ್ನು ಮಾಡಬೇ ಕೆಂದು ಹೇಳುವೆನು–ಎಂದು ಎಣಿಕೆ ಹಾಕುತ್ತಿದ್ದನು. ಕೃ ಷ್ಣನು ಬಂದೊಡನೆ ಹಾಗೆಯೇ ಹೇಳಿದನು. (ಸ್ವಪ್ನ.) ಆಗ ೧೬೦೦೦ಗೋಪಕನ್ಯೆಯರ ಪತಿಯಾದ ಅವನು ನಾರ ದನ ಪಾದಚುಂಬನವನ್ನು ಮಾಡಿದನೋ ಏನೋ,— ಅಂತು ನಾರದನಿಗೆ ನಿದ್ರೆಯಿಂದ ಎಚ್ಚರವಾಯಿತು ನೋಡುತ್ತಾನೆ— ಇವನ ಪಾದಚುಂಬನ ಮಾಡಿದವನು ಕೃಷ್ಣನಲ್ಲ. ಅದಾವುದೋ ಒಂದು ದೊಡ್ಡದಾದ ಅಗ್ನಿ ಬಾಣ ಧಗಧಗನೆ ಉರಿಯುತ್ತಿರುವ ಆ ಬಾಣವನ್ನು ಕಂಡು, ಅದೆಲ್ಲಿಂದ ಬಂದಿತು ಎಂದು ನೋಡಲು ಪರ್ಯಂಕದಿಂದೆದ್ದು, ಗವಾಕ್ಷದಿಂದ ಅವಲೋಕಿಸು ವಂಥವನಾಗುತ್ತಾನೆ. ನೋಡುವುದೇನು? ಪೃಥ್ವಿ ಯಿಂದ ಅವನಿರುವಲ್ಲಿಗೆ ಧೂಮರಾಶಿಯು ಒಂದು ಸೇತು ವೆಯೇ ನಿಂತಿದೆ. ಆಗವನ ಕೋಪಕ್ಕೆ ಪಾರವೇ ಇಲ್ಲ. ಶಿವನ ಫಣೆಗಣ್ಣು ಇವನ ಬಳಿಯಲ್ಲಿರುತಿದ್ದರೆ ಮೂಜಗವ ನ್ನು ಸುಟ್ಟುಬಿಡುವೆ ಎನ್ನುವಷ್ಟು ಸಿಟ್ಟುಬಂದಿತು ಕೋ

ಪಾಸ್ವಿತನಾದ ಅವನನ್ನು ಶಾಂತಗೊಳಿಸಲು ಅವನ ಸ್ವಪ್ನ ರಾಜ್ಯದ ಪತ್ನಿಯರಲ್ಲಿ ಒಬ್ಬರಾದರೂ ಬರಬೇಕೇ? ಇತ್ತ ಬ್ರಹ್ಮಚಾರಿಯ ಕೋಪ ತನ್ನಂತೆ ಶಾಂತವಾಗುವುದುಂಟೆ? ನಿದ್ರಾಭಂಗ ಒತ್ತಟ್ಟು, ಆಶಾಭಂಗ ಇನ್ನೊತ್ತಟ್ಟು, ಭೂಲೋಕದವರಿಂದ ಮಾನಭಂಗ ಮುನ್ನೊತ್ತಟ್ಟು ಗಡಿಬಿಡಿ, ಸಿಟ್ಟುಗಿಟ್ಟು, ಕೋಪತಾಪಗಳಲ್ಲಿ ಪಾದುಕಗಳನ್ನು ಸಹ ತೆಗೆದುಕೊಳ್ಳಲಿಲ್ಲ, ತನ್ನ ಶ್ರೇಷ್ಠಾಯುಧವಾದ ತಂಬೂರಿ ಬುರುಡೆಯನ್ನು ಹೆಗಲ ಮೇಲೆ ಹಾಕಿಕೊಂಡು ಹೊರಟನು. ಇವನ ನಿದ್ರಾಕಾಲದಲ್ಲಿ ಆ ತಂಬೂರಿಯ ಸರಿಗೆಗಳಿಗೆ ತುಕ್ಕುಹಿಡಿದು ಅವುಗಳು ಮಾಯವಾಗಿದ್ದುವು ಆದರೆ ಅದನ್ನೆಲ್ಲಾ ಸಜ್ಜುಗೊಳಿಸಿ ಹೊರಡುವಷ್ಟು ತಾಳ್ಮೆಯೆಲ್ಲಿ; ಆ ಧೂಮರಾಶಿಯಲ್ಲಿ ಕಣ್ಣನ್ನು ಹಿಚುಕಿಕೊಂಡು ತಕ್ಷಣವೇ ಭೂಲೋಕಕ್ಕೆ ಬಂದನು ಬಂದಿಳಿದ ಸ್ಥಳವು ಆರ್ಯಾವರ್ತವಲ್ಲ; ಫ್ರಾನ್ಸುದೇಶವಾಗಿತ್ತು. ಪ್ರವೇಶಿಸಿದ ಮನೆಯು ಹರಿಶ್ಚಂದ್ರನ ಅರಮನೆಯಲ್ಲ; ಪ್ರೊ। ಶಾಪ್ಪ ಎಂಬ ವೈಜ್ಞಾನಿಕನ ಶೋಧನಾಲಯ. ಆಗವನು ಉದ್ದವಾದೊಂದು ನಳಿಕಾಯಂತ್ರದಲ್ಲಿ ತಾನು ಈಗ ತಾನೇ ಎಸೆದಿದ್ದ ಆ ಅಗ್ನಿಬಾಣವು ಮಂಗಲ ಗ್ರಹಕ್ಕೆ ಎಟುಕಿತೋ ಎಂಬ ನಿರೀಕ್ಷಣೆಯಲ್ಲಿದ್ದನು. ಆ ಧೂಮಪಂಕ್ತಿಯು ತಣಿದು ಶಾಂತವಾಗಿರಲಿಲ್ಲ. ಅದಾಗುವ ತನಕ ಇವನ ಕುತೂಹಲವೂ ಶಾಂತವಾಗುವ ಹಾಗಿಲ್ಲ. ಆದರೆ ತನ್ನ ಪ್ರಯೋಗವು ಏನಾಯಿತು ಎಂದು ತಿಳಿ

ಯುವುದರೊಳಗೆ, "ಭೋ ಮಾನವಃ" ಎಂಬ ಸಿಂಹ
ನಾದವು ಕೇಳಿಸಿತು. ನಾರದನು ಉದ್ದೀಪ್ತನಯನ
ನಾಗಿ, ಆರಿಸಿ ತಗೆದ ಗೀರ್ವಾಣವಾಕ್ಯಗಳಿಂದ ನಮ್ಮ
ವೈಜ್ಞಾನಿಕನನ್ನು ಒಂದೇ ಸವನ ಶಪಿಸತೊಡಗಿದನು.
ಅದರಿಂದ ಆ ವೈಜ್ಞಾನಿಕನು ಸುಟ್ಟು ಭಸ್ಮವಾಗ
ಬಹುದು ಎಂದು ನಾರದನ ತಿಳುವಳಿಕೆ. ಆದರೆ ಕಲಿ
ಕಾಲದಲ್ಲಿ ದೈವವಾಣಿಗೆ ಎಲ್ಲಿನ ಬೆಲ? ಇವನ ಮಾತು
ಕಥೆ, ಉಡಿಗೆತೊಡಿಗೆ, ಹಾವಭಾವಗಳನ್ನೆಲ್ಲಾ ಕಂಡು
ಶಾಪ್ಪನು ಇವನೊರ್ವ ಹುಚ್ಚನಿರಬೇಕೆಂದು ನಕ್ಕು
ಬಿಟ್ಟನು. ಇವನ ಒದರುವಿಕೆಗೆ ಉತ್ತರವನ್ನು ಸಹ
ಕೊಡಲು ಹೋಗದೆ ತನ್ನ ವಿದ್ಯುತ್ ಘಂಟೆಯನ್ನು
ಬಾರಿಸಿದನು. ಸರಿ ಇಬ್ಬರು ಸೇವಕರು ತಕ್ಷಣವೇ
ಬಂದು ನಾರದನ ಕಿವಿಹಿಡಿದು ಹೊರಕ್ಕೆ ತಳ್ಳಿ ಕದವ
ನ್ನಿಕ್ಕಿಬಿಟ್ಟರು. ಪಾಪ, ನಾರದನು ಬೆಚ್ಚಿಬೆರಗಾಗಿ
ಬಿಟ್ಟ. ನಿದ್ರೆಹೋಗಿ ಏಳುವುದರೊಳಗಾಗಿ ಭೂಲೋಕ
ದಲ್ಲಿ ಇಷ್ಟೆಲ್ಲಾ ವಿಪರ್ಯಾಸವಾಗಿದೆಯೆಂದು ಅವ
ನಿಗೆ ಹೇಗೆ ತಿಳಿಯಬೇಕು? ಹಾಗೆಯೇ ಸಿಟ್ಟನ್ನು
ನುಂಗಿಕೊಂಡು ಒಂದೆರಡು ದಿನವೆಲ್ಲಾ ಇಡೀ ಯುರೋ
ಪ ಖಂಡವನ್ನು ಸುತ್ತಿದನು. ಇವನನ್ನು ಕಂಡವರೆಲ್ಲ
ಇವನೊರ್ವ ಹುಚ್ಚನಿರಬೇಕೆಂದು ನಕ್ಕರು ನಾರದ
ನಿಗೆ ಎಂದೂ ಸಹಿಸದಷ್ಟು ಅವಮಾನವಾಯಿತು.
ಅಂಥಂಥ ದಾನವರೂ ಕೂಡ ಅವನನ್ನು ಅವಹಾಸ್ಯ
ಮಾಡಿದವರಲ್ಲ ಈಗ ಮಾನವರಿಂದ ಮೋರೆಮುಸಿ

ಮಾಡಿಕೊಳ್ಳಲು ಎಂಥಾ ನೋವಾಗಲಿಕ್ಕಿಲ್ಲ! ಈ ದುಃಖಶಮನಕ್ಕೆಂದು ಆರ್ಯಾವರ್ತದ ಕಡೆಗೆ ಕಾಲಿಕ್ಕಿದನು. ಯುರೋಪಿನವರಿಗೆ ತನ್ನ ಗೀರ್ವಾಣ ಭಾಷೆಯು ತಿಳಿಯದಿದ್ದುದರಿಂದ ಹೀಗಾಯಿತೆಂದೂ, ಆರ್ಯಾವರ್ತದಲ್ಲಿ ತನಗೆ ಸಂಭಾವನೆ ದೊರಕಬಹುದೆಂದೂ ಅವನ ಊಹೆ. ಅಂತೆಯೇ ಅವನು ಮೊದಲನೆಯ ಹೆಜ್ಜೆಗೆ ವಾರಣಾಸಿಯಲ್ಲಿ ಬಂದಿಳಿದನು. ಆದರೆ ಅಷ್ಟೊಂದು ದೀರ್ಘಕಾಲದಲ್ಲಿ ಅದೆಷ್ಟು ರೂಪಾಂತರವನ್ನು ಹೊಂದಿರಲಿಕ್ಕಿಲ್ಲ ಹೀಗಾಗಿ ಅದೇ ಆ ನಗರವೆಂದು ನಿಶ್ಚಯಪಡಿಸಲು, ಪ್ರಥಮಾವೃತ್ತಿಗೆ ಭೇಟಿಯಾದ ಒಬ್ಬ ಮಹಾನುಭಾವನನ್ನು—'ಕಿಂ ಇಯಂ ವಾರಣಾಸೀ?' ಎಂದು ಪ್ರಶ್ನೆಮಾಡಿದನು. ಆತನು ಐರೋಪ್ಯರಂತೆ ಇವನ ಉಡಿಗೆಯನ್ನು ಕಂಡು ನಗಲಿಲ್ಲ; ಇತ್ತ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಆಗ ನಾರದನು ಇನ್ನೂ ಒಂದೆರಡು ಮಂದಿಯನ್ನು ಕೇಳಿದನು; ಅವರೂ ಹಾಗೇ ಮಾಡಿದರು. ಕೊನೆಗೊಬ್ಬನು—"This is Benares" ಎಂದನು. ತಾನು ವಾರಣಾಸಿಯೇ ಎಂದುದಕ್ಕೆ ಇವನು 'ಬೆನಾರಿಸ್' ಎಂದು ಅಣಕಿಸುತ್ತಿರಬೇಕು ಎಂದು ತಿಳಿದು ಇನ್ನು ಮುಂದೆ ಯಾರೊಡನೆಯೂ ಮಾತನಾಡುವುದಿಲ್ಲ ಎಂಬ ದೃಢನಿಶ್ಚಯಮಾಡಿ ತಾನೇ ನದೀತೀರಕ್ಕೆ ಹೋದನು ನದಿಜಲವನ್ನು ಕಂಡು ಅದು ಭಾಗೀರಥಿ ಎಂದು ಅವನಿಗೆ ನಿಶ್ಚಯವಾಯಿತು. ನದಿದಂಡೆಯಲ್ಲಿ ಕೆಲವರು ಜಪಸಂಕಲ್ಪಗಳನ್ನು

ಮಾಡುತ್ತಿರುವುದನ್ನು ಕಂಡು ಅದು ವಾರಣಾಸಿ ಎಂದು ನಿಶ್ಚಯಿಸಿದನು ಅಷ್ಟರಲ್ಲಿಯೇ ಮತ್ತೊಬ್ಬ ಬ್ರಾಹ್ಮಣನು "ಗೋದಾವರೀತೀರೇ" ಎನ್ನುವುದನ್ನು ಕಂಡು ದಿಗ್ಭ್ರಾಂತಿ ಯುಂಟಾಯಿತು. ಇತ್ತ ಉದ್ಬುದ್ಧ ಸಂಸ್ಕೃತ ಮಂತ್ರಗಳನ್ನು ಪಠಿಸುತ್ತಿದ್ದ ಬ್ರಾಹ್ಮಣರು ಇವನ ಕೆಲವು ಗೀರ್ವಾಣ ಭಾಷೆಗಳಿಗೆ ಉತ್ತರಕೂಡ ಲಾಗದಿದ್ದುದನ್ನು ಕಂಡು ಇವರು ಆ ದೈವಭಾಷೆಯು ನ್ನು ಮರೆತಿರುವರೆಂದು ನಿಶ್ಚಯಪಡಿಸಿಕೊಂಡು ಹೋದನು. ಇಂತಹ ಹಲವು ವಿಚಿತ್ರ ಅನುಭವಗಳು ಆ ನಗರದಲ್ಲಿ ಉಂಟಾದುವು ಅಲ್ಲಿಂದ ಅವನು ಉತ್ತರ ದಕ್ಷಿಣ ಹಿಂದುಸ್ಥಾನಗಳ ಯಾವತ್ತು ನಗರಕ್ಷೇತ್ರಗಳನ್ನೂ, ನದಿಗಳನ್ನೂ, ಗುಡ್ಡಬೆಟ್ಟಗಳನ್ನೂ ಸುತ್ತಿದನು ಕಲವರೊಡನೆ ತಾನು ನಾರದನೆಂದು ಬಾಯ್ಬಿಟ್ಟು ಹೇಳಿದನು. ಅವರು ನುಳ್ಳೆಂದು ನಕ್ಕರು. ಒಂದು ಕಾಲದಲ್ಲಿ ನಾರದನೆಂದರೆ ಓಡೋಡಿ ಬಂದು ನಮಸ್ಕರಿಸುತ್ತಿದ್ದ ಆರ್ಯಾವರ್ತದ ಜನರು ಈಗ ಇವನ ಮೇಲೆ ಉದಾಸೀನರಾದುದನ್ನು ಕಂಡರೆ ಅವನಿಗೆಷ್ಟು ಸಂಕಟವಾಗಲಿಕ್ಕಿಲ್ಲ. ರೇಗಿದನು; ಸಿಟ್ಟಾದನು; ಶಪಿಸಿದನು; ಜ್ವಲಿಸಿದನು; ಎಲ್ಲಾ ಅವನಷ್ಟಕ್ಕೆ ಬಡವನ ಸಿಟ್ಟು-ಕೇಳುವವರಾರು? ಒಬ್ಬಂಟಿಗನಾಗಿ ಮಾನವರ ಹೆಮ್ಮೆ ಮುರಿಯುಲು ಅಸಾಧ್ಯವೆಂಬುದಾಗಿ ತಿಳಿದು ವೈಕುಂಠಕ್ಕೆ ಹೋಗಿ, 'ಭೋ ಸ್ವಾಮಿನ್' ಎಂದು ಉದ್ದಂಡ ನಮಸ್ಕರಿಸಿದನು. ವೈಕುಂಠವನ್ನೆಲ್ಲ ತನ್ನ ಕಣ್ಣೀರಿ

ನಿಂದ ತೊಯಿದುಬಿಟ್ಟನು. ಆ ಅಶ್ರುಪ್ರವಾಹದಲ್ಲಿ ಲಕ್ಷ್ಮಿಯ ಕಾಲು ಒದ್ದೆಯಾಗಿ ಅವಳು ಎಚ್ಚೆತ್ತು ನಾರದನನ್ನು ಕಂಡು ಅವನ ದುಃಖದಿಂದ ತಾನೂ ಕರಗಿ ನೀರಾಗಿ, ಅದೇನೋ ಆಪತ್ತು ಬಂದಿದೆಯೆಂದು ಗಡಿಬಿಡಿಯಿಂದ ಪತಿಯನ್ನು ಎಚ್ಚರಮಾಡಲು ಮುಂದಾದಳು. ಅವನೇಳುವದರೊಳಗಾಗಿ ಮಾನವ ಕೋಟಿಯ ನೂರಾರು ವರ್ಷಗಳು ಸಂದುವು. (ಆದರೆ ಅದು ದೇವರಿಗೆ ಒಂದು ಕ್ಷಣ ಕಾಲಮಾತ್ರ) ಶ್ರೀಮನ್ನಾರಾಯಣನು ನಾರದನ ಫಿರ್ಯಾದಿಗೆ ಅಷ್ಟೊಂದು ಗಮನವಿತ್ತಂತೆ ಕಾಣುವುದಿಲ್ಲ. ಆದರೆ ನಾರದನು "ದೇವಾ, ಆರ್ಯಾವರ್ತದಲ್ಲಿ ಕಲಿಯುಗದ ಚತುಷ್ಪಾದವೇ ಬಂದುಬಿಟ್ಟದೆ. ಯದಾ ಯದಾಹಿ ಧರ್ಮಸ್ಯ.... ಎಂಬ ನಿನ್ನ ವಾಣಿಯನ್ನು ಪೂರ್ಣಗೊಳಿಸುವ ಕಾಲವಿದು" ಎಂದು ಮೊರೆಯಿಟ್ಟನು. ಆಗ ವಿಷ್ಣುವು ಬಳಿಯಲ್ಲಿರುವ ಪಂಚಾಂಗವನ್ನು ನೋಡುತ್ತಾ ನ ...ಇನ್ನೂ ಕಲಿಯುಗದ ಪ್ರಥಮ ಪಾದವು ಸಂದಿಲ್ಲ. ಆದರೆ ನಾರದನು ಅನ್ನುವನು --"ದೇವಾ ಇಷ್ಟೊಂದು ಅಲ್ಪ ಅವಧಿಯಲ್ಲಿಯೇ ಭೂಮಿಯು ನಮ್ಮ ಅಧಿಕಾರದಿಂದ ತಪ್ಪಿಹೋಗಿ ಮಾನವನ ಬೊಗ್ಗಸೆಗೆ ಬಿದ್ದಿತು. ಪುನರವತಾರಕ್ಕೆ ಚತುಷ್ಪಾದಗಳು ಬರಬೇಕೆಂದು ನೀನು ಕಾದುಕುಳಿತಿರುವುದಾದರೆ, ಅಷ್ಟರಲ್ಲಿ ಈರೇಳು ಲೋಕಗಳು, ಸ್ವತಃ ನಿನ್ನ ವೈಕುಂಠವೂ ಅವರ ಸಾಹಸಕ್ಕೆ ಬಲಿಯಾಗಬಹುದು. ಆದುದರಿಂದ ಈಗಲೇ ನಿನ್ನ ಕಲ್ಕಿ ಭೂಮಿ

ಕೆಯನ್ನು ಹೊರಡಿಸು" ಎಂದು ಬಿನ್ನವಿಸಿಕೊಂಡನು. ತನ್ನ ಆಗ್ರಹದಿಂದಲೇ ವಿಷ್ಣುವು ಒಡಂಬಡಲಾರನೆಂದು ತನ್ನ ಯಾವತ್ತು ಅನುಭವಗಳನ್ನು ಅವನ ಮುಂದೆ ಮನವರಿಕೆ ಮಾಡಿಕೊಂಡನು ವಿಷ್ಣುವಿಗೆ ಅವನ್ನು ನಂಬುವುದೇ ಕಷ್ಟವಾಯಿತು ಆದರ ನಾರದನು—ಒಮ್ಮೆ ಸತ್ಯ ಹೇಳುವವನಲ್ಲವಾದರೂ, ಸುಳ್ಳು ಹೇಳುವವನಲ್ಲ. ಅವನೆಂದುದು ನಿಜವಾಗಿದ್ದರೆ ತಾನು ಅವತರಿಸಲು ಕಾಲಬಂದಿದೆಯೆಂದು ತಿಳಿದನು ಆದರೆ ಪೂರ್ವಯೋಚಿತ ಕಲ್ಕ್ಯವತಾರವು ಕೆಲಸಕ್ಕೆ ಬಾರದೆಂಬುದು ಖಂಡಿತ. ಮಾನವರ ವಾಯುವಿಮಾನದ ಮುಂದ ಇವನ ಬಿಳಿ ಕುದುರೆಯು ಏನು ಮಾಡೀತು!

ಮುಂದೆ ಏನು ಮಾಡುವುದೇ ಇರಲಿ--ಕಾಳಗವೋ, ಅವತರಣವೋ, ಸಂಧಾನವೋ-ಯಾವದಾಗ ಬೇಕಾದರೂ, ಮಾನವೀ ಪ್ರಪಂಚದ, ಇದಕ್ಕೂ ಸ್ಪಷ್ಟ ಚಿತ್ರವು ಬೇಕಿತ್ತು. ಅದಿಲ್ಲದೆ ಯುದ್ಧಕ್ಕೆ ಹೋಗುವುದಾದರೆ ಸೋಲು ನಿಶ್ಚಯ. ಅದಕ್ಕೋಸ್ಕರವಾಗಿ ನಾರದ, ವಿಷ್ಣು, ಲಕ್ಷ್ಮಿ ಈ ಮೂವರು ಸೇರಿ ಹೊಸತೊಂದು ಯೋಜನೆಯನ್ನು ಹುಡುಕಿದರು. ಈ ಕಾರ್ಯವನ್ನು ಮಾಡಲು ಸ್ವರ್ಗದಿಂದ ದೇವತೆಗಳ ಪರವಾಗಿ ದೈವೀ ವಿಚಾರಣಾಸಮಿತಿಯು (Divine Commission) ಹೋಗಬೇಕೆಂದು. ಈ ಸಮಿತಿಯ ಸದಸ್ಯರಾರು, ಅವರ ಕಾರ್ಯಕ್ರಮವೇನು, ಅವರ ವಿಚಾರಣೆಯ ಫಲಿತವೇನು, ಇವುಗಳನ್ನು ನಮಗೆ ತಿಳಿ

ದಷ್ಟರ ಮಟ್ಟಿಗೆ ವಿವರಿಸುವುದೇ ನಮ್ಮೀ ಗ್ರಂಥದ ಉದ್ದೇಶ.

ಇದನ್ನು ಯಾರಾದರೂ ಕಟ್ಟುಕಥೆಯೆಂದು ತಿಳಿಯಬೇಡಿ ಒಮ್ಮೆ ಇದು ಕಟ್ಟುಕಥೆಯಾದರೂ ನಂಬುವುದಕ್ಕಸಾಧ್ಯವಲ್ಲ. ಕಾರಣ ಎಂಥೆಂಥಾ ಕಟ್ಟುಕಥೆಗಳನ್ನು ನಂಬುವ ಪೌರಾಣಿಕರಿಗೂ, ಈಗಿನ ವರ್ತಮಾನಗಳನ್ನು ಓದುವ ಮಹಾನುಭಾವರಿಗೂ, ಅದು ಕಷ್ಟದ ಕೆಲಸವಲ್ಲ. ಅಂತು ಮಾನವನ ಸ್ವಾತಂತ್ರ್ಯದ ಮೇಲ ಬಂದ ಪ್ರಶ್ನೆಯೆಂಬುದರಿಂದ ಯಾವತ್ತು ಪ್ರಾಪಂಚಿಕರು ಈ ವರದಿಯನ್ನು ಅತಿ ಹೆಚ್ಚಿನ ಕುತೂಹಲದಿಂದ ಹಾರೈಸುವರೆಂದು ನಮ್ಮ ನಂಬುಗೆ.

---

## ಪ್ರಕರಣ ೨

# ದೇವಸಮೂಹದಲ್ಲಿ.

ವಿಷ್ಣುವಿಗೆ ನಾರದ ಮುನಿಯ ಮಾತುಗಳಿಂದ ಸಮಾಧಾನವಾದುದು ನಿಜ, ಹಾಗೆಂದು ಭೂಲೋಕದ ಪರಿಸ್ಥಿತಿಯನ್ನು ಪರಿಶೀಲಿಸಲು ಒಂದು ಕಮಿಟಿಯನ್ನು ಕೂಡಿಸಿ ಅದನ್ನು ಕಳುಹುವ ನಿರ್ಣಯಮಾಡಿದ್ದಾಯಿತು. ಆದರೆ ಸಮಿತಿಯಲ್ಲಿ ಯಾರಾರಿರಬೇಕು, ಅವರು ಮಾಡಬೇಕಾದ ಕರ್ತವ್ಯಗಳೇನು, ಯಾವಾವ ವಿಷಯಗಳಲ್ಲಿ ಮಾತ್ರ ಅವರು ಮಾನವರ ವರ್ತನೆಗಳ ಟೀಕ ಟಿಪ್ಪಣಿಗಳನ್ನು ಮಾಡಲು ಉದ್ಯುಕ್ತರಾಗಬೇಕು,

ಎಂಬ ವಿಚಾರಗಳನ್ನು ನಿರ್ಣಯಿಸುವುದು ಸಾಧ್ಯವಿಲ್ಲ. ಆದರೆ ನಾರದನು,—'ವಿಷಯುಗಳೊಂದನ್ನೂ ಬಿಡದಂತೆ ನರರ ಪರೀಕ್ಷೆ ಆಗಲೇ ಬೇಕು–ಎಂಬುದರಲ್ಲಿ ಹಟವಾರಿ ಯಾಗಿರುವನು ಆಗ ಸ್ವಾಮಿಯೇ ಹೇಳಿದನು — 'ನಾರದಾ, ನೀನೇ ಹೇಳುವಿ, ನರಲೋಕದ ಜನರು ಉದ್ಧಟರಾಗಿರುವರೆಂದು. ಇಂತಿರಲು ನಾವು ಅವರ ಪ್ರತಿಯೊಂದು ವ್ಯವಹಾರದಲ್ಲೂ ಕೈಹಾಕುವ ನಿರ್ಧಾರ ಮಾಡಿದರೆ, ಆಗ ಅವರು ನಮಗೆ ಕಾಲಿಡಲು ಸಹ ಅವಕಾಶ ಕೊಡಲಾರರು. ಆದ ಕಾರಣ, ನಾವು ನಮ್ಮ ಮತ್ತವರ ಸಂಬಂಧದ ಕಲವೊಂದು ವಿಷಯಗಳಲ್ಲಿ ಮಾತ್ರ ಕೈಹಾಕಬೇಕೇ ಹೊರತು ಪ್ರತಿಯೊಂದು ವಿಚಾರದಲ್ಲಿಯೂ ಪ್ರಭುತ್ವನನ್ನು ತೋರಿಸಬಾರದು; ನಾವು ಪ್ರಭುಗಳು ನಿಜ, ಆದರೆ, ದಾಸರಾದವರಿಗೂ ಸ್ವಲ್ಪವಾದರೂ ಸ್ವಾತಂತ್ರ್ಯ ಬೇಕಲ್ಲವೇ?''–ಎಂದನು. ನಾರದನು, ಮನವೊಪ್ಪಿಯೋ ಒಪ್ಪದೆಯೋ, ಸುಮ್ಮ ನಾದನು. ಮೇಲಿನ ಯಾವತ್ತು ಕಾರ್ಯಕ್ರಮಗಳ ನಿರ್ಧಾರದ ಬಗ್ಗೆ ಒಂದು ಮಹಾಸಭೆಯನ್ನು ಜರುಗಿಸ ಬೇಕಾಯಿತು. ಅದಕ್ಕ ಯಾವತ್ತು ದೇವತೆಗಳೂ ಸೇರಬೇಕಂದೂ ಮತ್ತು ಅದೊಂದು ವಿಶೇಷ ಅಧಿವೇ ಶನ (Special Sessions) ವಾದುದರಿಂದ, ತೀವ್ರ ಜರುಗಿಸಬೇಕಂದೂ ನಿಶ್ಚಯವಾಯಿತು. ಕಂಸಾಸು ರನ ನಾಶಕ್ಕೂ ಅಥವ ಜನ್ಮಕ್ಕೂ ಪೂರ್ವದಲ್ಲಿ–ಅವನ ನಾಶವನ್ನು ಹೇಗೆ ಮಾಡಬೇಕು, ಯಾರು ಮಾಡ

ಬೇಕು, ಎಂಬ ವಿಚಾರಗಳನ್ನು ತರ್ಕಿಸಲು ಇಂಥದೊಂದು ಸಭೆಯು ಸೇರಿತ್ತು. ಅಲ್ಲಿಂದ ಇಲ್ಲಿಯ ತನಕ ಬೇರಾವ ಸಭೆಗಳೂ ನಡೆದಿರಲಿಲ್ಲ. ನಾರದನೇ ಎಲ್ಲರಿಗೂ ಆಮಂತ್ರಣ ಕೊಡಲು ದೇವತೆಗಳ ಮನೆ ಮನೆ ಸುತ್ತಿದನು. ಅವರಲ್ಲಿ ಹಲವರು ಇನ್ನೂ ನಿದ್ರೆಯಲ್ಲೇ ಇದ್ದರು. ಆದರೆ ಹಟಮಾರಿ ನಾರದನು ಕೇಳಬೇಕೇ? ಅವರ ಕಿವಿ ತೂತಾಗಿ ಅದರೊಳಗೆ ತನ್ನ ಕಂಠಧ್ವನಿ ಕುಳಿತುಕೊಳ್ಳುವ ತನಕ ಸ್ವರಾಪಸ್ವರಗಳೆರಡನ್ನು ಕೂಡಿಸಿ "ನಾರಾಯಣ, ನಾರಾಯಣ" ಎಂದು ಕಿರುಚ ತೊಡಗಿದನು. ಹಾಗೂ ಅವರನ್ನೆಚ್ಚರಿಸಿ, ಸುದ್ದಿ ತಿಳಿಸಿದನು. ಕೇಳಿ ಅವರಿಗೆ ನಡುಕು ಹುಟ್ಟಿತು 'ನರರಿಂದ ಇಂಥ ಆಘಾತ ಬಂದಿತೇ' ಎಂದು ಅತ್ಯಂತ ಆಶ್ಚರ್ಯ ಪ್ರದರ್ಶನದಿಂದ ಕೆಲವು ದೇವತೆಗಳು ಬಾಯಿಗಳನ್ನು ಹರಿದುಕೊಂಡರು. ಇನ್ನು ಕೆಲವರು ತಂತಮ್ಮ ನಿವಾಸಗಳಲ್ಲಿ ನಿದ್ರೆಯನ್ನು ಮಾಡಿರದಿದ್ದರೂ, ರಮಣಿಯರೊಡನೆ ಉಯ್ಯಾಲೆ ತೂಗುತ್ತಲೋ, ಗಾನಮೊದಲಾದ ವಿಲಾಸದಲ್ಲಿ ತೇಲುತ್ತಲೋ ಇದ್ದರು. ಅವರನ್ನು ಎಬ್ಬಿಸುವ ಆವಶ್ಯಕತೆಯು ನಾರದಗೆ ಬೀಳಲಿಲ್ಲ; ವಿಲಾಸಮಗ್ನರಾದ ಅವರ ಕಿವಿಗೆ ಅವನ ಮಾತು ಸರಿಯಾಗಿ ನಾಟಲಿಲ್ಲವಾದರೂ, ಅವರ ನಾರಿಯರು ಸೂಕ್ಷ್ಮಕರ್ಣಿಯರಾದ್ದರಿಂದ ಭಾರೀ ಆಪತ್ತಿನ ಸುದ್ದಿ ಕೇಳಿ, ತಮ್ಮೊಡನೆ ವಿಲಾಸಮಗ್ನರಾದ ಪತಿಯರನ್ನು ತಮ್ಮ ಬಳಿಯಿಂದ ತಳ್ಳಿ ಎಚ್ಚರಗೊಳಿಸಿದರು.

ನಾರದನು ಅಷ್ಟದಿಕ್ಪಾಲಕರನ್ನು ಆಮಂತ್ರಿಸಿದನು. ನಿರುದ್ಯೋಗಿಗಳಲ್ಲಿ ಶ್ರೇಷ್ಠರಾದ-ಗಂಧರ್ವ, ಕಿನ್ನರ, ಕಿಂಪುರುಷರು ಸುದ್ದಿಸಿಕ್ಕಿದೊಡನೆ ಹೊರಡುವ ನಿಶ್ಚಯ ಮಾಡಿದರು. ಇನ್ನು ನಾರದನ ಕಲಸವು ಪ್ರಸಿದ್ಧ ಮುನಿಮುನಿಗಳನ್ನು ಆಮಂತ್ರಿಸುವುದು. ಸಪ್ತಋಷಿಗಳನ್ನು ಕರೆದನು; ಆದರೆ ಮಧ್ಯ ಒಂದು ಭೀತಿಯುಂಟಾಗದೆ ಇರಲಿಲ್ಲ ಎಲ್ಲಾದರೂ ವಸಿಷ್ಠ ವಿಶ್ವಾಮಿತ್ರರು ತಮ್ಮ ತಮ್ಮ ಜಾಣ್ಮೆಯ ಸ್ಪರ್ಧೆಯಿಂದ ಕಾರ್ಯಕ್ರಮಕ್ಕೆ ವಿಘ್ನತರುವರೋ ಎಂದು. ಇನ್ನು ಶುಕ್ರಾಚಾರ್ಯರ ಮನೆಯ ಮುಂದೆ ಬಂದು ನಿಂತರೆ—ಒಳಗೆ ಹೋಗುವ ಸಾಹಸವಾಗಲಿಲ್ಲ ಕಾರಣ, ಅವರು ದಾನವರ ಗುರುಗಳು ಅವರ ಶಿಷ್ಯವರ್ಗಕ್ಕೆ ಮದ್ದರೆದವನು ಬಹುಮಟ್ಟಿಗೆ ನಾರದನೇ ಎಂದರೂ ಸಲ್ಲುವುದು. ಆದುವರಿಂದ ಅವನಿಗೆ ನಾರದನೇ ಮೊದಲಾದ ದೇವದೇವತೆಗಳ ಮೇಲೆ ತುಂಬಾ ಮುನಿಸು. ಆ ದ್ವೇಷವನ್ನು ತೋರಿಸಲು ಅವನೀಗ ತನ್ನ ಉಳಿದುದೊಂದು ಕಣ್ಣನ್ನು ನರರ ಸೇವೆಗರ್ಪಿಸುವನೋ ಎಂಬ ಭೀತಿ. ಆದರೆ ಸ್ವಾಮಿಯ ಅಪ್ಪಣೆಯಾಗಿತ್ತು— "ನಾರದಾ ಒಬ್ಬರನ್ನೂ ಬಿಡದೆ ಆಮಂತ್ರಿಸು,— ಎಂದು

ಅಂತು ಸಭಾದಿನವು ಬಂದಿತು. ಸಭೆಯು ಪ್ರೇಕ್ಷಕರಿಂದ ಕಿಕ್ಕಿರಿದು ಹೋಗಿತ್ತು; ಆದರೆ ಇನ್ನೂ ಬರುತ್ತಾರೆ-ಪಾಪ, ಒಬ್ಬರಿಬ್ಬರೇ-ಬರೇ ದೇವತೆಗಳ ಸಂಖ್ಯೆ

ಯೆ ಮೂವತ್ತುಮೂರು ಕೋಟಿ! (?) ! (?) ಇನ್ನು ಮುನಿಮುನಿಗಳೂ ಇರುವರು. ಅಂಥ ದೊಡ್ಡ ವೈಕುಂಠವು ದೇವ, ದೇವತೆ, ದೇವಾಧಿದೇವತೆಗಳಿಂದ ತುಂಬಿ ತುಳುಕಿತು ಮೊದಲು ಮೊದಲು ಅಲ್ಲಿ ಸ್ಥಳವು ಸಾಲದೆ ಹೋದುದರಿಂದ ವಿಷ್ಣುವು ತನ್ನ ಯೋಗಮಾಯಾ ಶಕ್ತಿಯಿಂದ ಕೂಡಲೆ ಭಾರಿಭಾರಿ ಸಭಾಸದನಗಳನ್ನು (auditoriums) ನಿರ್ಮಿಸಬೇಕಾಯಿತು. ಆದರೆ ಈ ಸಭಾರಚನೆಯ ಸುದ್ದಿಯು ನರಕ ಸ್ವರ್ಗಗಳಲ್ಲಿ ಕೋಲಾಹಲವನ್ನುಂಟುಮಾಡಿತು. ನಾರದನು ಯಮಧರ್ಮನಿಗೆ ಹೇಳಿಕೆ ಹೇಳಲು ಹೋಗಿದ್ದನು ಹಿಗ್ಗಿನಿಂದ ಬಾಯಿತೆರೆದು, ಅವನ ಮುಂದೆ—ಹಾಗಾಗಬೇಕು ಹೀಗಾಗಬೇಕೆಂದನು. ಅಷ್ಟೇ ಅಲ್ಲ—ಸೇಡನ್ನು ತೀರಿಸುವ ಉತ್ಸಾಹದಿಂದ ಯಮನೊಡನೆ—ಯಮಧರ್ಮ, ನಿನ್ನ ಕೆಲಸ ಇನ್ನೂ ವಿಶೇಷವಾಗುವುದು. ಕೂಡಲೆ ವಿಶ್ವಕರ್ಮನನ್ನು ಕರೆಯಿಸಿ ಭಾರಿ ಭಾರಿ ನವನರಕಗಳನ್ನು ಕಟ್ಟಿಸು ಮತ್ತು ನರರ ಈ ನವವಿಧಾನದ ಅನ್ಯಾಯಗಳಿಗೆ ಸರಿಯಾಗಿ ಹೊಸ ಬಗೆಯ ದಂಡನೆಗಳನ್ನು ಶೋಧಿಸು. ಭೂಲೋಕದ ರಸಾಯನ ಶಾಸ್ತ್ರಜ್ಞರನ್ನು, ತೀಕ್ಷ್ಣದ್ರಾವಕ (acids)ಗಳಲ್ಲಿ ಮುಣುಗಿಸಬೇಕು, ಭೌತಿಕ ವಿಜ್ಞಾನಿಗಳನ್ನು ವಿದ್ಯುತ್ತಿನಿಂದ, ತುಪ್ಪದಲ್ಲಿ ಹುರಿದಂತೆ ಹುರಿಯಬೇಕು ಹಚ್ಚೇನು—ಅವರವರ ನಾಗರಿಕತೆಗೆ ಸರಿಯಾದ ನಾಗರಿಕ ಶಿಕ್ಷೆಯೇ ಆಗಬೇಕು” ಎಂದನು.

ಆಗ ನರಕದಲ್ಲಿ ನರಳಿ ನರಳಿ ವಿಶ್ರಾಂತಿಯನ್ನು ಹೊಂದುತ್ತಿದ್ದ ಓರ್ವ ಪಾಪಿ ನರನು ಈ ಸುದ್ದಿಯನ್ನು ಕೇಳಿ ಒಮ್ಮೆಗೇ ತನ್ನ ಗೆಳೆಯರಿಗೆಲ್ಲಾ ತಿಳಿಸಿದನು. ಕೇಳಬೇಕೇ? ಕಾಡ್ಗಿಚ್ಚಿನಂತೆ ಅಲ್ಲಿ ಕ್ರಾಂತಿಯುಂಟಾಯಿತು ಆ ತಳಮಳದಲ್ಲಿ ಯಮದೂತರೂ ಸಹ ಗಡಿಬಿಡಿಗೊಂಡರು. ಚಿತ್ರಗುಪ್ತನು ದಪ್ತರನ್ನು ಕಟ್ಟಿ ಪಲಾಯನಮಾಡಿದನು. ಈ ಗುಲ್ಲನ್ನು ಕೇಳಿ ಅಲ್ಲಿಗೆ ನಾರದ ಯಮರುಗಳು ಓಡಿಬಂದರು ನಾರದಗೆ ತನ್ನ ಹರಕುಬಾಯಿಯಿಂದಿಷ್ಟಾಯಿತೆಂದು ತಿಳಿಯಲು ಅದಕ್ಕಾಗಿ ವ್ಯಸನಪಟ್ಟನು. ತನ್ನಿಂದಾದ ತಪ್ಪಿನಿಂದ ಮುಂದೆ ಈ ನರಕದ ಬಂದಿವಾನರು, ಪೃಥ್ವಿಯ ಗೆಳೆಯರೊಡನೆ ಸೇರಿದರೆ—ಮುಂದೇನು ಗತಿಯೆಂದು ಅಂಜಿ, ತಮ್ಮ ಸಮಿತಿಯು ನಿರ್ವಾಹವಾಗಿ, ನರದನುನವಾಗುವ ತನಕ, ಅವರನ್ನು ಗಾಢನಿದ್ರೆಯಲ್ಲಿ ಮುಣುಗಿಸಿಡುವುದು ಒಳಿತೆಂದು ಯಮನಿಗೆ ಸೂಚಿಸಿದನು ಆಗ ಯಮನು ನಕ್ಕು- "ನಾರದಾ, ಇವರು ಇಲ್ಲಿಂದ ತಪ್ಪಿಸಿಕೊಳ್ಳಲಾರರು" — ಎಂದನು ನಾರದನಂದನು—"ಯಮರಾಯಾ, ನರರೀಗ ವಿಮಾನವನ್ನು ಸಿದ್ಧಮಾಡುತ್ತಿರುವರು. ಒಂದು ದಿನ ನಿಮ್ಮ ಸ್ವರ್ಗ ನರಕಗಳನ್ನು ಹುಡುಕಿ ಬಂದಿವಾಸದಲ್ಲಿರುವ ತಮ್ಮ ಪೂರ್ವಜರನ್ನು ಅವರು ಬಿಡಿಸಿಕೊಳ್ಳದೆ ಹೋಗದಿರರು. ಆದುದರಿಂದ ಇವರನ್ನು ನಿದ್ರೆಯಲ್ಲಿ ಅಡಗಿಸಿಡುವುದೇ ಲೇಸೆಂದನು"

ಈಗ ಸಭೆಯು ಕಾರ್ಯಕ್ರಮಗಳ ವಿಚಾರ ನಾರದನು ಯೋಗ್ಯ ಕಾರ್ಯದರ್ಶಿಯಂತೆ ಎಲ್ಲಾ ಕಾರ್ಯಗಳ ಸೂತ್ರಧಾರಿಯಾದನು. ಆದರೆ, ಸಭಾರಂಭದಲ್ಲಿ ರಂಭೋರ್ವಶಿಯರ 'ಸಮಧರ ನಾಟ್ಯ'ವು ಬೇಕೆಂದು ಇಂದ್ರನ ಸೂಚನೆಯಾಯಿತು. ಸರಿ, ಗಂಧರ್ವ ಕಿನ್ನರ ಕಿಂಪುರುಷರು ಅದಕ್ಕೆ ಅನುಮೋದನೆಯಿತ್ತರು. ಆಗ ನಾರದನು ಸಿಟ್ಟಾಗಿ—"ಇದು ಇಷ್ಟು ದಿನಗಳ ಸಭೆಯಂತಲ್ಲ. ಇಂತಹ ಮುಖ್ಯ ವಿಷಯಗಳನ್ನು ಚರ್ಚಿಸಿ ಮುಗಿಸುವ ತನಕ ತಾವು ವಿಲಾಸದ ಚಿಂತನೆ ಮಾಡಬಾರದೆ"ಂದನು. ಅಧ್ಯಕ್ಷ ಸ್ಥಾನವನ್ನಲಂಕರಿಸಿದ ಚತುರ್ಮುಖನು ಇದಕ್ಕೆ ಒಡಂಬಡುವುದರಲ್ಲಿದ್ದನು. ಮಧ್ಯ, ಶುಕಮುನಿಯು—'ವೈಕುಂಠವನ್ನು ನಾಟ್ಯಶಾಲೆಯನ್ನಾಗಿ ಮಾಡುವುದು ಒಳಿತಲ್ಲ' ಎಂದನು. ಅದಕ್ಕೆ ಹಲವು ಮುನಿಗಳ ಸಮ್ಮತಿಯು ಸಿಕ್ಕಿತು. ಆದರೆ ಇಂದ್ರನು—"ಇಲ್ಲಿ ನಮ್ಮ ಸಂಖ್ಯೆಯು ಬಹಳವಾಗಿದೆ. ಆದುದರಿಂದ ನಮ್ಮ ಮಾತಿಗೆ ಬೆಲೆಯಿಲ್ಲವೆ?" ಎಂದನು. ನಾರದನು ಅಂಜಿದನು; ಎಲ್ಲಾದರೂ ಈ ವಾದದ ದೆಸೆಯಿಂದ ತಮ್ಮಲ್ಲಿ ಆರಂಭಕ್ಕೇ 'ಎರಡು ಪಂಗಡಗಳಾಗುವುವೇ— ಎಂದು. ಆ ನಾರದನ ವ್ಯಥೆಯನ್ನು ಮನಗಂಡ ಭೈರವನು—'ನರ್ತನವು ಬೇಕಾದರೆ ಇರಲಿ, ಆದರೀಗ ವಿಲಾಸಿ ನರ್ತನವಿರದೆ, ಕಾರ್ಯಾತ್ಮಕ ನರ್ತನವಾಗಲಿ. ಹೇಗೂ ನಾವಿರುವೆವು, ನಮ್ಮ ಶಿವನಿರುವನು. ಅವನು ತನ್ನ ತಾಂಡವವನ್ನಾಡದೆ ಎಷ್ಟೋ ವತ್ಸರಗಳು

ಸಂದಿವೆ. ಈಗ ನಮಗೊಂದು ವ್ಯಾಸಂಗವಾಗಲಿ' ಎಂದನು. ಇಂದ್ರನು 'ಊಂ' ಅನ್ನುವವನಿದ್ದ. ಆದರೆ ಶಿವನ ಹೆಸರನ್ನು ಕೇಳಿ, ಅವನ ಫಣೆಗಣ್ಣಿಗೆ ಅಂಜಿ ಸುಮ್ಮನಾದ. ಸರಿ–ಭೃಂಗಿ, ಶೃಂಗಿ ಮೊದಲಾದವರನ್ನು ಕೂಡಿ ಶಿವನ ತಾಂಡವವಾಯಿತು— ಆದರೆ ಬಳಿಯಲ್ಲಿ ಹಿಮ್ಮೇಳ ಸಮ್ಮೇಳಗಳನ್ನು ಹಿಡಿದ ಗಂಧರ್ವರು ತಮ್ಮನಷ್ಟಕ್ಕೆ— "ಏನೋ ಅಪ್ಪ—ಅಲ್ಲಲ್ಲಿ ತಾಳತಪ್ಪುತ್ತಿದೆ" ಅಂದರಂತೆ.

ಸರಿ ಈಗ ಸಭಾರಂಭ ವಿಷ್ಣುವಿನ ಸ್ವಾಗತ ಭಾಷಣವಾಯಿತು ಸ್ವಾಗತ ಭಾಷಣದಲ್ಲಿ ವಿಶೇಷವೇನಿದ್ದಿಲ್ಲ–ಅಂತು ಸಾರಾಂಶ ಹೇಳುವುದಾದರೆ–"ಇಷ್ಟೊಂದು ದೀರ್ಘಕಾಲದ ಬಳಿಕ, ನಮ್ಮನ್ನು ಸಭೆಸೇರುವಂತೆ ಮಾಡಿದ ಕಾರಣವು ವಿಷಾದಕರವಾದರೂ, ನೆರೆದುದೆಂಬುದು ಆಹ್ಲಾದಕರವೇ ಸರಿ. ನನಗಾದರೂ ನಿಮ್ಮೆಲ್ಲರನ್ನು ತಿರುಗಿ ನನ್ನ ವೈಕುಂಠದಲ್ಲಿ ಸ್ವಾಗತೀಕರಿಸಲು ಅತ್ಯಂತ ಆನಂದವಾಗುತ್ತದೆ. ಇಂದಿನ ಕಾರ್ಯ ವಿಶೇಷವನ್ನು ಕುರಿತು ನಾನು ಹೆಚ್ಚಿಗೆ ಹೇಳುವ ಆವಶ್ಯಕತೆಯಿಲ್ಲ. ನಮ್ಮ ಆಜೀವ ಕಾರ್ಯದರ್ಶಿ ನಾರದನೇ ಅದನ್ನು ಹೇಳುವನು–ನೀವಾದರೂ ಚೆನ್ನಾಗಿ ಯೋಚಿಸಿ ನಿಮ್ಮ ನಿಮ್ಮ ಅಭಿಮತಗಳನ್ನು ಕೊಡಬೇಕೆಂದು ನನ್ನ ಆಗ್ರಹ"— ಎಂದಿತ್ತು.

ಆ ಬಳಿಕ ಸ್ವಾಭಾವಿಕವಾಗಿ ಅಧ್ಯಕ್ಷರ ಭಾಷಣ. ವಿಧಾತನು ತನ್ನ ನಾಲ್ಕು ಮುಖಗಳನ್ನು ನಾಲ್ಕು ದಿಕ್ಕುಗಳಿಗೂ ತಿರುಗಿಸಿಕೊಂಡು, ನಾಲ್ಕು 'ಲೌಡ್ ಸ್ಪೀಕರು'

ಗಳಂತೆ ತನ್ನ ಚಿಕ್ಕ ಭಾಷಣವನ್ನು, ನಾಲ್ಕು ಸುತ್ತಲಿನ ಆ ಜೀವನಸ್ತೋಮಗಳಿಗೆ ಕೊಟ್ಟನು. ಅಧ್ಯಕ್ಷರ ಭಾಷಣವು ಸ್ವಾಗತಾಧ್ಯಕ್ಷರ ಭಾಷಣಕ್ಕಿಂತ ಚುಟುಕಾಗಿತ್ತು. ನಿಜವಾಗಿ ಅಖಿಲಭಾರತ ರಾಷ್ಟ್ರೀಯ ಸಭಾಧ್ಯಕ್ಷರ ಭಾಷಣವನ್ನು ಕೇಳಿದ ಯಾವನೇ ಆದರೂ ಹೇಳುತ್ತಿದ್ದನು:—ಬ್ರಹ್ಮನು ಆ ಪದವಿಗೆ ಎಂದೆಂದೂ ತಕ್ಕವನಲ್ಲವೆಂದು. ಅದಕ್ಕಾಗಿ, ಬ್ರಹ್ಮನು ಬಹಳ ಮಾತಾಡಲು ಬಯಸಲಿಲ್ಲ. ನರಲೋಕದವರ ದುಡುಕುತನವನ್ನು ಹೆಚ್ಚು ಒತ್ತಿ ಹೇಳಿದರೆ ಅವನಿಗೇ ಅಪಮಾನ. ಅವನ ಸೃಷ್ಟಿಯ ಕೊರತೆಯನ್ನು ಅವನೇ ಹೇಳಿದಂತಲ್ಲವೆ! ಆದುದರಿಂದ ಅವನು—'ಎಲ್ಲವನ್ನೂ ನಾರದನು ಬಣ್ಣಿಸುವನು'—ಎಂದು ಮುಗಿಸಿದನು

ಸರಿ — ನಾರದನು ಉಪನ್ಯಾಸವನ್ನು ತೊಡಗಿದನು, ಆರಂಭದಲ್ಲಿ 'ನಾರಾಯಣ ನಾರಾಯಣ' ಎಂದು ಹಾಡಿ ಉಪನ್ಯಾಸ ಮೊದಲುಮಾಡಿದನು ಮೊದಲಿನ ಶಬ್ದವನ್ನು ಹೇಳಬೇಕೆಂದು ಮೋರೆ ಎತ್ತುವಾಗಲೇ ನೋಡಿದನು: ಕಿಡಿಕಿಡಿಯಾದ ಶಿವನ ಮೋರೆಯನ್ನು! ಆತನ ಸೂಕ್ಷ್ಮಬುದ್ಧಿಗೆ ಕೂಡಲೆ ಹೊಳೆಯಿತು--ಇದು ಬರೇ ನಾರಾಯಣನೊಬ್ಬನನ್ನು ಹೊಗಳಿ ಅವನ ಸುದ್ದಿಯೆತ್ತಿದ್ದುದಕ್ಕೆ— ಎಂದು. ಅವನಿದುವರೆಗೆ ಹರಪರ ಹಾಡನ್ನು ಹಾಡಿದವನಲ್ಲ. ಆದರೆ ಇಂದು ತನ್ನ ಕಾರ್ಯಕ್ಕಾಗಿಯೇ ಎಲ್ಲರೂ ಸೇರಿದಂತಿರುವುದರಿಂದ— ಉಪಾಯಗಾಣದೆ 'ಹರವರ ಗುಣಗಾನ' ಎಂದನು. ಆಗ

ತಂಬೂರಿಯ ಝೇಂಕಾರವಿನ್ನೂ ಆರಿರಲಿಲ್ಲವಾದುದ
ರಿಂದ ಅದು ಒಂದೇ ಹಾಡಿನಂತೆ ಕಂಡಿತು. ಶಿವ
ರಾಯನ ಸಿಟ್ಟು ಶಾಂತವಾಯಿತು. ಇನ್ನು ಬ್ರಹ್ಮನಿಗೆ–
'ಮಾನ್ಯ, ಚತುರ, ವಿವೇಕಿ, ವಿದ್ವತ್ ಪರಿಪೂರ್ಣ,
ಸೃಷ್ಟಿಕರ್ತ ಚತುರ್ಮುಖಾ' – ಎಂಬ ಸಂಬೋಧನೆ
ಯಿಂದಲೇ, ಸಂತಸವಾಯಿತು. ಆ ಬಳಿಕ ನಾರ
ದನು ನೆರೆದ ದೇವಗಣವನ್ನುದ್ದೇಶಿಸಿ, ಮೊದಲಾಗಿ
ಅವರ ಆಗಮನಕ್ಕಾಗಿ ಧನ್ಯವಾದಗಳ ಹೊರೆಯನ್ನರ್ಪಿ
ಸಿದನು. ಆಗ ಬಂದವರೆಲ್ಲರೂ ಹಸನ್ಮುಖಿಗಳಾದರು.
ಬಳಿಕ ನಾರದನು ಒಂದೊಂದಾಗಿ ಬಿಡಿಸಿ ಹೇಳಿದನು –
ಭೂಲೋಕದಲ್ಲಿನ ವಿಚಾರಗಳನ್ನು. 'ಆದರೆ ತಾನು ಹೋ
ಗಿದ್ದೆ, ತನಗೆ ಮಂಗಳಾರತಿಯಾಯಿತು' ಎಂದು ಮಾತ್ರ
ಹೇಳಲಿಲ್ಲ. ಹೇಗೂ ಆ ವಿಚಾರ ಬಲ್ಲವರಿಗೆ ಗೊತ್ತು;
ಸುಮ್ಮನೆ ಉಳಿದವರಿಗೆ ಹೇಳಿ ಏಕೆ ನಗಿಸಿಕೊಳ್ಳಬೇಕೆಂದು
ಮರೆಯಾಗಿರಿಸಿದನು. ಅಂತು ಬಹುಹೊತ್ತಿನ ತನಕ
ನರಲೋಕದವರ ನಡೆಯನ್ನೆಲ್ಲಾ ಖಂಡಿಸಿ ಉರುಳಿಸಿ
ಬಿಟ್ಟನು. ಮಧ್ಯೆಮಧ್ಯೆ "ಶ್ರೇಷ್ಠರಾದ ದೇವತೆಗಳೇ,
ಮುನಿಜನರೇ, ನಿಮಗಿದು ಅಪಮಾನವಲ್ಲವೇ" ಎಂದು
ಅವರ ಅಭಿಮಾನವನ್ನು ಚುಚ್ಚುತ್ತಲೂ ಇದ್ದನು. ಉಪ
ನ್ಯಾಸದ ಆದಿಯಲ್ಲಿ "ನಿಜವಾಗಿಯೂ ಶಿವರಾಯನು ತನ್ನ
ತೃತೀಯ ನಯನವನ್ನು ತೆರೆದರೆ ಯಾರಿಗೂ ಪ್ರಯಾಸ
ವಿಲ್ಲ" ಎಂದನು. ಆದರೆ ಅಧ್ಯಕ್ಷರು 'ಆ ಮಾತು ಅಪ್ರಾ
ಸಂಗಿಕವಾದುದದೆಂದೂ ತಮ್ಮ ಸಭೆಯು, ಇಂದು ಕೇವಲ

ವಿಚಾರಣಾಸಮಿತಿಯನಿರ್ಮಾಣಕ್ಕಾಗಿ ಕೂಡಿದ್ದೇಂದೂ ಅಂದರು ನಾರದನು ಸುಸ್ಮುನಾದನು. ಬ್ರಹ್ಮನಿಗೆ—ತನ್ನ ಸೃಷ್ಟಿಯನ್ನು ಎಳೇವಯಸ್ಸಿನಲ್ಲಿ ಶಿವನಿಗೆ ಬಲಿಯಾಗಿಸಲು, ಮನಸ್ಸು ಬರಲಿಲ್ಲ. ಶಿವನೂ ತಾನು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವನ್ನೆಸೆಯಲಾರೆ, ಎಂದಂದುಕೊಂಡನು.

ಉಪನ್ಯಾಸವಾದ ಬಳಿಕ ನಾರದನು ಸುತ್ತನೋಡುತ್ತಾನೆ: ನೂರಾರು ಮಂದಿ ಋಷಿ ಸಂತಗಳು ನಿದ್ರೆಯಿಂದ ತೂಕಡಿಸುತಿದ್ದರು. ಹಲವರು ಅಂಜಿಕೆ, ಆಶ್ಚರ್ಯಗಳಿಂದ ಮೈಮರೆತಿದ್ದರು. ಕೆಲವರು ಸಿಟ್ಟಿನ ಆವೇಷದಿಂದ ಉಗುರಿಸಿಂದ ಹಣೆ ಪರಿದುಕೊಂಡು ತಾವೇ ತ್ರಿನೇತ್ರಿಗಳಾಗಿದ್ದರು

ವಿಧಾತನು 'ಇನ್ನು ಈ ವಿಷಯದಲ್ಲಿ ಇತರರ—ಉಪನ್ಯಾಸಗಳಿವೆಯೇ' ಎಂದು ಕೇಳಿದನು. ಆಗ ಶುಕ್ರಾಚಾರ್ಯನು ಎದ್ದು ವೇದಿಕೆಯನ್ನು ಸಮೀಪಿಸಿದನು. ನಾರದನಿಗೆ ಪ್ರಸವವೇದನೆಯೇ ಆರಂಭವಾಯಿತು. ಶುಕ್ರನು ಬಂದವನು—"ಸಜ್ಜನರೇ, ನಾರದನೊಬ್ಬನ ಮಾತಿನ ಮೇಲಿಂದ ನರರ ಮೇಲೆ ಮುನಿದು ಬೀಳುವುದು ಸರಿಯಲ್ಲ. ನಾರದನು ಭೂಲೋಕಕ್ಕೆ ಹೋಗಿ, ಪಿಕಲಾಟ ಎಬ್ಬಿಸಿದುದರಿಂದ ಅವಮಾನಿತನಾಗಿ ಬಂದಿರಬೇಕು. ಅದರ ಸೇಡನ್ನು ತೀರಿಸುವ, ಅವನೊಬ್ಬನ ಹವಣಿಕೆಗಾಗಿ, ನಾವೆಲ್ಲ ನಮ್ಮ ಕಷ್ಟಾರ್ಜಿತ ವಿಶ್ರಾಂತಿಯನ್ನು ಕೆಡಿಸಿಕೊಳ್ಳುವುದು ಮೂರ್ಖತನ" ಎಂದನು

ಸಭಿಕರು:—'ದ'ಕಾರದ ಬದಲು 'ಮ'ಕಾರ ವನ್ನು ಹಿಂಬಾಲಿಸುವ ಯೋಚನೆಯೇ?

ಬ್ರಹ್ಮ:— ಈಗ ವಿಚಾರಣಾಸಮಿತಿಯನ್ನು ಮಾಡಲು ನಾವು ಸೇರಿದುದು. ಆ ಸಮಿತಿಯವರು, ನರರ ಮೇಲೆ ಮುಂದರಿಸುವುದು ಬೇಡವೆಂದು ತಮ್ಮ ವಿಚಾರಣೆಯ ಅನುಭವದಿಂದ ಹೇಳುವುದಾದರೆ ಖಂಡಿತವಾಗಿಯೂ ಬೇಡ. ಆದರೆ ಈಗಲೇ ಬೇಡವೆನ್ನುವುದು ಸರಿಯಲ್ಲ. ವಿಷ್ಣುವಿನ ಆಜ್ಞೆಯಾದುದರಿಂದ ಈ ಸಮಿತಿಯ ರಚನೆಯಾಗಲೇಬೇಕು. ಆದಕಾರಣ, ಸಮಿತಿಯ ಸದಸ್ಯರಾರಾಗಬೇಕು, ಕರ್ತವ್ಯಗಳೇನು— ಎಂದು ನಿರ್ಣಯಿಸುವುದಿಷ್ಟೇ ನಮ್ಮ ಕೆಲಸ.

(ಆದರೆ ಬ್ರಹ್ಮನಿಗಾದರೂ ಇದು ದ್ವಿದಳರಾಜ್ಯ ಪದ್ಧತಿಯೆಂದು ತಿಳಿದಿತ್ತು.)

ಸಭಿಕರು:— ನಿಜ, ನಿಜ.

ಶುಕ್ರಾಚಾರ್ಯ.— (ಆತ್ಮಗತ) ಇದು ನಿರಂಕುಶ ಪ್ರಭುತ್ವವಾಯಿತು.

ಆದರೆ ಬಡ ಶುಕ್ರಾಚಾರ್ಯನ ಬೆಂಬಲಕ್ಕೆ ಯಾರೂ ಬರಲಿಲ್ಲ. ಸಭೆಯವರು ಒಂದೊಂದಾಗಿ ವಿಷಯಗಳನ್ನು ಸೂಚಿಸಿದರು. ಭೂಲೋಕದವರ— ಧರ್ಮ, ಆರೋಗ್ಯ, ವಿದ್ಯೆ, ಆರ್ಥಿಕ ಸ್ಥಿತಿ ಇಷ್ಟು ವಿಚಾರಗಳಲ್ಲಿ ವಿಚಾರಣಾಸಮಿತಿಯವರು ಕೆಲಸಮಾಡಬೇಕೆಂದು ನಿರ್ಣಯವಾಯಿತು. ನಾರದನಿಗೆ ಎರಡನೇ ಮತ್ತು ನಾಲ್ಕನೇ ವಿಷಯಗಳನ್ನು ಸೇರಿಸಿದ್ದು ಒಳಿತಲ್ಲ ಎಂದು

ತೋರಿತು. "ಮುಖ್ಯವಾಗಿ ಈ ಸಮಿತಿಯ ಕೆಲಸವು ಅವರ ಕಲ್ಯಾಣ ಚಿಂತನೆಗಾಗಿ ಮಾಡಿದುದಲ್ಲ. ಅವರು ನಮ್ಮ ಅಧಿಕಾರವನ್ನು ಮೀರಿದ ವಿಷಯದಲ್ಲಿ ಅವರನ್ನು ಹೇಗೆ ದಂಡಿಸಬಹುದೆಂಬ ವಿಷಯದಲ್ಲಷ್ಟೇ ನಮ್ಮ ಕೆಲಸ"— ಎಂದನು.

ವಿಷ್ಣು :— ನಾರದಾ, ಅತ್ಯಾತುರವು ಕೆಟ್ಟದ್ದು. ನಮ್ಮ ಉದ್ದೇಶವು ಏನಿದ್ದರೂ ಅದನ್ನು ತಿಳಿಸುವುದು ಒಳಿತಲ್ಲ. ನಾವು ಅವರನ್ನು ನಮ್ಮ ತಕ್ಕಡಿಯಲ್ಲಿ ತೂಗಲು ಬಂದವರೆಂದು ಅವರಿಗೆ ತಿಳಿದರೆ ಅವರು ನಮ್ಮೊಡನೆ ಮಾತನಾಡಲಾರರು. ಆದುದರಿಂದ ಕೇವಲ ಅವರ ಕಲ್ಯಾಣಕ್ಕಾಗಿಯೇ ಬಂದವರೆಂದು ತೋರಿಸಿಕೊಳ್ಳ ಬೇಕು. ನೋಡು, ನಾನು ಅಂದು ಮೋಹಿನೀ ರೂಪ ತಾಳಿ, ನನ್ನ ಉದ್ದೇಶ ತಿಳಿಸಿದ್ದರೆ, ಭಸ್ಮಾಸುರನ ನಾಶ ವಾಗುತ್ತಿತ್ತೇ?

ಸಭಿಕರು:— ಭೇಷ್, ಭೇಷ್.

ಈಶ್ವರ:—(ಸಪ್ಪಗಿನ ಮೋರೆ.)

ಶುಕ್ರ:— (ಆತ್ಮಗತ ಕೋಪ.)

ವಿಷ್ಣು :—ನಾರದಾ, ನೋಡು 'ಆರೋಗ್ಯ'ದ ಖಾತೆ ಯಲ್ಲಿ ಮದ್ಯಪಾನ ವಿಚಾರವೂ ಬರುವುದು. ಅದು ನೀತಿಗೆ ಸಂಬಂಧಿಸಿದ್ದು. ಇನ್ನು ಆರ್ಥಿಕ ವಿಚಾರ ಬೇಡೆಂದರೆ, ನಾನು ಸ್ವತಃ ಲಕ್ಷ್ಮೀಪತಿ.

ನಾರದ:— ಮಾತುಶ್ರೀಯವರಿಗೆ ಈ ಬಾಲಕ ನಿಂದ ಅಪಮಾನವಾಗದು. ಆಗಲಿ, ಸಭಾ ಕಾರ್ಯ

ಕ್ರಮವು ಮುಂದರಿಯಲಿ. ಯಾರಾರು ಯಾವಾವ ಕಲ
ಸವನ್ನು ವಹಿಸಿಕೊಳ್ಳಬೇಕು?

ವಿಷ್ಣು:—ಧರ್ಮದ ವಿಚಾರಕ್ಕಾಗಿ ಮೂವರು—ಯಮರಾಯ.

ನಕ್ಷತ್ರಿಕ:—ನಮ್ಮ ವಿಶ್ವಾಮಿತ್ರರು.

ವಿಶ್ವಾಮಿತ್ರ:—(ಹರುಷ.)

ಭಾರದ್ವಾಜ:—ವಿಶ್ವಾಮಿತ್ರರ ಅತಿಗಾಮಿತ್ವವನ್ನು ಸರಿಪಡಿಸಲು ವಸಿಷ್ಠರ ಮಂದಗಾಮಿತ್ವವು ಬೇಕು

ಸಭಿಕರು:—ವಹವ್ವಾ, ವಹವ್ವಾ—

ಅಧ್ಯಕ್ಷ:—ಹಾಗಾದರೆ—ಈ ಉಪಸಮಿತಿಗೆ ಯಮರಾಯನು ಅಧ್ಯಕ್ಷ, ವಸಿಷ್ಠ ವಿಶ್ವಾಮಿತ್ರರು ಸದಸ್ಯರು.

ಸಭಿಕರು:—ಸರ್ವಸಮ್ಮತವಾದ ಒಪ್ಪಿಗೆ.

ಅಧ್ಯಕ್ಷ:—ವಿರೋಧಿಗಳು?

ಶುಕ್ರ:—ನಾನು.

ಸಭಿಕರು:—ಕೇವಲ ಸ್ವಾರ್ಥ.

ಅಧ್ಯಕ್ಷ:—ಬಹುಮತದಿಂದ ನಿರ್ಣಯವಾಯಿತು. ಇನ್ನೀಗ ಆರೋಗ್ಯ ಖಾತೆ—

ಚಂದ್ರ:—ಅಶ್ವಿನಿ ದೇವತೆಗಳು, ವರುಣ, ವಾಯುರಾಜ.

ಒಬ್ಬ ಮುನಿ:—ಅಶ್ವಿನಿ ದೇವತೆಗಳು ಔಷಧೀಶನ ಪ್ರೀತಿಯುವರು ನಿಜ; ಆದರೆ ನಿಜವಾದ ಆರೋಗ್ಯ ಸಿಗಲು ಔಷಧಿಯು ಬೇಡ. ವೈದ್ಯರ ಆವಶ್ಯ

ಕತೆಯು ಇಲ್ಲ. ವರುಣ, ಅಗ್ನಿ, ವಾಯು ಈ ಮೂವರು ಸಾಕು. ಇನ್ನು ಕೊನೆಯವರಿಬ್ಬರು ಅತಿ ಗಾಮಿಗಳು ಅದುದರಿಂದ ವರುಣರಾಯನು ಅಧ್ಯಕ್ಷ ತನಕ್ಕಿರಲಿ.

ಅಧ್ಯಕ್ಷ: — ಏನು ಎಲ್ಲರ ಒಪ್ಪಿಗೆಯೇ?

(ಅಶ್ವಿನಿ ದೇವತಗಳನ್ನು ಬಿಟ್ಟು ಎಲ್ಲರ ಒಪ್ಪಿಗೆ. ಆದರೆ ಅವರಾದರೂ ನಿರಕಾರಣೆ ಮಾಡದಿದ್ದುದರಿಂದ ರರಾವು ಸರ್ವಸಮ್ಮತದಿಂದ ಮಂಜೂರಾಯಿತು.)

ಅಧ್ಯಕ್ಷ: — ವಿದ್ಯಾವಿಚಾರದಲ್ಲಿ—

ನಾರದ: — ನಮ್ಮ ಮಾತುಶ್ರೀಯವರಾದ ಸರಸ್ವತೀ ದೇವಿಯವರೇ ಅಧ್ಯಕ್ಷರಾಗಬೇಕು

ಸಭಿಕರು: — ಸರಿಯಾಗಿ ಹೇಳಿದೆ, ನಾರದ.

ಅಧ್ಯಕ್ಷ: - ಆಯಿತು, ಆದರೆ ಇನ್ನುಳಿದವರು --

ವಸಿಷ್ಠ: — ವಾಲ್ಮೀಕಿಗಳು ಬೇಕೇ ಬೇಕು

ತರುಣ ಸನ್ಯಾಸಿಯೊಬ್ಬ: — ಶಂಕರಾಚಾರ್ಯರು.

ಇನ್ನೊಬ್ಬ: — ಮಧ್ವಾಚಾರ್ಯರು.

ಕಶ್ಯಪ: ಅವರದು ಕೇವಲ ಸಂಕುಚಿತ ಬುದ್ಧಿ. ದ್ವೈತಾದ್ವೈತದ ಕಲಹವು ಅವರಿಂದಲೇ ಆಯಿತು. ಅಷ್ಟೇ ಅಲ್ಲ ಅವರು ತೀರ ಅಪ್ರಬುದ್ಧರು ಇದರಿಂದ ಅವರಿಗೆ ಅಪಮಾನವೆಂದು ಯಾರೂ ತಿಳಿಯದಿರಲಿ. ಆದರೆ ಇಂಥ ಪ್ರಾಮುಖ್ಯ ವಿಷಯಗಳಲ್ಲಿ ನಾವು ಪ್ರಸಂಗವನ್ನು ಗಮನಿಸಬೇಕೇ ವಿನಹ ವ್ಯಕ್ತಿ ಪಕ್ಷಪಾತ ಮಾಡುವುದು ಸರಿಯಲ್ಲ. ನಿಮಗೆ ಇಷ್ಟವಿದ್ದರೆ ಕಲಾಕೋವಿದನೆಂದು

ವಿಶ್ವಕರ್ಮನನ್ನು ಒಯ್ಯುವುದಾದರೆ ನಮ್ಮ ಆಕ್ಷೇಪ ವಿಲ್ಲ. ಇವರೆಲ್ಲರು ನಮ್ಮ ಜನನಿಯ ನೇತೃತ್ವದಲ್ಲಿ ತಮ್ಮ ಕಾರ್ಯವನ್ನು ಸರಿಯಾಗಿ ನಿರ್ವಹಿಸಲು ಅಡ್ಡಿಯೇ ಇಲ್ಲ.

ಅಧ್ಯಕ್ಷ:—ಏನು? ಅನುಮತಿಯೇ, [ಎಲ್ಲರೂ ಮೌನವಾದುದನ್ನು ಕಂಡು) ಸರಿ ಅನುಮತಿ—ಇನ್ನು ಆರ್ಥಿಕ ಪ್ರಶ್ನೆ ಇದೇನು ಕಠಿಣದ್ದಲ್ಲ. ಲಕ್ಷ್ಮೀದೇವಿ ಯವರು ಅಧ್ಯಕ್ಷರು, ಅವರ ಬೆಂಬಲಕ್ಕಾಗಿ ಚಂದ್ರ ಮತ್ತು ಕುಬೇರರು ಸದಸ್ಯರು.

ಸಭಿಕರು:—ಅತ್ಯುತ್ತಮ ಚುನಾವಣೆ.

ಶುಕ್ರ:—[ಆ) ನೇಮಕ.

ಅಧ್ಯಕ್ಷ:—ಹಾಗೆಂದ ಬಳಿಕ—ಮುಖ್ಯ ಸಮಿತಿ ಯಲ್ಲಿ, ಆಯಾಯ ಉಪಸಮಿತಿಗಳ ಅಧ್ಯಕ್ಷರಾದ ಯಮಧರ್ಮ, ವರುಣ, ಸರಸ್ವತಿ, ಲಕ್ಷ್ಮಿಯರಿರು ವರು ಮತ್ತು ಈ ಸಭೆಗೆ ಇವರಲ್ಲೇ ಯಾರಾದ ರೊಬ್ಬರು ಅಧ್ಯಕ್ಷರಾದರೆ ಒಳಿತು.

ನಾರದ:—ಆ ಸಂಖ್ಯೆ ನಾಲ್ಕಿರಬಾರದು.

ಅಧ್ಯಕ್ಷ:—ಹಾಗಾದರೆ ಬೇರಿನ್ನೊಬ್ಬರು ಅಧ್ಯಕ್ಷ ರಾಗಬೇಕು. ಅಲ್ಲವೇ ನಾರದ?

ನಾರದ:—ಅಹುದು. ಆದರೆ ದೂರ್ವಾಸರು ಆಗ ಬಹುದು.

[ತನ್ನ ಒಲವಿನಂತೆ ಕಾರ್ಯಕ್ರಮ ಫಲಿ ಸಲು ಸಿಟ್ಟಿನ ಮೂರ್ತಿಗಳಾದ ಅವರೇ ತಕ್ಕವರೆಂದು

ಅವನಿಗೆ ಚೆನ್ನಾಗಿ ತಿಳಿದಿತ್ತು), ಆದರೆ ದೂರ್ವಾಸರ ಹೆಸರನ್ನು ಕೇಳಿ ಎಲ್ಲಾ ಕಡೆಯಿಂದಲೂ 'ಗುಜು ಗುಜು' ನಿನಾದವು ಹೊರಟಿತು. ಬ್ರಹ್ಮನಿಗೆ ಅಂಜಿಕೆಯಾಯಿತು — ದೂರ್ವಾಸರ ಸುದ್ದಿಯೆತ್ತಿ, ಬಳಿಕ ಅವರನ್ನು ಆರಿಸದಿದ್ದರೆ ಅವರ ಕೋಪಕ್ಕೆ ಮೂಜಗವೇ ಸುಡುವಂತಾಗಬಹುದು. ಆದ ನಿಮಿತ್ತ, ಹೇಗೋ ಹೇಗೋ ಸಭೆಯನ್ನು ಸಮಾಧಾನಪಡಿಸಿ ದೂರ್ವಾಸರನ್ನು ಅಧ್ಯಕ್ಷರನ್ನಾಗಿ ಮಾಡಿದರು, ನಾರದನು ಅದಕ್ಕೆ ಕಾರ್ಯದರ್ಶಿಯು ಆದರೆ ಅವನಿಗೆ ಮತವನ್ನು ಕೊಡುವ ಅಧಿಕಾರವಿರಬಾರದೆಂದು ಶುಕ್ರಾಚಾರ್ಯರ ಸೂಚನೆಯಾಯಿತು. ಪ್ರತಿಯೊಂದು ವಿಷಯದಲ್ಲಿ ಶುಕ್ರಾಚಾರ್ಯನನ್ನು ನೋಯಿಸಬಾರದೆಂದು ನಾರದನು ಸಮ್ಮತಿಸಿದನು. ಅದು ಗೌರವಕ್ಕೆ ಕಡಿಮೆಯೆಂದು ಅವನು ತಿಳಿಯದಿರಲಿಲ್ಲ; ಆದರೆ ಕಾರ್ಯವಾಸಿ ಕತ್ತೇ ಕಾಲು ಕಟ್ಟಲೂ ಸಿದ್ಧನಿರಬೇಕಲ್ಲವೇ?

ಇಷ್ಟಕ್ಕೆ ಅಂದಿನ ಕಾರ್ಯಕ್ರಮವಾಯಿತು. ಆದರೆ, ಒಂದು ಪ್ರಾಮುಖ್ಯ ಸಂಗತಿಯನ್ನು ಅವರು ಮರೆತಿದ್ದರು. ಈ ಸಮಿತಿಯವರು ಇದ್ದಕ್ಕಿದ್ದಂತೆ ಭೂಲೋಕಕ್ಕಿಳಿದರೆ ನಾರದನಿಗಾದ ಗತಿಯೇ ಪ್ರಾಪ್ತವಾದೀತು. ಆದುದರಿಂದ ಅವರಲ್ಲಿ ಯಾವನಾದರೊಬ್ಬನು ಭೂಲೋಕದಲ್ಲಿ ಮೊದಲಾಗಿ ಜನ್ಮತಾಳಿ, ಈ ದೇವದೂತ ಮಂಡಲದವರ ಆಗಮನಕ್ಕೆ ತಕ್ಕ ಪೂರ್ವರಂಗವನ್ನು ಕಲ್ಪಿಸಿ, ಅವರ ಕಾರ್ಯವು ಸುಗಮವಾಗುವಂತೆ

ಮಾಡುವುದವಶ್ಯವೆಂದು ನಿರ್ಣಯವಾಯಿತು. ಈ ಮಾತಿನ ಮಹತ್ವವು ಎಲ್ಲರಿಗೂ ಹೊಳೆಯಿತು ಆದರೆ ಅಂಥವರು ಯಾರು ಎಂದು ಕಸಿವಿಸಿ ನಡೆಯಿತು. ಬುದ್ಧನಿಂದ ಹಿಡಿದು ರಾಮಕೃಷ್ಣಪರಮಹಂಸರ ವರೆಗೆ ಹೆಸರುಗಳ ಸೂಚನೆಯಾಯಿತು ಸೂಚಿತರಾದವರಲ್ಲಿ ಎಲ್ಲರೂ ಅದು ತಮ್ಮಿಂದಾಗದು ಎಂದರು ಕೊನೆಗೆ- ಇನ್ನಾರೂ ಹೋಗಲು ಸಿದ್ಧರಿಲ್ಲವಾದರೆ ಶಿವನು ತಾನೇ ಆ ಕೆಲಸ ನಿರ್ವಹಿಸುವೆನೆಂದು ಹೇಳಿದನು. ಸಭಿಕರಿಗೆ ಆನಂದದಿಂದ ಹೊಟ್ಟೆ ಬಿರಿದುಹೋಯಿತು

ಆಗ ಇಂದ್ರನು ಎದ್ದು —'ಇನ್ನಾದರೂ ರಂಭೋರ್ವಶಿಯರ ನಾಟ್ಯಕ್ಕೆ ಆತಂಕವಿದೆಯೇ' ಎಂದು ಕೇಳಿದನು.

ಅಧ್ಯಕ್ಷ:— ನಿಜ, ಆದರೆ ಇಂದ್ರ, ಆಯಾಯ ಕೆಲಸವನ್ನು ಹೊತ್ತವರು ಅದರದರ ಸಿದ್ಧತೆಗಾಗಿ ಈಗಲೇ ಹೊರಡಬೇಕಾಗುವುದು ಆದ ನಿಮಿತ್ತ ಅವರು ಸಭೆಯಲ್ಲಿ ಇನ್ನೂ ಕಾದಿರಲಾರರು ಉಳಿದವರಿಂದ ನೀನು ತೃಪ್ತನಾಗುವಿಯಾದರೆ ಸರಿ, ನಮ್ಮ ಆಕ್ಷೇಪವಿಲ್ಲ. (ಅಷ್ಟರಲ್ಲಿ ಸಮಿತಿ, ಉಪಸಮಿತಿಗಳ ಸದಸ್ಯರು ಸ್ವಲೋಕಗಳನ್ನು ಸೇರಿ ಬಹಳ ಹೊತ್ತಾಗಿತ್ತು)

ಇಂದ್ರ:— ಅದಕ್ಕೇನು, ಉಳಿದವರಲ್ಲೇ ಸಾಕಷ್ಟು ಜನರಿರುವರು.

ಅಧ್ಯಕ್ಷ:— (ನಗುತ್ತ) ಹಾಗೆ, ನಾನೂ ಇರುವೆ—

ಇಂದ್ರ:— ಹಾಗಾದರೆ ನಮಗೇನು ಕಡಿಮೆ! ಸಮಿತಿಯವರು ತಮ್ಮ ಕೆಲಸ ಮುಗಿಸಿ ಬರುವ ತನಕ

ವೈಕುಂಠವೇ ನಮ್ಮದು. ಅಲ್ಲಿಯ ತನಕ 'ರಂಭೋರ್ವ
ಶಿಯರ ನಾಟ್ಯದಿಂದ ವೈಕುಂಠವು ರಮಿಸಲಿ.'

ಸರಿ ಆಗ ತೊಡಗಿದುವು— ಗಾನ, ನರ್ತನಗಳು.

---

## ಪ್ರಕರಣ ೩.

# ಸೂತ್ರಧಾರಿಯ ಜನುಮ.

ಶಿವನು ದೇವದೂತ ವಿಚಾರಣಾಸಮಿತಿಯ ಕಾರ್ಯಕ್ರಮಕ್ಕೆ ಅನುಕೂಲ ಕ್ಷೇತ್ರವನ್ನು ಕಲ್ಪಿಸುವ ನಿಮಿತ್ತ ತಾನು ಹೊರಡುವೆನೆಂದು ಉಮೇದುವಾರನಾಗಿ ನಿಂತುದೇನೋ ನಿಜ, ಆದರೆ ಆ ವಿಧಾನವನ್ನು ಹೇಗೆ ಸಾಧಿಸಬೇಕೆಂಬುದು ಅವನ ಭಸ್ಮಾಚ್ಛಾದಿತ ಮಿದುಳಿಗೆ ಹೊಳೆಯಲಿಲ್ಲ ಆದರೆ ಅವನಲ್ಲಿ ಜನ್ಮಸಿದ್ಧ ಕೊರತೆಯೊಂದಿದೆ. ಅವನು ಲಯಕರನು, ಸಿಟ್ಟಿನ ತವರುಮನೆ. ಹೀಗಾಗಿ ಎಲ್ಲಾದರೂ ಆರಂಭದಲ್ಲೇ ಕೋಪಕ್ಕೆ ಬಲಿಯಾಗಿ ಫಣೆಗಣ್ಣು ತೆರೆದರೆ 'ಕುಂಬಾರಗೆ ವರುಷ ದೊಣ್ಣೆಗೆ ನಿಮಿಷ' ಎಂಬ ನಾಣ್ಣುಡಿಯಂತಾಗಲುಬಹುದು. ತನ್ನ ಆ ಜ್ವಾಲಾಮುಖ ಪ್ರಕೃತಿಯನ್ನು, ನವವಿಧಾನದ ಪ್ರಾಪಂಚಿಕರಲ್ಲಿ ಕಾರ್ಯಸಾಧನೆಯಾಗುವತನಕ ಹೇಗೆ ಬೂದಿಯಲ್ಲಿ ಮರೆಯಾಗಿರಿಸಬೇಕೆಂಬುದು, ಸ್ವತಃ ಭಸ್ಮಧಾರಣೆ ಮಾಡಿದ ಅವನಿಗೆ ಹೊಳೆಯಲಿಲ್ಲ. ಆದಕ್ಕಾಗಿ ಅವನು ನಾರದನನ್ನು ಕರೆದನು. ಈ ಕೆಲಸಕ್ಕೆ ನಾರದನು

ತಕ್ಕ ವಕೀಲನೆಂದು ಅವನಿಗೆ ತಿಳಿದಿತ್ತು; ಕಾರಣ, ಹಿಂದೆ ದೇವದಾನವರ ಕಲಹದ ಕಾಲಗಳಲ್ಲಿ ವಿಷ್ಣು ವನ್ನು ಹಲವು ಬಾರಿ ಕಳಕ್ಕಿಳಿಸಿ(=ಅವತರಿಸುವಂತ ಮಾಡು)ದವನು ಅವನು. ಈಗಲಾದರೂ ಉಪಾಯಾಂ ತರದಿಂದ ತನ್ನನ್ನು ಕೈಲಾಸದಿಂದ ಇಳಿಸುವುದಕ್ಕಲ್ಲದಿದ್ದ ರೂ ಉರುಳಿಸುವುದಕ್ಕವನು ತಕ್ಕವನೆಂದು, ಸಭೆಯಿಂದ ತಾನೆದ್ದು ಹೊರಬರುವಾಗ, ಕಣ್ಸನ್ನೆಮಾಡಿ ಕರೆದು "ನಾರದಾ ಅಳಿದ ಊರಿಗೆ ಉಳಿದವನೇ ಗೌಡನೆಂದು ನಾನೀ ಕೆಲಸವನ್ನು ವಹಿಸುವೆನೆಂದುದು ನಿಜ; ಆದರೆ ನಾನು ಭೂಲೋಕದ ಯಾವ ದೇಶದಲ್ಲಿ ಅವತರಿಸಿದ ರೊಳಿತು, ನನ್ನ ಜನನೀಜನಕರಾರಾಗಬೇಕು, ನಾನು ಯಾವ ರೀತಿಯ ವೇಷವನ್ನು ಧರಿಸಬಹುದು"—ಎಂದು ಕೇಳಿದನು.

ನಾರದ:—ಕೈಲಾಸಪತಿ, ನಾನೊಬ್ಬ ಜಾಣನೆಂದು ನೀನು ನನ್ನಲ್ಲಿ ಯೋಚನೆ ಕೇಳಿದುದು ನಿಜ. ನಾನು ಈ ಮೊದಲು ವಿಷ್ಣುವಿಗೆ ಅವತರಣದ ವಿಚಾರದಲ್ಲಿ ಕಾಲಸ್ಥಳಗಳ ಅರಿವನ್ನಿತ್ತುದೂ ನಿಜ. ಆದರೆ ಅಂದಿನ ಪರಿಸ್ಥಿತಿಯು ಬೇರೆ, ಇಂದಿನ ಪರಿಸ್ಥಿತಿಯು ಬೇರೆ ಅಂದು ನಮಗೆ ಕೆಲವರಾದರೂ ಭೂಲೋಕದಲ್ಲಿ ನಮ್ಮ ಪಕ್ಷದವರೆನಿಸಿಕೊಳ್ಳುತ್ತಿದ್ದರು, ಆದರೆ ಇಂದಿನ ಪ್ರಸಂ ಗದಲ್ಲಿ, ಒಬ್ಬರೇ ಒಬ್ಬರು ಅಂಥವರು ಸಿಗರು ಅವರೊ ಡನೆಲ್ಲಾದರೂ. ನೀನು 'ನಾನು ಈಶ್ವರನೆಂದುದಾ ದರೆ' ಕೂಡಲೆ ನಿನ್ನನ್ನು ಹುಚ್ಚರ ಆಸ್ಪತ್ರೆಗೆ ಕಳುಹಿ

ಸುವರು. ಆದುದರಿಂದ ಅಲ್ಲಿ ಹೋದ ಬಳಿಕ ಹೇಗೆ ವರ್ತಿಸಬೇಕೆಂಬ ವಿಚಾರವು ಅಲ್ಲಿನ ಪರಿಸ್ಥಿತಿಯನ್ನು ಕಂಡೇ ಯೋಚಿಸಬೇಕಲ್ಲದೆ ಅದರ ಮೊದಲಲ್ಲ ಆದರೆ ಸ್ಥಳದ ವಿಚಾರ ನನ್ನ ಸೂಚನೆಯಿಷ್ಟಿದೆ. ಆರ್ಯಾವರ್ತವು ಎಂದಿನಿಂದಲೂ ನಿನ್ನ ಮತ್ತು ವಿಷ್ಣುಭಕ್ತರ ಲೀಲಾ ರಂಗವಾಗಿತ್ತು. ಇಂದು ಅಲ್ಲಿನ ಮನುಷ್ಯರಿಗೆ ನಿನ್ನ ಗುರುತು ಹತ್ತದೆಹೋದರೂ ಗುಡ್ಡಬೆಟ್ಟಗಳಾದರೂ ನೀನಾರೆಂದು ಗುರುತಿಸಿ, ಆಪತ್ಕಾಲದಲ್ಲಿ ನಿನಗೆ ಆಸರೆ ಯನ್ನು ನೀಡಬಹುದು ಬದಲು ಯುರೋಪ, ಅಮೇರಿಕ ಮೊದಲಾದ ದೇಶಗಳಲ್ಲೆಲ್ಲಾದರೂ ನೀನು ಹುಟ್ಟಿದರೆ, ಹುಟ್ಟಿದ ನಾಲ್ಕೇ ನಾಲ್ಕು ದಿನಗಳಲ್ಲಿ ನೀನು ಕಲಿಯುಗದ ಅಂತ್ಯವನ್ನು ತರುವೆ ಇನ್ನು ಜನ್ಮವೆ ತ್ತುವ ಕುಟುಂಬವಾವುದೆಂಬುದನ್ನು ಹೇಳಲು— ಅದೇ ಹಳೇ ಅಭಿಮಾನವೇ ನನ್ನ ಯೋಜನಯು ಭಂಡವಲು ಮುಖ್ಯವಾಗಿ ನೀನು ಎಲ್ಲಾದರೊಬ್ಬರ ಬ್ರಾಹ್ಮಣರ ಮನೆ ಯಲ್ಲಿ ಜನ್ಮವೆತ್ತು. ಬ್ರಾಹ್ಮಣರಿಗೆ ಇತರರಿಗಿಂತ ದೈವ ಭಕ್ತಿ ಹೆಚ್ಚು. ಆದರೆ ಇಂದು ಅವರಲ್ಲಿಯೂ ಜಾಣ ತನ ಸೇರಿದೆ. ಇನ್ನು ಬ್ರಾಹ್ಮಣರೆಂದರೆ- ಅಲ್ಲಿ ಮೊದಲಿ ನಂತೆ ಒಂದೇ ಒಂದು ಬ್ರಾಹ್ಮಣರ ವರ್ಗವಿಲ್ಲ. ಅವರಲ್ಲೀಗ ಗೌಡ, ಕಾಶ್ಮೀರಿ, ಮೈಥಿಲಿ, ದಖ್ಖಣಿ, ತೆಲುಗ, ಕರ್ಣಾ ಟಕ, ತಮಿಳ, ಸ್ಮಾರ್ಥ, ವೈಷ್ಣವ— ಇನ್ನೂ ತಿಳುವೆ ಯಾದರೆ— ಶಿವಳ್ಳಿ, ಕೋಟ, ಕಂದಾವರ, ಹವ್ಯಕ, ಸಾರಸ್ವತ, ಗೌಡಸಾರಸ್ವತ, ಶಿವ, ಸ್ಥಾನಿಕ, ವಿಶ್ವಕರ್ಮ,

ದ್ರಾವಿಡ, ಆದಿದ್ರಾವಿಡ, ಅನಾದಿದ್ರಾವಿಡ ಎಂಬ ಎಷ್ಟೆ ಷ್ಟೋ ವರ್ಗಗಳಿವೆ. ಅಂತು ಊಹೆಯ ಮೇಲೆ ಹೇಳುವು ದಾದರೆ ನೀನು ಉಡುಪಿಕ್ಷೇತ್ರದಲ್ಲಿಯಾವನಾದರೋರ್ವ ಬ್ರಾಹ್ಮಣನ ಮನೆಯಲ್ಲಿ ಜನ್ಮವೆತ್ತಿದರೆ, ಮುಂದೆ ಮೆಲ್ಲನೆ ಅಲ್ಲಿಂದ ನಿನ್ನ ಬೇರನ್ನು ನೂರಾರು ಕಡೆಗಳಲ್ಲಿ ಬಿಟ್ಟು ಹತ್ತಿಪ್ಪತ್ತು ವರುಷದಲ್ಲಿ—ನಮ್ಮ ವಿಚಾರಣಾಸಮಿತಿಯು ಬರಲು ತಕ್ಕ ಕ್ಷೇತ್ರವನ್ನು ಕಲ್ಪಿಸಬಹುದು."

ಶಿವನು ಆನಂದಿತನಾದನು. ಏನೂ ತಿಳಿಯದವ ನಿಗಿಂತ ಸ್ವಲ್ಪ ತಿಳಿದವನೋ, ಅಂಥವನಿಲ್ಲದಿದ್ದಲ್ಲಿ, ತಿಳಿದಂತೆ ತೋರಿಸಿಕೊಳ್ಳುವವನೋ, ಲೇಸಷ್ಟೆ. ಅಂತೆ ಯೇ, ಅವನು ದಕ್ಷಿಣ ಭಾರತದ ಪರಶುರಾಮ ತೀರದ ಉಡುಪಿಕ್ಷೇತ್ರವೆಂಬಲ್ಲಿ ಜನಿಸುವ ನಿಶ್ಚಯಮಾಡಿದನು. ಆದರೆ ಅದೇ ತೀರದಲ್ಲಿ 'ಗೋಕರ್ಣ' ಕ್ಷೇತ್ರವಿದೆಯೆಂದು ಅವನಿಗೆ ತಿಳಿದಿತ್ತು. ಅದು ಶಿವಕ್ಷೇತ್ರ; ಇದುವಿಷ್ಣುಕ್ಷೇತ್ರ. ಎಷ್ಟೆಂದರೂ ಶಿವನು ಶಿವನೇ. ಅವನ ಪ್ರೇಮವು ಗೋಪಣ್ಣ ಭಟ್ಟರಲ್ಲಿರುವುದಕ್ಕಿಂತಧಿಕವಾಗಿ, ವಕ್ರತುಂಡಾಚಾರ್ಯ ರೋ, ಹಯವದನಾಚಾರ್ಯರೋ, ಇವರ ಮೇಲೆ ಬೀಳುವುದುಂಟೆ? ಆದರೆ, ಹೆಡ್ಡರಿಗಿಂತ ಒಡ್ಡನುಲೇಸೆಂದು ಕಣ್ಮುಚ್ಚಿ ಉಡುಪಿಯಲ್ಲಿಯೇ ಹುಟ್ಟುವ ನಿಶ್ಚಯ ಮಾಡಿದನು. ಶಿವರಾಯನ ನವಜನ್ಮಭೂಮಿ, ಶೈಶವ, ಬಾಲ್ಯಾವಸ್ಥೆಗಳನ್ನು ಬಂಣಿಸುವುದು ತೀರ ಅವಶ್ಯ ವೆಂದು ನಿಮಗೂ ತೋರುವುದಿಲ್ಲವೆ?

* * * * * *

ಆ ಗಳಿಗೆಯು ಸಂತೋಷದ ಗಳಿಗೆಯೋ, ದುಃಖದ ಗಳಿಗೆಯೋ ತಿಳಿಯದು ಉಡುಪಿಯ ರಥ ಬೀದಿಯಿಂದ ಸ್ವಲ್ಪ ಪೂರ್ವಕ್ಕ ಒಂದು ಬ್ರಾಹ್ಮಣರ ಮನೆ. ಸುಮ್ಮನೆ ಬ್ರಾಹ್ಮಣರ ಮನೆಯೆಂದರಾಗದು– ಶಿವಳ್ಳಿ ಬ್ರಾಹ್ಮಣರ ಮನೆ. ಏಕಾದಶಿಯ ದಿನ. ನಮ್ಮ ಪದ್ಮನಾಭಾಚಾರ್ಯರು ಮನೆಯ ಪಡಸಾಲೆಯಲ್ಲಿ ಉದ್ದಕ್ಕೆ ಒಂದು ಕೊರಡಿನಂತೆ ಮಲಗಿರುವರು. ದೇಹ ದಲ್ಲಿ ಅಷ್ಟಿಷ್ಟಾದರೂ ಚಲನವಲನವಿಲ್ಲ; ಆದರೆ ಕೊರಡು ಸಜೀವದ್ದೆಂದು ತೋರಿಸಲು,ಮುಂಗಾರು ಮಳೆ ಯ ಕಪ್ಪೆಗಳ ನಿನಾದದ ಪ್ರತಿಧ್ವನಿಯು ನಮ್ಮ ಆಚಾ ರ್ಯರ ಮೂಗಿನ ಸೊಳ್ಳೆಗಳಿಂದಡರುತ್ತಿತ್ತು. ಆಚಾ ರ್ಯರು ಏಕಾದಶಿಯಾದುದರಿಂದ ಮಠದ ಊಟಕ್ಕೆ ಹೋಗಿದ್ದಿರಲಿಲ್ಲ. ಹಾಗೆ ಅವರು ಹೋಗುವವರಲ್ಲ ಪ್ರತಿ ತಿಂಗಳಿಗೆ ಎರಡು ದಿನಗಳಂತೆ ಅವರ ಮನೆಯ ಒಲೆಯು ಕಟ್ಟಿಗೆಯನ್ನು ಕಾಣುತ್ತಿತ್ತು. ಅಂಥ ದಿನವು ಇದೊಂದು. ಅವರಿಂದು ಬೇಗ ಸ್ವಲ್ಪ ಮೊಸರನ್ನ ವನ್ನುಂಡು, ಉಪವಾಸದ ಆಯಾಸದಿಂದ ಮಲಗಿ ನಿದ್ದೆಹೋಗಿದ್ದರು. ಮನೆಯಲ್ಲಿ ನಮ್ಮ ಆಚಾರ್ಯ ರಿಗೆ ಅವರ ಧರ್ಮಪತ್ನಿಯಲ್ಲದೆ ಇನ್ನಾರೂ ಗತಿಯಿ ದ್ದಿಲ್ಲ. ಆಚಾರ್ಯರ ವಯಸ್ಸು ಬರೇ ಅರವತ್ತರಷ್ಟಿರ ಬಹುದು. ಅವರದು ಮೂರನೆಯ ಮದುವೆಯಿದು. ಮೊದಲಿನ ಎರಡು ಹೆಣ್ಣುಮಕ್ಕಳು, ಮದುವೆಯಾಗಿ ಋತುಮತಿಯರಾಗುವ ತನಕ ತಂದೆಯಮನೆಯಲ್ಲಿ

ಯೇ ಇದ್ದುಕೊಂಡು ಆಚಾರ್ಯರ ಉಪದೇಶದಿಂದ, ಋತುಮತಿಯರಾದ ಬಳಿಕ ತವರುಮನೆಗೆ ಹೋದರು. ಅದರಿಂದ ಮೂರನೆಯು ಮದುವೆಯಾಗಬೇಕಾಯಿತು. ಈ ಹುಡುಗಿಯ ವಯಸ್ಸು ೧೬ ಇರಬಹುದು. ಅವಳನ್ನು ಆಚಾರ್ಯರು ಮದುವೆಯಾಗಿ ಎಂಟು ವರುಷಗಳಾದುವು. ಎರಡು ಮೂರು ವರುಷದಿಂದ ಹುಡುಗಿಯು ಗಂಡನ ಮನೆಯಲ್ಲೇ ಇರುವಳು. ಅವಳ ತಂದೆಯು ಮನೆಯುವರು ಅವಳನ್ನು ಹೆತ್ತ ಕೆಲವು ವರುಷಗಳಲ್ಲಿಯೇ ತವರುಮನೆಗೆ ಹೋದುದರಿಂದ ಇವಳು ಪತಿರಾಯರ ಸೇವೆಮಾಡುತ್ತಿದ್ದಳು. ಹುಡುಗಿಯ ಹೆಸರು ಕೃಷ್ಣವೇಣಿಯೆಂದು. ಕೃಷ್ಣವೇಣಿಗೆ ಹದಿನೆರಡನೆಯ ವಯಸ್ಸು ತುಂಬಿದಂದಿನಿಂದ ಆಚಾರ್ಯರಿಗೆ, ಅವಳಿನ್ನು ಪುತ್ರವತಿಯಾಗಲಿಲ್ಲವಲ್ಲಾ — ಅಪುತ್ರಸ್ಯ ಗತಿರ್ನಾಸ್ತಿಯಲ್ಲಾ — ಎಂಬ ಚಿಂತೆ ತೊಡಗಿತು. ಅವರಿಗೆ ಈ ಬಾಲಿಕೆಯನ್ನು — ವಿಧಿವತ್ತಾಗಿ, ಎಂದರೆ ಅಷ್ಟ ವರ್ಷಕ್ಕೇನೆ ವಿವಾಹಿತರಾಗಿದ್ದರು. ಅಂದ ಬಳಿಕ ಅದೇ ಶಾಸ್ತ್ರೋಕ್ತವಾಗಿ ಅವಳು ಹದಿನರಡನೆಯ ವಯಸ್ಸಿಗೆ ಗರ್ಭವತಿಯಾಗಬೇಕೆಂದು ಅವರ ನಿಶ್ಚಯ. ಅಂತು ಆಚಾರ್ಯರು ಸಿರೀಕ್ಷಿಸಿ, ಅವಳೀಗ ತನ್ನ ಹದಿನಾಲ್ಕನೆಯ ವಯಸ್ಸಿನಲ್ಲಿ, ಶ್ರೇಷ್ಠಮಠಗಳಲ್ಲೊಂದು ಮಠದ ಶ್ರೀಪಾದಂಗಳವರ ಆಶೀರ್ವಾದದಿಂದ ಗರ್ಭವತಿಯಾಗಿ ಇಂದಿಗೆ ಎಂಟು ತಿಂಗಳು ಸಂದುವು. ಆಕೆಯು ಈ ದಿನ ಹಾಗೂ ಹೀಗೂ ಕಷ್ಟ

ದಿಂದ ಅಡುಗೆ ಮಾಡಿ, ಮಧ್ಯಾಹ್ನ ೧೨ ಘಂಟೆಗೆ ಅಡುಗೆ ಮನೆಯಲ್ಲಿ, ಹೊಟ್ಟೆನೋವಿನಿಂದ ಉರುಳಾಡ ತೊಡಗಿ ದಳು ಹೊರಗೆ ನಮ್ಮ ಆಚಾರ್ಯರು ಮಲಗಿರುವ ರೆಂದೆವಷ್ಟೆ. ಒಳಗಿನಿಂದ ಆ ಬಾಲಿಕೆಯು ಪ್ರಸವ ವೇದನೆಯಿಂದ ಬೊಬ್ಬಿಡುತ್ತಿರುವಳು. ಆಚಾರ್ಯ ರಿಗೆ ಆಗಾಗ ಗದ್ದಲ ಕೇಳಿ ನಿದ್ರಾಭಂಗವಾಗುವುದು ಹೆಂಡತಿಯು ಕೂಗು ಕೇಳಿ ನಿದ್ದೆಹೋಯಿತೆಂದು— "ಯಾಕೆ, ಬೊಬ್ಬೆಹೊಡೆದು ಸಾಯುತ್ತೀಯೇ" ಎಂದು ನಾಲ್ಕಾರಾವೃತ್ತಿ ಗದರಿಸಿ ತಿರುಗಿ ಮಲಗುತ್ತಿದ್ದರು. ಈಗ, ಮಧ್ಯಾಹ್ನದ ಮೂರು ಘಂಟೆ ಸಮಯ, ಆಚಾರ್ಯರ ನಿದ್ದೆಬಿಟ್ಟಿತು. ಥಕ್ಕನೆ ಅವರಿಗೆ ನಶ್ಯದ ಸೀಸೆಯು ನೆನ ಪಾಗಿ, ಅವರು ಸೊಂಟಕ್ಕೆ ಕೈಹಾಕಿದರು. ಅದು ಅಲ್ಲಿದ್ದಿರಲಿಲ್ಲ ಆಗ ಅಧಿಕಾರವಾಣಿಯಿಂದ, 'ಓ ಇವಳೇ, ಇವಳೇ,' ಎಂದು ಕೃಷ್ಣವೇಣಿಯನ್ನು ಕೂಗಿ ಕೊಂಡರು. ಒಳಗಿಂದ ಪ್ರತಿಧ್ವನಿ ಬಾರದಿದ್ದುದನ್ನು ಕಂಡು, ತಾಳ್ಮೆಗೆಟ್ಟು,—'ನಡು ಮಧ್ಯಾಹ್ನ ಬಿದ್ದುಕೊಳ್ಳಲು ನಿನಗೇನು ಸಂಕಟವೇ?' ಎಂದು ಬೈದು—ಊಟಮಾ ಡಿದಲ್ಲಿ, ಅದನ್ನು ಬಿಟ್ಟಿರಬೇಕೆಂಬ ನೆನಪಿನಿಂದ ಒಳನುಗ್ಗಿದರು. ಹೊಸ್ತಿಲನ್ನು ದಾಟುವುದರೊಳಗೆ ಬಾಗಿಲ ಮೇಲ್ಭಾಗವು, ಇವರ ಹಣೆಗೊಂದು ಅಕ್ಷತೆ ಯನ್ನಿಡಿಸಿಬಿಟ್ಟಿತು. 'ಥೂ, ಹಾಳಾಗಿ ಹೋಗು'— ಎಂದು ಹೆಂಡತಿಗೆ ಮಂಗಳಾರತಿಮಾಡಿ ಅಡುಗೆ ಮನೆ ಯಲ್ಲಿ ಕಾಲಿಡುವಷ್ಟಕ್ಕೆ ಬೆಕ್ಕು ಕೂಗಿದ ಸದ್ದುಕೇಳಿ

ಸಿತು ಆ ದಿನ ಆಚಾರ್ಯರ ಮನೆಯ ಹಾಲನ್ನು ಸಂಜೆ ಉಪಾಹಾರಕ್ಕೆ ಬೇಕೆಂದು—ವಿಕ್ರಯಿಸದೆ ಮನ ಯಲ್ಲಿರಿಸುವಂತೆ ಹೆಂಡತಿಗೆ ಹೇಳಿದ್ದರು. ಬೆಕ್ಕಿನ ಕೂಗು ಕೇಳಲು ಆಚಾರ್ಯರ ಹೊಟ್ಟೆಗೆ ಬೆಂಕಿಯೇ ಬಿತ್ತು. "ಅಯ್ಯೋ ಹಾಳಾದವಳೇ, ಹಾಲನ್ನೆಲ್ಲಾ ಬೆಕ್ಕಿನ ಬಾಯಿಗೆ ಕೊಟ್ಟೆಯೇ" ಎಂದು ಮೂರನೆಯ ಘರ್ಜನೆಯನ್ನು ಮಾಡಿ—"ಛೂ, ಛೂ" ಎಂದು ಆವೇಶದಿಂದ ಒಳ ನುಗ್ಗಿ ನೋಡುತ್ತಾರೆ–ಏನೆನ್ನಲಿ ! ! ! ! ! ಬೆಕ್ಕಿನ ಮರಿಯ ಬದಲು–ಅಲ್ಲಿ ಒಂದು ಶಿವಳ್ಳಿ ಬ್ರಾಹ್ಮಣರ ಮರಿಯು ಕಿರುಚುತ್ತಿತ್ತು. ಬಳಿಯಲ್ಲಿ, ಕೃಷ್ಣವೇಣಿಯು ಮಲಗಿದ್ದಳು (ಕಣ್ಣು ಮುಚ್ಚಿ). ಇದನ್ನು ಕಂಡು ಆಚಾರ್ಯರಿಗೆ ಗಡಿಬಿಡಿಯಾಯಿತು. "ಹೌದೇ, ಹೀಗೆ ಸಮಯವಾಗಿದ್ದರೆ ನನ್ನನ್ನು ಕರೆಯಲು ಏನು ಸಂಕಟ ನಿನಗೆ"—ಎಂದು ಕೂಗಿ, ಅವಳನ್ನೆಬ್ಬಿಸಲು ಮೈ ಅಲುಗಾಡಿಸುತ್ತಾರೆ . . . . . ಆದರೆ ಅವಳು ಇವರ ಮೇಲಿನ ಸಿಟ್ಟಿನಿಂದ ಮೌನತಾಳಿ ತನ್ನೀ ರ್ವರು ಸವತಿಯರನ್ನು ಕಾಣಲು ತವರುಮನೆಗೆ ಹೊರಟುಹೋಗಿದ್ದಳು ಹೊಸ ಮರಿಯು ಮೂರು ವರುಷದ ಕೂಸಿನಷ್ಟು ಗಾತ್ರವಾಗಿತ್ತು. ಆಚಾರ್ಯರು ವ್ಯಥೆಯಿಂದ ತಪ್ತರಾಗಿ, ಮಗುವನ್ನು ಕೈಯಿಂದೆತ್ತಿ ಹಿಡಿದು ಕುಲಕುಲ ಅಲುಗಿಸಿ— "ಏ, ತಾಯ್ಗ ಡುಕಾ, ಹುಟ್ಟಿದ ಗಳಿಗೆಯಲ್ಲೆ ಮನಗೆ ಮಾರಿಯಾದೆ ಯಲ್ಲಾ, ನೀನಾದರೂ ಸಾಯುಬಾರದಿತ್ತೇ" ಎಂದ

ದನ್ನು ಆಶೀರ್ವದಿಸಿದರು ಇವರ ಕಿಡಿಕಿಡಿ ಕಾರುವ ನಯನಗಳನ್ನು ಕಂಡು ಮಗುವು ಕೆಂಪೇರಿ ಇನ್ನೊಮ್ಮೆ ಚೀರಿಬಿಟ್ಟಿತು. ಎಂಥ ಅಪೂರ್ವದ ಚೀರುವಿಕೆ! ಆಚಾರ್ಯರ ಹೊಟ್ಟೆಯೆಲ್ಲಾ ಆ ಕೂಗು ಕೇಳಿ ನಡು ಗಿತು; ಒಂದು ಖಂಡಿ ತೂಕದ ಉಕ್ಕಿನ ತುಂಡನ್ನೆತ್ತಿ ದಷ್ಟು, ಅಸ್ಥಿರ ಹಸ್ತಗಳಿಂದ, ಆ ಮಗುವನ್ನವರು ಕಸದ ಮೂಲೆಯಲ್ಲಿ ಬಿದ್ದಿದ್ದ ಒಂದು ಗೋಣಿಯ ಮೇಲೆ ಮಲಗಿಸಿಬಿಟ್ಟು—ನಾಲ್ಕು ಮಂದಿ ಗೆಳೆಯ ರನ್ನೂ, ಕಾಸಿಲ್ಲದೆ ಚಿಕಿತ್ಸೆ ಮಾಡಲೊಪ್ಪಿದರೆ ಒಬ್ಬ ಡಾಕ್ಟರನನ್ನೂ ಕರೆಯಲು ಓಡಿದರು 'ಕಾಸಿಲ್ಲದೆ'— ಎಂದರೆ ನಮ್ಮ ಆಚಾರ್ಯರು ಬಡವರೆಂದಲ್ಲ. ಹಾಗೆ ಆ ಊರಲ್ಲಿ ಬಹಳಮಂದಿ ಬಡ ಆಚಾರ್ಯರಿಲ್ಲ. ನಮ್ಮ ಆಚಾರ್ಯರಿಗೆ ಚಿಕ್ಕಂದಿನಲ್ಲಿ ಅವರ ಅಜ್ಜಿ ಹೇಳಿದ್ದ ಳಂತೆ— 'ಕೈಗೆ ಬಂದ ಕಾಸನ್ನು ಕಳೆದುಕೊಂಡವ ಲಕ್ಷ್ಮೀದೇವಿಯಿಂದ ದೂರಾಗುವನು'—ಎಂದು. ಅದ ರಿಂದವರು ಆ ದಿನವೇ ಅಜ್ಜಿ ಮಾತನ್ನು ಹೃದಯದಲ್ಲಿ ಕತ್ತಿಕೊಂಡು ತ್ರಿಕರಣಪೂರ್ವಕವಾಗಿ ಆಚರಿಸ ತೊಡಗಿದ್ದರು.

ಈಗ ನಮ್ಮ ಹೊಸಮರಿಯ ವಿಚಾರ. ಅದಾ ರೆಂದು ಬಿಡಿಸಿಹೇಳುವ ಆವಶ್ಯಕತೆಯಿಲ್ಲ. ಅದು ನಮ್ಮ ಶಿವರಾಯನೆಂದು ನಿಮಗಾದರೂ ತಿಳಿದೇ ಇದೆ. ಶಿವ ರಾಯನು ನಾರದನೊಡನೆ ಸಂಭಾಷಣೆ ಮಾಡಿ, ಕೈಲಾ ಸಕ್ಕೆ ಹೋಗಿ, ಉಮೆಯಿಂದ ಅನುಮತಿಗಳಿಸಿ, ಸೂಕ್ಷ್ಮ

ದೇಹವನ್ನು ತಳೆದು ಭೂಲೋಕದ ಪರಶುರಾಮ ಕ್ಷೇತ್ರಕ್ಕಿಳಿದನು. ಅವನಿಗೆ ಅವತರಿಸುವ ಆತುರ ಅಷ್ಟಿಷ್ಟಲ್ಲ ಅಲ್ಲಿ ಇಲ್ಲಿ ತಿರುಗಿದನು—ಎಲ್ಲಿಯೂ ಪ್ರಸವಕ್ಕ ಸಿದ್ಧರಾದ ನಾರಿಯರು ಆ ಗಳಿಗೆಯಲ್ಲಿ ಕಾಣಿಸಲಿಲ್ಲ ಹೆಚ್ಚೇನು—ಏಳು ತಿಂಗಳು ಮೀರಿದ ಗರ್ಭಿಣಿಯರು ಯಾರೂ ಇಲ್ಲ. ಗರ್ಭಿಣಿಯರೇ ಇಲ್ಲವೆಂದಲ್ಲ ತೆಂಕು ಪೇಟೆಯಲ್ಲಿ—ಕನಕಾಕ್ಷಿ ಎಂಬ ಸತ್ಯಸುಮಂಗಲೆಯೊಬ್ಬಳಿದ್ದಳು ಅವಳೂ ಇವನ ಜನನದ ಕಾಲದಲ್ಲಿಯೇ ಪ್ರಸವಿಸಿರುವಳು. ಆದರೆ ಅವಳ ಗರ್ಭವನ್ನು ಸೇರಲು ಶಿವನ ಮನಸ್ಸು ಒಪ್ಪಲಿಲ್ಲ. ಕೊನೆಗೆ 'ಎಂಟು ತಿಂಗಳಾದರೂ ಎಂಟು ತಿಂಗಳು—ತನ್ನ ಕಲಸವಾದರಾಯಿತು' ಎಂದು—ಪದ್ಮನಾಭಾಚಾರ್ಯರ ಮಾಡಿನ ಛಾವಣಿಯಿಂದ ಇಣಿಕಿ ನೋಡಿದನು. ಕೃಷ್ಣವೇಣಿಯು ಅಡುಗೆ ಮಾಡುತ್ತಿದ್ದಳು. ಅವಳ ಶರೀರವನ್ನು ಸೇರಿದರೆ ಆ ಗರ್ಭಪಿಂಡವು ತನ್ನ ಶಕ್ತಿಯನ್ನು ತುಂಬಿಸಿಡಲು ಸಾಧ್ಯವೋ ಎಂದು ನೋಡಿದನು ಅದರ ಮೋರೆ ನೋಡಿದೊಡನೆಯೇ ಏನೇನೋ ಅನಿಸಿತು ಅದು ನಮ್ಮ ಆಚಾರ್ಯರ ಹೋಲಿಕೆಯದೇ ಅಲ್ಲದಾಗಿತ್ತು. ಆದರೆ 'ಅವಸರಕ್ಕೆ ವಿಚಾರವಿಲ್ಲ.'—ಎಂಬವನಂತೆ ಹಿಂದು ಮುಂದೆ ನೋಡದೆ ಅದೇ ಗರ್ಭವನ್ನು ಸೇರಿದನು. ಕಾರಣ—ನಾರದನು ಬ್ರಾಹ್ಮಣ ಜನ್ಮ ತಾಳು ಎಂದಿರಲಿಲ್ಲವೇ? ಇದೂ ಹಾರುವರ ಮನೆಯಲ್ಲವೆ? ಆದರೆ ಆ ಪಿಂಡಕ್ಕೆ

ಈ ಶಿವತೇಜವನ್ನು ಹಿಡಿಯುವ ಶಕ್ತಿಯೆಲ್ಲಿ! ಆದರೂ ತನ್ನ ಮಹಿಮಾಬಲದಿಂದ ತನ್ನ ತೀವ್ರ ಬೆಳವಣಿಗೆ ಅನುಕೂಲಿಸುವಂತೆ ಆ ಪಿಂಡವನ್ನು ಒಮ್ಮೆಗೇ ಬೆಳೆಯಿಸಿದನು. ಅದೇ ನಮ್ಮ ಕೃಷ್ಣವೇಣಿಯ ಅಕಾಲ ವೇದನೆಗೆ ಕಾರಣ. ಅಕಾಲ ವೇದನೆಯಿಂದ ಕಾರಣವಾಯಿತು ಅಕಾಲ ಜನನ; ತಿರುಗಿ ಅದರಿಂದ ಅವಳ ಅಕಾಲ ಮರಣ. ಆದರೆ ಊರವರು ಅಷ್ಟೆಲ್ಲ ಯೋಚಿಸಲು ಕಾರಣವಿದ್ದಿಲ್ಲ. ಏಕೆಂದರೆ—ಆ ಪಕ್ಷವೊಂದರಲ್ಲೇ—ಉಡುಪಿ ಪೇಟೆಯಲ್ಲಿ ಅದೇ ಮಾದರಿಯ ಎಂಟು ಪಯಣಗಳಾಗಿದ್ದುವು; ಇದು ಒಂಭತ್ತನೆಯದು. ತಿಥಿಯ ಲೆಕ್ಕಾಚಾರದಂತೆ ಇನ್ನೂ ಎರಡಕ್ಕೆ ಅವಕಾಶವಿದೆ.

ಈಗ ಶಿವರಾಯನ ಜನನ ಕಾಲದ ವಿಚಾರ ಹೇಳುವೆವು. ಮುಂಚಿನ ದಿನ ನಮ್ಮ ಆಚಾರ್ಯರೂ, ಅವರ ಗೆಳೆಯಂದಿರಾದ ಹಯವದನಾಚಾರ್ಯರೂ, ಪೆರ್ಡೂರಿನಿಂದ ಲಗ್ನದ ಭೂರಿ ಮುಗಿಸಿಕೊಂಡು ಬರುತ್ತಿದ್ದರು. ಅಕಸ್ಮಾತ್ ಅವರ ಕಣ್ಣಿಗೆ ಒಂದು ನಕ್ಷತ್ರವು ಉರಿದು ಭೂಮಿಗೆ ಉರುಳಿದುದು ಕಂಡಿತು. ಆಗ ನಮ್ಮ ರಾಯರು—'ನೋಡಿ, ನೋಡಿ ಯಾವುದೋ ಒಂದು ಪ್ರಾಣಿಯ ಪುಣ್ಯಸಂಚಯವೆಲ್ಲ ಮುಗಿದು, ಈಗ ಪುನರ್ಜನ್ಮಕ್ಕಾಗಿ ಮರ್ತ್ಯಲೋಕಕ್ಕೆ ಬಂದಿದೆ'—ಎಂದಿದ್ದರು

* * * *

ಇಂದು, ಡಾಕ್ಟರಿಗೆ ಏನೆಲ್ಲಾ ಸುಳ್ಳು ಹೇಳಿ, ಮನೆಯ ತನಕ ಕರೆದು ಅವರಿಂದ ಕೃಷ್ಣವೇಣಿಯ ಶರೀರವನ್ನು ಪರೀಕ್ಷಿಸಿ, ಅವಳದು 'ಹ್ಯಾರ್ಕೋರ್ಟು ಡಿಕ್ರಿ' ಎಂದು ತಿಳಿದುಬರಲು, ಆಕೂಡಲೆ ಆ ಕೂರ ಡನ್ನು ಒಯ್ದು ಅಗ್ನಿಗರ್ಪಿಸಿ, ಮನೆಗೆ ಬಂದು, ನೆರ ಮನೆಯ ರಾಮಾಚಾರ್ಯರನ್ನು ಕರೆದು—'ಸ್ವಾಮೀ, ಇದರ ಜಾತಕ ಒಂದು ಬರೆದು ಸ್ಫುಟವಾಡಿ ಕೊಡಿರಿ'—ಎಂದು ಕೇಳಲು ಅವರು, ಅಂದಾಜಿನ ಮೇಲೆ ಹುಟ್ಟಿದ ಗಳಿಗೆಯನ್ನೆಲ್ಲಾ ಗಣಿತಹಾಕಿ, 'ಸ್ವಾಮಿ, ಇದ ರಿಂದ ಹೆತ್ತವರಿಗೆ (ಅಂದರೆ ತಂದೆಗೋ ತಾಯಿಗೋ ತಿಳಿಯದು.) ಕೇಡುಂಟು. ಆದರೆ ಮಗುವು ಬಹಳ ಪ್ರಸಿದ್ಧನಾಗುತ್ತಾನೆ, ಆಯುಷ್ಯ ಗಟ್ಟಿಯಿದೆ. ಆದರೆ ಕಾಸಿಗೂ ಅವನಿಗೂ ವೈರ. ಒಟ್ಟಾರೆ ನೂರಾರು ಮಂದಿಯ ಗುರುವಾಗುವನು' ಎಂದು ಭವಿಷ್ಯ ಹೇಳಿ ದರು.

ಪದ್ಮನಾಭಯ್ಯಗೆ—ದುಃಖ ದುಃಖ, ದುಃಖ ಸಂತಸ, ಸಂತಸ ಸಂತಸ—ಹೀಗೆ ಭಾವಗಳ ಆವರ್ತನೆ ಯಾಗತೊಡಗಿತು. ಮಗನಿಂದ ಹೆತ್ತವರಿಗೆ ಅರಿಷ್ಟ ವೆನ್ನಲು, ಪ್ರಾಣವೇ ಹಾರಿತು. ಮಗುವಿಗೆ ಆಯುಷ್ಯ ತುಂಬಾಯಿದೆಯೆನ್ನಲು ದುಃಖಕ್ಕೆ ಸಂತಸ ಬೆರೆಯಿತು. ಅವನು ಕನಕವೈರಿಯೆನ್ನಲು ತಿರುಗಿ ದುಃಖವಾ ಯಿತು. ನೂರಾರು ಮಂದಿಯ ಗುರುವಾಗುವನೆಂದು ತಿಳಿದೊಡನೆಯೇ - ಮತ್ತೇನು! ಒಂದು ಮರದ ಯಜ

ಮಾನಿಕೆ ತನಗೆ ಸಿಗುವುದಲ್ಲಾ ಎಂದು ಹಿಗ್ಗಿನ ಮೇಲೆ ಹಿಗ್ಗು, ಸಂತಸದ ಮೇಲೆ ಸಂತಸವಾಯಿತು. ಇತ್ತ ತಾಯಿಯಿಲ್ಲದ ಮಗುವನ್ನು ಆರೈಕೆಮಾಡಿ ಉಳಿಸುವುದು ಕಷ್ಟವೆಂದು ತೋರಿದರೂ, ಡಾಕ್ಟರರು 'ಮಗುವಿಗೇನು ಧಾಡಿ' ಎಂದುದೂ, ರಾಮಾಚಾರ್ಯರು 'ದೀರ್ಘಾಯುಃ' ಎಂದುದೂ ಅವರಲ್ಲಿ ಧೈರ್ಯ ಹುಟ್ಟಿಸಿ 'ಆಯುಷ್ಯವಿದ್ದಲ್ಲಿ ಬೇಕೆಂದೇ ಬಾವಿಗೆ ಹಾರಿದರೂ ಬದುಕುವರು' - ಎಂದು ನಿಶ್ಚಯಮಾಡಿದನು.

ನಮ್ಮ ಶಿವಣ್ಣಗೆ ಹಸಿವು ಬೇರೆ, ಇತ್ತ ಅಪ್ಪನ ಆಶೀರ್ವಾದ, ಜ್ಯೋತಿಷ್ಯನ ಭವಿಷ್ಯ, ಇವನ್ನೆಲ್ಲ ಕೇಳಿ ಸಿಟ್ಟಿಂದರೆ ಕುದಿಯುತ್ತಿತ್ತು. ಮುಂದಿನ ಯೋಚನೆಯಲ್ಲದಿದ್ದರೆ, ಹಣೆಗಣ್ಣಿಲ್ಲದಿದ್ದರೂ, ಇದ್ದೆರಡು ಕಣ್ಣುಗಳಿಂದಲೇ ಕೆಂಡಕಾರಿ ಧೃತರಾಷ್ಟ್ರನಾಗುತಿದ್ದ.

---

## ಪ್ರಕರಣ ೪

## ಜನ್ಮದಿಂದ ಪುನರ್ಜನ್ಮದ ವರೆಗೆ.

ನಮ್ಮ ಪದ್ಮನಾಭಾಚಾರ್ಯರ ದುಃಖಕ್ಕೆ ಎಣೆಯಿಲ್ಲ. ಈ ನವಬಾಲಕನ ಜನುಮದಿಂದ, ತನ್ನ ಹೊಟ್ಟೆಯಲ್ಲಿ ಒಬ್ಬ ಬಂಡಿಭೀಮನೇ ಹುಟ್ಟಿದನೆಂದು ತಿಳಿದರು. ನಮ್ಮ ಶಿಶುವಿಗೆ ಹಸಿವು ಹೆಚ್ಚು, ಆಚಾರ್ಯರಿಗೆ ವ್ಯಯ ಕಡಮೆ, ನಮ್ಮ ಮಗುವಿಗೆ ಸಿಟ್ಟು ಹೆಚ್ಚು, ಅವರಿಗ

ತಾಳ್ಮೆ ಕಡಮೆ; ಅರ್ಭಕನಿಗೆ ಬುದ್ಧಿ ಹೆಚ್ಚು, ರಾಯ
ರಿಗೆ ಮಿದುಳು ಕಡಮೆ. ಆಚಾರ್ಯರು ಮಗುವು
ಹುಟ್ಟಿದ ದಿನದಿಂದ ಮನೆಯ ಆ ಬರಡು ದನವು ಕೊ
ಡುತ್ತಿದ್ದ ಅಲ್ಪ ಸ್ವಲ್ಪ ಹಾಲನ್ನು ವಿಕ್ರಯಿಸದೆ ಅದಕ್ಕೆ
ಕೊಡಬೇಕಾಯಿತು ಹೆಚ್ಚೇನು, ಹುಟ್ಟಿದ ದಿನವೇ,
ತಾವು ರಾತ್ರಿ ಫಲಾಹಾರಕ್ಕಿರಿಸಿಕೊಂಡ ಹಾಲೆಲ್ಲ ಈ
ವೃಕೋದರನಿಗೆ ಬಲಿಯಾಯಿತು ಮಗುವು ಗಳಿಗೆಗೆ
ಮೂರಾವೃತ್ತಿ ಹಾಲಿಗಾಗಿ ಕೂಗುವುದನ್ನು ಕಂಡು
ಅವರಿಗೆ ಭೀತಿಯಾಯಿತು ಇತ್ತ ಹೊಸತಾಗಿ
ಹಾಲನ್ನು ಅವರಿಂದಿನವರೆಗೆ ಕೊಂಡವರಲ್ಲ ಆದುವ
ರಿಂದ ಉಪಾಯಮಾಡುವೆನೆಂದು—ಸೇರಿಗೆ ಆರು ಸೇರು
ನೀರು ಬೆರಸಿ ಅದಕ್ಕೆ ಉಣಿಸತೊಡಗಿದರು. ಮೊದ
ಲಿನ ತುತ್ತಿಗೇ ಮಗುವಿಗೆ, ಇದರ ಗುಟ್ಟು ಸಿಕ್ಕಿ,
ಬಾಯಿಗೆ ಹಾಕಿದ್ದನ್ನು ರಾಯರ ಮುಖಕ್ಕೆ ಉಗುಳಿ,
ಪಾತ್ರೆಯನ್ನು ಉರುಳಿಸಿಬಿಟ್ಟಿತು ರಾಯರಿಗೆ ಬಂದಿತು
ಕೋಪ - ಕೊಟ್ಟೇ ಕೊಟ್ಟರು ಒಂದು ಏಟನ್ನು. ನೆಲದಲ್ಲಿ
ಬಿದ್ದ ಹಾಲನ್ನೇ ತಿರುಗಿ ಬಟ್ಟಲಿನಲ್ಲಿ ತುಂಬಿಸಿ ಅದರ
ಬಾಯಿಗೆ ಹಾಕಿದರು ಅಷ್ಟರಲ್ಲಿ ಹಾಲಿನ ಬಣ್ಣ ಬದಲಾ
ದರೂ ಸ್ವಲ್ಪ ದಪ್ಪವಾಯಿತು. ಶಿವರಾಯನು— ಎಂಥ
ಅವಸ್ಥೆಯು ಬಂದಿತಪ್ಪ—ಎಂದುಕೊಂಡ. ಮುಂದಿನಕೆಲ
ಸದ ನೆನಪುಮಾಡಿ ಯೋಚನೆಯನ್ನು ನುಂಗಿಕೊಂಡನು.
ಎರಡು ತಿಂಗಳ ತನಕ ಈ ನೀರಿಗಾರರ ಹಾಲನ್ನೇ
ಕುಡಿದು ಬೆಳೆದು, ತನ್ನ ದೈವಬಲದಿಂದ, ಆಗಾಗಲೇ

ಒಂದು ವರುಷದ ಮಗುವಿನಂತೆ ಕಾಣಿಸಿದನು. ಆಚಾರ್ಯರು ಗುಣಿಸಿ ನೋಡಿದರು -- ಹಾಲಿನ ವಿಕ್ರಯದಿಂದ ಪ್ರತಿ ತಿಂಗಳಿಗೆ ಸಿಗುವ ಆರು ರೂಪಾಯಿಗಳು ಈ ಕಲಿಮರಿಯು ಹುಟ್ಟಿ ನಷ್ಟವಾಯಿತಲ್ಲ— ಎಂದು. ಅದಕ್ಕಾಗಿ ಅವರು ಹಾಲು ಮಾರಿ, ರಾಗಿ ತಂದು, ಅದರ ಅಂಬಳಿಯನ್ನು ತಿನಿಸತೊಡಗಿದರು. 'ಬಂದದ್ದೆಲ್ಲಾ ಬರಲಿ . . . .' ಎಂದು ಶಿವನು ಅದನ್ನೂ ತಿಂದನು ಕೊನೆಗೆ ರಾಗಿಯಿಂದ ಗಂಜನೀರಿಗೆ ಭಡತಿ ಆಯಿತು. ಹೇಗಾದರೂ ಮಾಡಿ ಎಂಟು ವರುಷ ತಳ್ಳಿದರೆ ಆಚಾರ್ಯರಿಗೆ ಅಂಜಿಕೆಯಿಲ್ಲ. ಯಾವುದಾದರೊಂದು ಮಠದವರು ಕೆಂಪು ಸೀರೆ ಉಡಿಸುವರು; ಆಗ ಇವನಿಗೆ ತಕ್ಕ ಗ್ರಾಸ ಅಲ್ಲಿಯೇ ಸಿಗುವುದು ಇವನು ಐದು ವರುಷದಲ್ಲಿ ತೋರಿದ ತಿಂಡಿಬಾಕತನವನ್ನು ಕಂಡು ಇವನು ಖಂಡಿತವಾಗಿಯೂ ಮಠದ ಪಟ್ಟಕ್ಕೆ ಹುಟ್ಟಿದವನು ಎಂದವರಿಗೆ ಹೊಳೆಯದಿರಲಿಲ್ಲ ಮೇಲಾಗಿ ಜ್ಯೋತಿಷ್ಕರೂ ಹಾಗೆ ಹೇಳಿದ್ದರು. ಆದರೆ ಅಲ್ಲಿಯತನಕ ದಿನಹರಣ ಮಾಡುವುದೆಂದರೆ ಸ್ವಲ್ಪಪ್ರಯಾಸವೆಂದು, ಹುಡುಗನಿಗೆ ಗಂಜನಾರ ಬಂದ ದಿನದಿಂದ ನಿತ್ಯವೂ ಕೃಷ್ಣ ದೇವಾಲಯದ ಭೋಜನ ಶಾಲೆಗೆ ವಿ(ಆ)ಹಾರಕ್ಕೆ ಒಯ್ಯುತ್ತಿದ್ದರು ಬಾಲಕನಿಗೂ ಸಂತಸವಾಯಿತು. ಅವನಲ್ಲಿ ತನ್ನ ತಂದೆಯಂತೆ ಒಂಟೆಯೂಟಗಳನ್ನೇ ಮಾಡತೊಡಗಿದನು. ಹಾಗೆ ಮಾಡುವುದು ತೀರ ಅವಶ್ಯವೆಂದು ಅವನಿಗೆ ಹಲವು ಕಾರಣ

ಗಳಿಂದನಿಸಿತು. ಮೊದಲನೆಯದಾಗಿ ತನ್ನ ಭಾವಿ ಕಾರ್ಯಕ್ಕೆ ಬಲವಾದ ಬೆಳವಣಿಗೆ ಬೇಕು; ಎರಡನೆಯದಾಗಿ, ಅವನ ಪ್ರತ್ಯಕ್ಷ ಅನುಭವದಂತೆ— ಬ್ರಾಹ್ಮಣರು ಭೋಜನ ಪ್ರಿಯರು ಮಾತ್ರವಲ್ಲ, ಪ್ರವೀಣರೂ ಆಗಬೇಕು.

ಅವನ ಪ್ರಥಮ ದಿನದ ಭೋಜನ ಶಾಲೆ ಅನುಭವ ಹೇಳುತ್ತೇವೆ-ಕೇಳಿರಿ. ಅವನಿಗೆ, ತನ್ನದು ವಯಸ್ಸಿಗೆ ಮಿಾರಿದ ಬೆಳವಣಿಗೆ ಎಂಬ ಭಾವನೆ ಬಂದಿತ್ತು. ಆದರೆ ಸುತ್ತ ಊಟಕ್ಕೆ ಸಿದ್ಧರಾಗಿ ಕುಳಿತ ಮಲ್ಲರನ್ನು ಕಾಣುತ್ತಾನ—ಭಾರಿ ಭಾರಿ ಉಗ್ರಾಣಗಳು! ಅದೇ ಸಮಯ, ಭಕುತಾವಳಿಗೆ ದರುಶನ ನೀಡಲು ಒಬ್ಬರು ಚಿಕ್ಕ ಸ್ವಾಮಿಯವರು ಬಂದರು. ಆಗಿವನು ತನ್ನ ತೊದಲ್ನುಡಿಯಿಂದ "ಅಪ್ಪಾ ಆನೆಗೆ ಕಾಲೆಷ್ಟು?" ಎಂದು ಕೇಳಿದನು "ನಾಲ್ಕು" ಎಂದುತ್ತರವು ಬರಲಾಗಿ— "ಹಾಗಾದರೆ ಇದಲ್ಲ ಬೇರೇನು ವ್ಯತ್ಯಾಸವಿಲ್ಲವಾದರೂ ರೂಪದಲ್ಲೂ ಕಾಲುಗಳ ಸಂಖ್ಯೆಯಲ್ಲೂ ವ್ಯತ್ಯಾಸವಿದೆ"— ಎಂದು ಸುಮ್ಮನಾದನು ಸ್ವಾಮಿಯವರು ಸಮಿಾಪ ಬರಲು, ಅವರಂತೆ ತಾನು ಬೆಳೆಯದಿದ್ದರೆ ತನಗೆ ಗೌರವ ಸಿಗದೆಂದು ನಿಶ್ಚಯಿಸಿದನು ಇತ್ತ ಸನ್ಯಾಸಿಗಳ ಆಗಮನದಿಂದ ಪುಳಕಿತರಾದ ಆಚಾರ್ಯರು—"ಸ್ವಾಮಿ, ಇದು ನನ್ನ ಹುಡುಗ; ತಾಯಿಸತ್ತ ಮಗು; ಮೂರು ವರುಷವಾಗಿದೆ! 'ಮಗೂ, ಅನಂತಕೃಷ್ಣ ಶ್ರೀಪಾದಂಗಳಿಗೆ ನಮಸ್ಕರಿಸು"—ಎಂದುಸುರಿದರು. ಬಾಲಕ

ನಿಗೆ ಈ ಮಾತಿನ ಅರ್ಥ ಹೊಳೆಯಲಿಲ್ಲ. ಆದರಿಂದ ವನು ಸ್ವಾಮಿಯವರ ಮುಖವನ್ನು ಬಿರಬಿರ ನೋಡತೊಡಗಿದನು. ಮಗನು ಅವಿಧೇಯನಾದುದನ್ನು ಕಂಡ ತಂದೆಯು ತಾನೇ ಅವನನ್ನು ಎತ್ತಿ ಹಿಡಿದು ಸ್ವಾಮಿಯವರ ಪಾದಪಂಕಜಗಳೆದುರು ಮಲಗಿಸಿಬಿಟ್ಟನು. ಬಾಲಕನಿಗೆ ತನ್ನನ್ನು ಅಪಮಾನಿಸಿದರೆಂದು ತಿಳಿಯಿತು. ಆದರ ಸೇಡನ್ನು ತೀರಿಸಲು, ಮಲಗಿದಲ್ಲಿಂದಲೇ ಶ್ರೀಪಾದಂಗಳ ಕಾಲ್ಬೆರಳೊಂದನ್ನು ಬಲವಾಗಿ ಕಚ್ಚಿಬಿಟ್ಟನು. "ಅಯ್ಯೋ"—ಎಂದು ಸ್ವಾಮಿರಾಯರು ಕುಣಿದಾಡಿಬಿಟ್ಟರು. ಕೂಡಲೆ ಭೀತಿಯನ್ನು ಬಿಟ್ಟು ಕೋಪವನ್ನು ತಾಳಿ, ಹುಡುಗನ ಕಪೋಲದ ಮೇಲೆ ನಾಲ್ಕೇಟು ಎಳೆದು, ಮುಂದೆ ಸಾಗಿದರು. ಈ ಸಂಭಾವನೆಯೊಡನೆ ಅಪ್ಪರಾಯರ ಆಶೀರ್ವಾದವೂ ಸಿಕ್ಕಿತು. ಬೇರೆ ಉಪಾಯ ಕಾಣದೆ ಮಗುವು ಊಟವನ್ನು ಬಿಟ್ಟು ಮನೆಗೆ ಹೊರಟನು. ಆದರೆ ಹಸಿವು ಬಲವಾಗಿತ್ತು; ಮನೆಯಲ್ಲಿ ಬೆಂಕಿ ಉರಿಸಿದ್ದಿರಲಿಲ್ಲ; ಉರಿಸಲು ಮುಂದಿನ ಏಕಾದಶಿ ಬರಬೇಕು. ಹಾಗೆ ಸ್ವಲ್ಪದೂರ ಮುಂದೆ ಸಾಗಿ ನಿಂತುಕೊಂಡನು. ಬಳಿಯಲ್ಲಿ ಓರ್ವ ಭಾರಿ ಮನುಷ್ಯನು ಮಾತಿನಲ್ಲಿ ಮಗ್ನನಾಗಿದ್ದರು, ಅವರ ಹಿಂದೆ ಒಂದು ಕುಡಿಕೆಯಲ್ಲಿ ಇಷ್ಟು ಮೊಸರಿತ್ತು; ಅದನ್ನು ಕುಡಿದು ಅಲ್ಲಿಂದ ಮೆಲ್ಲನೆ ಜಾರಿದನು. ಅಗ್ನಿದೇವನಿಗೆ ತೃಪ್ತಿಯಾಗದಿದ್ದನ್ನು ಕಂಡು ಒಳನುಗ್ಗಿದನು. ಅದು ಮಠದ ಚೌಕಿಯಾಗಿತ್ತು. ಇಲ್ಲಂತು ಕೇವಲ ಒಂದನೇ ತರ

ಗತಿಯ ಉಗ್ರಾಣಗಳಿದ್ದುವು. ಮೊದಲಿನ ಒಂದೆಲೆ ಯನ್ನು ಬಿಟ್ಟು ಉಳಿದಲ್ಲೆಲ್ಲಾ ಚರಕಿಮಾಲಯುಗಳಿದ್ದುವು ಇವನು ಮೆಲ್ಲನೆ ಯಾರಿಲ್ಲದ ಆ ಎಲೆಯ ಬಳಿ ಹೋಗಿ ನೋಡುತ್ತಾನೆ: ಪಂಚಭಕ್ಷ್ಯಗಳರಾಶಿ 'ಗಮ ಗಮ' ಪರಿಮಳ ಬೀರುತ್ತಿದೆ! ತಾನು ಮೊದಲು ಕುಳಿತಲ್ಲಿ ಇದರ ಗಂಧ ಸಹ ಇದ್ದಿರಲಿಲ್ಲ ಅವರೆಲ್ಲರು ಶ್ರೀಪಾದಂಗಳವರ ನಿರೀಕ್ಷಣೆ ಮಾಡುತ್ತ ಹರಟೆ ಹೊಡೆಯುತ್ತಿದ್ದುದನ್ನು ಕಂಡು ಮೆಲ್ಲನೆ ಇದ್ದುದನ್ನೆಲ್ಲಾ ಎತ್ತಿ ಮೆಲ್ಲತೊಡಗಿದನು. ತಿನ್ನುವ ಗಡಿಬಿಡಿಯಲ್ಲಿ ಅವ ನನ್ನು ಯಾರೂ ಕಾಣಲಿಲ್ಲ. ಆದರೆ ಅರ್ಧದಲ್ಲಿ, ಯತಿಗಳ ಆಗಮನವಾಯಿತು. ನೋಡುವುದೇನು! ಇವರ ಎಲೆ ಆಗಲೇ ಅರ್ಧವಾಗಿತ್ತು. ರೌದ್ರಾವತಾರ ತಾಳಿದರು ಸನ್ಯಾಸಿಗಳ ಸಿಟ್ಟಲ್ಲವೇ! ಕೈಯಲ್ಲಿದ್ದ ದಂಡವನ್ನು ಅವನ ಕಡೆಗೆ ಬಲವಾಗಿ ಎಸೆದರು. ಅವ ರದು ಚಿಕ್ಕಂದಿನಲ್ಲಿ ಮಾವಿನ ಮರಕ್ಕೆ ಕಲ್ಲುಗಳನ್ನೆಸೆದು ತಿದ್ದಿದ ಕೈಯಾಗಿದ್ದರೂ, ರೂಢಿ ತಪ್ಪಿದುದರಿಂದ, ಅದು ಗುರಿತಪ್ಪಿ ಪಾರುಪತ್ಯಗಾರ ವಕ್ರತುಂಡಾಚಾರ್ಯರ ಬೆನ್ನಿಗೆ ಬಿತ್ತು. ಹುಡುಗನಿಗೆ ಆವತ್ತು ತಿಳಿಯಿತು ನಾಗಾಲೋಟ! ಊಟಕ್ಕೆ ಕುಳಿತ ಗುಡ್ಡಬೆಟ್ಟಗಳು ಏಳುವುದರೊಳಗಾಗಿ ಹುಡುಗನು ತಮ್ಮ ಮನೆಯನ್ನು ಸೇರಿದನು. ಸರಿ ಸುದ್ದಿ ಊರೆಲ್ಲಾ ಹರಡಿ ಭೋಜನ ಶಾಲೆಯ ಜನರು ಗೋಶಾಲೆಯ ಪ್ರಜೆಗಳಂತೆ ಚೌಕಿ ಯಲ್ಲಿ ಕಿಕ್ಕಿರಿದರು. ವಕ್ರತುಂಡರನ್ನು ಒಂದು ಮಂಚ

ಲಿನಲ್ಲಿ ಮಲಗಿಸಿ ಆಸ್ಪತ್ರೆಗೆ ಒಯ್ದರು ಸ್ವಾಮಿಯ
ರನ್ನು ಎಲ್ಲರೂ ಒಂದೇ ಸವನೆ ಸಂತೈಸತೊಡಗಿದರು.
ಗದ್ದಲ ಕೇಳಿ ಓಡಿ ಬಂದ ಅನಂತಪದ್ಮನಾಭ ಆಚಾರ್ಯ
ರಿಗೆ ಅನಂತ ಸಹಸ್ರನಾಮಗಳಾದುವು. ಸ್ವಾಮಿಯ
ರಿಂದಲೂ ಆಶೀರ್ವಚನವಾಯಿತು ಆ ದಿನ ಅವ
ರಿಗೆ 'ಸತ್ತಷ್ಟು ಅಪಮಾನ' ವಾಯಿತಂತೆ! (ಸತ್ತರೆ-?)

* * * * * * * *

ಶಿವನ ಬಾಲಲೀಲಾವಳಿಯ ಇನ್ನೊಂದು ಕಥೆ
ಯನ್ನು ಹೇಳುವೆವು. ಬಾಲಕನಿಗೆ ನಾಮಕರಣವಾ
ಗುವ ದಿನ ಅವನನ್ನು ಆಚಾರ್ಯರು ತೊಡೆಯಲ್ಲಿರಿಸಿ
ಕೊಂಡಿದ್ದರು. ಬಳಿಯಲ್ಲಿ – 'ಏನು ಹೆಸರಿಡಲಿ' ಎಂದು
ಪುರೋಹಿತರು ಲೆಕ್ಕಹಾಕುತ್ತಿದ್ದರು. ಜಾತಕದ
ಮೇಲಿಂದ 'ಹಯವದನ' ಎಂದು ಬರಲು ಹಾಗೇ ತಿಳಿಸಿ
ದರು. ಬಾಲಕನ ಸೂಕ್ಷ್ಮಬುದ್ಧಿಗೆ ಅದು ಕೇಳಿಸಿತು.
ಅವನು ತನ್ನ ಅಸಮ್ಮತಿಯನ್ನು ತೋರಿಸಲು ಕೂಗ
ತೊಡಗಿದನು ಈ ಮಗುವಿನ ಕೂಗೆಂದರೆ — ಆ
ಊರ ಯಹೋವರು ತಮ್ಮ ಪ್ರೀತಿಯ ಖಾದ್ಯವನ್ನು
(ಮೂರನೆ ಅವತಾರ) ಕುದಿಯುವ ನೀರಿನ ಆವಿಯ
ಮೇಲೆ ಇಟ್ಟಾಗ ಹೊರಡುವ ಸ್ವರದಂತೆ! ಇವರ
ಯೋಚನೆಯು ಬದಲಾಗುವ ತನಕ ಇವನ ಕೂಗು
ನಿಲ್ಲಲಿಲ್ಲ. ಬಳಿಕ ಪುರೋಹಿತರು— 'ಅಜ್ಜನ ಹೆಸರಿಟ್ಟ
ರೇನು' ? — ಎಂದರು. ಅದೇನೆಂದು ತಿಳಿಯುವ ಕುತೂ
ಹಲವಿದೆಯೇ? 'ಅನಂತನಾರಾಯಣ' — ಎಂದು.

ಆಚಾರ್ಯರಿಗೆ ಮಗುವಿನ ಹೆಸರಿನಲ್ಲಿ ತಮ್ಮ ಹೆಸರು ಬಂದರಾಗುತ್ತಿತ್ತೆಂದು ಮನಸ್ಸು. ಕಾರಣ, ಅವರ ಮುಂದೆ ಇನ್ನಾರೂ ಅವರ ಹೆಸರನ್ನು ಇರಿಸಿಕೊಳ್ಳು ವವರಿಲ್ಲವಲ್ಲ. (ಕಾರಣ, ಮಗನು ಯತಿಯಾಗುವುದು ನಿಶ್ಚಯವಷ್ಟೆ.) ಅದಕ್ಕಾಗಿ ತಮ್ಮ ಹೆಸರಿಗೆ ತಮ್ಮ ಹೆಂಡತಿಯ ಹೆಸರಿನ ಚೂರೊಂದನ್ನು ಬೆರೆಯಿಸಿ 'ಅನಂತಕೃಷ್ಣ'—ಎಂದರು. ಹೆಸರು ಚೆನ್ನಾಗಿದೆ—ನಿಜವಾದ ರಸಿಕತೆಯಿದು ಅಜ್ಜ ಅನಂತನಾರಾಯಣ, ಅಪ್ಪ ಅನಂತಪದ್ಮನಾಭ, ಮಗ ಅನಂತಕೃಷ್ಣ—ಹೀಗೆ ಸರಣಿಯು ಅನಂತವಾಗಿ ಹೋಗಬೇಕಿತ್ತು. ಅಂತು ಮೂವರೂ ಅನಂತರೇ—.(ಅನಂತ=ತಲೆಬುಡ ಇಲ್ಲ ದವರೆಂದೇ?) ಸರಿ 'ಅನಂತಕೃಷ್ಣ'ನೆನ್ನುವಷ್ಟಕ್ಕೆ ಹೊರಗಿನ ಕಿಟಕಿಯಿಂದ ಯಾರೋ ಪೋಲಿ ಹುಡು ಗರು–'ಅಲ್ಲ, ಬ್ರಹ್ಮಾನಂದಕೃಷ್ಣ' ಎಂದರು ಎಲ್ಲರೂ ಗೊಳ್ಳೆಂದು ನಕ್ಕರು. ಒಮ್ಮೆಗೆ ಆಚಾರ್ಯರ ಮೋರೆ ಸಪ್ಪಗಾಯಿತು ಆದರೂ ಅದನ್ನಡಗಿಸಿ ಸಿಟ್ಟನಿಂದ ಸಭಿಕರ ಮುಖ ನೋಡಿದರು. ನಿಃಶಬ್ದ. ಇದು ತನ ಗಾದ ಅಪಮಾನವೆಂದು ಬಾಲಕನಿಗೆ ತಿಳಿಯಿತು. ರೋದಿಸಲು ಬಾಯಿ ತೆರೆದನು. ಬಾಯಿಗೆ ಸರಿಯಾಗಿ ಆಚಾರ್ಯರ ಹೊಟ್ಟೆಯು ಇದಿರಾಯಿತು. ಇದೇ ಸಮಯವೆಂದು ಕಚ್ಚಿಬಿಟ್ಟನು. ಚಿತ್ರರಡುವಿಟು ಅಂತು ಇಟ್ಟ ಹೆಸರಿಗೆ 'ಅಪ್ಪೀಲು' ಇಲ್ಲ–ಅನಂತಕೃಷ್ಣ.

* * * * * * * *

ಅನಂತಕೃಷ್ಣನು ಸಾಲೆಗೆ ಹೋಗತೊಡಗಿದ ಮೊದಲನೆಯ ದಿನವೇ, ಆ ನೂರಿನ್ನೂರು ಹುಡುಗರ ದೊಡ್ಡಿಯನ್ನು ಕಂಡು ವ್ಯಾಕುಲಗೊಂಡಿತು. ಇವನು ಸಾಲೆಯೊಳಗೆ ಕಾಲಿಡುವಾಗ ಇವನ ತಂದೆಯು ಬಳಿಯಲ್ಲಿದ್ದಿರಲಿಲ್ಲ. ಇವನನ್ನು ಮುಂದೆ ಕಳುಹಿಸಿ ತಾನೀಗ ಬರುವೆನೆಂದಿದ್ದ. ಹುಡುಗನು ಸಾಲೆ ಬಾಗಿಲಿಗೆ ಬಂದು ಇಣಿಕಿ ಒಳನೋಡಿದನು. ಏನೆನ್ನುವುದು! ಪ್ರಳಯಕಾಲದ ಗದ್ದಲ. ಕಣ್ಣೆದುರಿಗೆ ಬರೇ ತಲೆಬುರುಡೆಗಳ ರಾಶಿ ಕಾಣಿಸುತ್ತಿತ್ತು. ಆ ಚಿಕ್ಕ ಮಂದಿರದಲ್ಲಿ ಬರೇ ಗಲಂ ಹುಡುಗರಿದ್ದರು. ಅಷ್ಟೊಂದು ಗೆಳೆಯರು ತನಗೆ ಸಿಗುವರೆಂಬ ಆಸೆಯಿಂದ ಒಳನುಗ್ಗಿದನು. ಇವನು ಕಾಲಿಟ್ಟುದೇ ತಡ, ಒಬ್ಬ ಹುಡುಗನು—ಇವನನ್ನು ಕಂಡು, ಇವನು ಹೊಸಬನೆಂದು—'ಹೂಂ, ಹೂಂ, ಹೊರ ನಡಿ' ಎಂದನು. ಉಳಿದ ಮಕ್ಕಳು "ಹೈ, ಹೈ, ಛೂ ಛೂ,' ಎಂದು ಕೂಗತೊಡಗಿದರು. ಈ ಅಪಮಾನ ಸಹಿಸಲಾರದೆ ಅ.ಕೃಷ್ಣನು ಮೊದಲು ಬಾಯಿ ತೆರೆದವನ ಮೂಗನ್ನು ಹಿಡಿದನು. ಬಳಿಯಲ್ಲಿದ್ದಿನ್ನಿಬ್ಬರಿಗೆ ಮೊಲದ ಕಿವಿ ಮಾಡಿದನು. ಗದ್ದಲವೆದ್ದಿತು. ಸ್ಥಿತಪ್ರಜ್ಞಾವಸ್ಥೆಯಲ್ಲಿ ಕುರ್ಚಿಯನ್ನೇರಿದ ಉಪಾಧ್ಯಾಯರು (ಟ್ರೈಂಡು S. S. L. C.) ಸಮಾಧಿಭಂಗರಾಗಿ ಮೇಜಿನ ಮೇಲಿನ ಛಡಿಯಿಂದ, ಅದಕ್ಕೊಂದು ಪೆಟ್ಟು ಹೊಡೆದು, ತಿರುಗಿ ನಿದ್ರಿಸಿದರು. ಆದರೂ ಗದ್ದಲ ಶಾಂತವಾಗದ್ದನ್ನು ಕಂಡು—ಎದ್ದು, ಚೆನ್ನಾಗಿ ಎರಡು ಚಿಮುಟ ನಶ್ಯ

ಎಳೆದು, ಬೆತ್ತವನ್ನು ಹಿಡಿದು ಮುಂದೆ ಬಂದು, ಮೊದಲು ಎದುರಾದವರಿಗೆಲ್ಲಾ ನಾಲ್ಕೇಟು ಎಳೆದು, ಮೊದಲಿನ ಸ್ಥಾನಕ್ಕೆ ಹೋಗಿ—ಏನು ಗದ್ದಲವಿದು?' ಎಂದು ಕೇಳಿದರು. ಹಿರೇಮಣಿಯು 'ಸಾರ್, ಆ ಹುಡುಗ ಬಂದು ಇವರಿಗೆಲ್ಲಾ ಪೆಟ್ಟುಕೊಟ್ಟ' ಎಂದು ನಗುತ್ತ ನಿಂತಿದ್ದ ಅ. ಕೃಷ್ಣನನ್ನು ತೋರಿಸಿದನು. ಉಪಾಧ್ಯಾಯನು ರೇಗಿ 'ಅವನನ್ನು ಎಳೆದು ತನ್ನಿರಿ!' ಎಂದನು. ಎಳೆಯಲು ಒಬ್ಬಿಬ್ಬರು ಮುಂದಾದರು. ಮುಂದಾಗಿ ನಾಲ್ಕೇಟು ತಿಂದು ಮೆಲ್ಲಗೆ ಹಿಂದೂ ಸರಿದರು. ಆಗ ಮಾಸ್ತರರು ತಾವೇ ಮುಂದರಿದು ಚಡಿ ಎತ್ತಿ ಅವನ ಬೆನ್ನ ಮೇಲಿಳಿಸಿದರು. ಕೂಡಲೆ ಒಂದು ಟ್ರಾನ್ಸ್ಫರ್ ಸೀನ್ ನಡೆಯಿತು ಬೆತ್ತವು ಅನಂತಕೃಷ್ಣನ ಕೈಸೇರಿತು ಮಾಸ್ತರ ಕಣ್ಣಿನ ಕೆಂಬಂಣನೆಲ್ಲ ಅವನ ಕಣ್ಣಿಗೆ ಸೇರಿತು. ಮಕ್ಕಳೆಲ್ಲಾ ನಕ್ಕುಬಿಟ್ಟರು. ಮುಂದೇನೇನಾಗುತ್ತಿತ್ತೋ ಏನೋ—ಆದರೆ ನಡುವೆ ಹುಡುಗನ ತಂದೆಯು ಬಂದುದರಿಂದ ಎಲ್ಲಾ ರಾಜಿಯಾಯಿತು.

* * * * * * * *

ಅನಂತಕೃಷ್ಣನು ಕೀಲಕ ದರ್ಜೆಗೆ ಸೇರಿದ. ಅದಕ್ಕೆ IIನೇ ಕ್ಲಾಸೆಂದು ಹೆಸರು. ಎರಡನೆಯ ದಿನವಿದು. ಇವನು ಬರಿ ಕೈಯಲ್ಲಿ ಹೋಗಿದ್ದ. ಉಳಿದ ಸಹಪಾಠಿಗಳೊಡನೆ ಕೆಲವು ಪುಸ್ತಕಗಳಿದ್ದುವು ಅವೆಲ್ಲಾ ಏನೆಂದು ಒಬ್ಬ ಬಾಲಕನನ್ನು ಕೇಳಲು—"ಮೂಲಪಾಠಕ, ಗಣಿತಹಸ್ತಾಮಲಕ, ಅಂಗಳದುಗ್ಗು, ಇಲಿ

ಗಳ ಥಕಥೈ, ಕಾಗೆ ಸತ್ತು ಹೇನು ಬಡವಾಯಿತು ”
ಎಂದೆಲ್ಲಾ ಹೇಳಿದರು. ‘ಇವೆಲ್ಲಾ ಜೀವ ಇಲ್ಲದ
ಕಾಗದಗಳು ಏನು ಮಾಡುವುದಕ್ಕೆ, ತಿಂಡಿತಂದಿರು
ವಿರೋ’ ಎಂದು ಕೇಳಿದನು. ಬಾಲಕರು ನಕ್ಕರು.
ಅವನ ದೃಷ್ಟಿ ಗೋಡೆಗೆ ಹರಿಯಿತು. ಅಲ್ಲಿ ಕುದುರೆ,
ಕತ್ತೆ ಮೊದಲಾದ ಪ್ರಾಣಿಗಳ ಚಿತ್ರಗಳಿದ್ದುವು.
‘ಇವೆಲ್ಲಾ, ಏನು’ ಎಂದು ಕೇಳಿದನು. ಆನೆ, ಕುರಿ,
ಹಂದಿ, ಜಿಬ್ರಾ, ಹುಲಿ, ಹುಲ್ಲೆ, ತೆಂಗು, ಭತ್ತ . . .
ಎಂದು ಏನೇನೋ ಹೇಳಿದವು. ಜೀವ ಇಲ್ಲದ ಇವು
ಗಳಿಂದ ಕಲಿಯುವುದೇನು ಮಣ್ಣು. “ಒಯ್ದು ಒಲೆಗೆ
ಹಾಕಿರಿ.”— ಎಂದಾಜ್ಞೆಯಾಯಿತು. ನೆರೆ ಈಯತ್ತೆ
ಯಲ್ಲಿ ಇಬ್ಬರು ಹುಡುಗರು “ಎಂಟೆಂಟ್ಲ ಅರವತ್ನಾಲ್ಕೂ,
ಎಂಟೋಂಬೋತ್ಲಿ ಎಪ್ಪತ್ತೆರಡೂ” ಎಂದು ಕೂಗುತ್ತಿ
ದ್ದರು. ಅದನ್ನು ಕೇಳಿ ಅ.ಕೃಷ್ಣನು ‘ಅದೇನು ಹಾಡು
ಹೇಳುತ್ತಿರುವುದು?’ ಎಂದು ಕೇಳಿದನು. “ಅದು
ಹಾಡಲ್ಲ, ಮಗ್ಗಿ ನಮಗೂ ಇದೆ ಹತ್ತತ್ಲಿ ವರೆಗೆ.
ಅದಿಲ್ಲದೆ ಬಾಯಿಲೆಕ್ಕ ಮಾಡುವುದು ಹೇಗೆ?”—
ಎಂದುತ್ತರ ಬಂದಿತು. ಅ.ಕೃಷ್ಣನು “ಏನು? ಎಂದು
ಸಾಯುವುದೆಂದು ಲೆಕ್ಕಹಾಕುವಿರೇ? ಥೂ. ಬಬ್ಬ
ಗಳೇ”— ಎಂದು ಗದರಿಸಿದನು. ಅಷ್ಟರಲ್ಲಿ ಅವನ
ಭಾವಿ ಗುರುಗಳು, ಮೊದಲಿನ ದಿನ ಭೇಟಿಯಾದವರು,
ಬಂದರು. ಬಂದವರು ಇವನನ್ನು ನೋಡಿ—‘ಹುಡುಗಾ,
ನಿನ್ನೆಯಂತೆ ತಂಟೆಮಾಡಿದರೆ, ಬೆತ್ತನೋಡಿಕೋ’

ಎಂದರು. ಬಾಲಕನಾಗ 'ನನ್ನ ಹೆಸರು ಅನಂತಕೃಷ್ಣ' ಎಂದುತ್ತರವಿತ್ತನು. ಮಕ್ಕಳು ತುಂಬಾ ನಗಾಡಿದುವು. ಅವರಿಗೀಗ ಪ್ರತಾಪಿಯಾದ ಗೆಳೆಯ ಸಿಕ್ಕಿರುವನಷ್ಟೆ. ಅ.ಕೃಷ್ಣನು ಇವೆಲ್ಲಾ ಪ್ರಾಪಂಚಿಕ ವ್ಯವಹಾರಗಳಿಗೆ ಬೇಕಾಗಬಹುದೆಂದು ಕೀಲಕದಿಂದ ಹಿಡಿದು ನಾಲ್ಕನೆಯ ಕ್ಲಾಸಿನ ವರೆಗೆ ಈಜಿದನು.

* * * * * * * *

ಈಗವನಿಗೆ ಒಂಬತ್ತು ವರುಷ ಪ್ರಾಯ. ಬ್ರಹ್ಮಾನಂದ ಸನ್ಯಾಸಿಗಳು ಸತ್ತು ಮರದ ಪಟ್ಟ ಬೇರೂಬ್ಬನಿಗೆ ಆಗಿಹೋಗಿತ್ತು. ಅದರ ಕಾರಣವಿಷ್ಟೆ. ಬ್ರಹ್ಮಾನಂದರ ಕಾಲು ಕಚ್ಚಿ, ಪಂಚಭಕ್ಷ್ಯಕ್ಕೆ ಸೊನ್ನೆಹಾಕಿದ ನೆನವು ಅವರಿಗೆ ಹೋಗಿದ್ದರಲಿಲ್ಲ. ಅನಂತಪದ್ಮನಾಭನು—ಅವರ ವೈಕುಂಠಪ್ರವಾಸದ ಸಮಯ, ಹೇಗಾದರೂ ಮಗನಿಗೆ ಪಟ್ಟಕೊಡಿಸಬೇಕೆಂದು ಕಣ್ಣೀರನ್ನು ತೆಗೆದು –'ಅವಳ ಮೇಲಿನ ಪ್ರೇಮಕ್ಕಾದರೂ' ಎಂದು ಬಿನ್ನವಿಸಕೊಂಡನು. ನಿರರ್ಥಕ! ಸನ್ಯಾಸಿಗೆ ಸಂಸಾರದ ಜವಾಬುದಾರಿಯೆಲ್ಲಿ? ಹೀಗಾಗಿ ಯತಿತ್ವ ಹೋಗಿ, ಬೋಳು ಉಪನಯನದಲ್ಲಿ ಅವನು ತೃಪ್ತನಾಗಬೇಕಾಯಿತು. ಹುಟ್ಟದ ಬಳಿಕ ಸಾಯದೆ ತಿರುಗಿ ಹುಟ್ಟುವಂತೆ ಮಾಡುವುದಕ್ಕೆ ಉಪನಯನವೆಂದು ಹೆಸರು. ಅನಂತಕೃಷ್ಣನೂ ಆ ದಿನವನ್ನು ಕಾದಿದ್ದ. ಬೆಳಿಗ್ಗೆ ಬೇಗ ಸ್ನಾನಮಾಡಿಸಿ, ಹುಡುಗನು ಉಪವಾಸಮಾಡಬೇಕೆಂಬುದರಿಂದ ಸ್ನಾನದ ಮೊದಲು ತಂಗಳು ಮೊಸ

ರನ್ನು ತಿನ್ನಿಸಿ, ಬಳಿಕ ಹೋಮಧೂಮ ಹಾರಿಸುವ ವ್ಯವಸ್ಥೆ ಯಾಯಿತು. ಅದೀಗ ಉಪದೇಶದ ಗಳಿಗೆ ಬಂದಿತು. ಅಪ್ಪನು ಮಗನ ಕಿವಿಯೊಳಗೆ ಗಾಯತ್ರಿ--ಊದಿದನು. ಹುಡುಗನು—ಅರ್ಥವಿಲ್ಲದ ಈ ಮಾತೇಕೆ? ಎಂದು ಕೇಳಿದನು. ಅಪ್ಪನು—'ಅದಕ್ಕರ್ಥವಿದೆ. ಮುಂದೆ ತಿಳಿಯುವುದು!' ಎಂದನು. 'ಹಾಗಾದರೆ ಆಗ ಹೇಳಿ ಕೊಡು' ಎಂದುತ್ತರ. ಪುರೋಹಿತರೊಡನೆ ಇದರ ಅರ್ಥ ಹೇಳಿರಿ ಎನ್ನಲು 'ಅದಕ್ಕೆಲ್ಲಿ ಅರ್ಥ'ವೆಂದರು! ಹುಡುಗನಾಗ—ಅದನ್ನು ಕಲಿಯುವ ಮೊದಲೇ ಮರೆಯುವುದೊಳಿತು— ಎಂದು ನಿಶ್ಚಯಮಾಡಿದನು.

ಪುರೋಹಿತರು ಹುಡುಗನನ್ನು ಬಳಿಯಲ್ಲಿರಿಸಿ ಕೊಂಡು—"ಇಂದಿನ ವರೆಗೆ ನೀನು ಬಾಲಕನಾಗಿದ್ದೆ. ಈಗ ದ್ವಿಜನಾದೆ. ನಿನಗೆ ಬುದ್ಧಿ ಬಂದಿದೆ. ನಿತ್ಯ ನೀನು ತ್ರಿಕಾಲ ಸ್ನಾನಸಂಧ್ಯಾ(ಆಗದಿದ್ದರೆ ತ್ರಿಕಾಲ ಭೋಜನವನ್ನಾದರೂ)ಮಾಡಬೇಕು. ಇನ್ನು ನಿನಗೆ ಭಿಕ್ಷಾನ್ನದಿಂದ ಜೀವನ. ವೇದಪಾರಂಗತನಾಗಿ ಗುರು ಸೇವೆಮಾಡಿಯೋಗ್ಯನಾದ ಗೃಹಸ್ಥನಾಗಲುಯತ್ನಿಸು." ಎಂದೆಷ್ಟೆಷ್ಟೋ ಹೇಳಿದರು. ಅ ಕೃಷ್ಣನು—"ಭಿಕ್ಷೆಗೆ ಹೋಗುವವನಿಗೆ, ಈ ಚಿನ್ನಾಭರಣಗಳೇಕೆ? ನನಗೆ ವೇದಪಾರಂಗತನಾಗು ಎನ್ನಲು ಗುರುಗಳಿಗೇ ವೇದ ವೇದಾರ್ಥಗಳು ತಿಳಿದಿಲ್ಲ. . . . " ಎಂದೆಲ್ಲಾ ಹೇಳಿದನು. ಮಗುವಿನ ಬಾಯಿಹರಕುತನವು ಬಂದ ವರಿಗೆಲ್ಲಾ ತಿಳಿಯುವುದು ಎಂದು ತಂದೆಯು ಅವನ

ಕಿವಿಗೆ ತೊಡಿಸಿದ ಕುಂಡಲವನ್ನು ಸರಿಪಡಿಸುವ ನೋಗಿ ಸಿಂದ, ಸ್ವಲ್ಪ ಬಿಸಿಮಾಡಿ–'ಇಂದಾದರೂ ನನ್ನ ಮಾನ ಉಳಿಸು' ಅಂದನು. ಬಾಲಕನು ಮೌನ ತಾಳಿ ಅವನ ಹೇಳಿಕೆಯಂತೆ ಮಣೆಯ ಮೇಲೆ ಕುಳಿತನು. ಬಂದವ ರೆಲ್ಲ ಆರತಿಮಾಡಿ ಭಿಕ್ಷೆಯಿತ್ತರು. ಅಕ್ಕಿ, ಕಾಸು, ಬಟ್ಟೆಬರೆಗಳೆಲ್ಲ ಅವನಿರುವಲ್ಲಿ ಬಂದುವು. ಹುಡುಗನ ಮನಸ್ಸಿಗೆ ನಿಜವಾಗಿಯೂ ಇದು 'ಧೂರ್ತತನದ ಭಿಕ್ಷಾ ವೃತ್ತಿ'ಯೆಂದು ತಿಳಿಯಿತು. ಆ ದಿನದ ವಿಧಿಗಳು ಮುಗಿದುವು. ದಿನವೆಲ್ಲಾ ಅವನು ಉಪವಾಸ. ಮೊದಲು ತಿಂದ ತಂಗಳು ಮೊಸರು, ಮಧ್ಯಾಹ್ನ ತಿಂದ 'ಉಂಡೆ ಅಂಬೊಡೆ'—ಸಂಜೆ ಮಾಡಿದ ಚಿಕ್ಕ ಊಟ, ಇವನ್ನು ಬಿಟ್ಟ ಆತನು ಪೂರಾ ಉಪವಾಸ ನಾಲ್ಕು ದಿನಗಳು ವಿಚಿತ್ರಕಟ್ಟು ಕಟ್ಟಲೆಗಳಲ್ಲಿ ಸಂದುವು. ನಾಲ್ಕ ನೆಯ ದಿನ ಸಂಜೆ ಪುರೋಹಿತರು, ಎಲ್ಲರಿರುವಾಗಲೇ, ಈಗ ತಂದೆಗೆ ಅಭಿವಾದನಮಾಡಿದರೆ ವಿಧಿ ಮುಗಿ ಯಿತು ಎಂದನು. ಆಗವನು ನೆರೆದವರ ಮುಂದೆ ತಂದೆ ಪುರೋಹಿತರಲ್ಲಿ–"ಈ ನಾಲ್ಕು ದಿನದ ನಾಟಕಕ್ಕೆ ಏನು ಹೆಸರು?" ಎಂದು ಕೇಳಿದನು.

---

## ಪ್ರಕರಣ ៷.

## ತಾರುಣ್ಯ.

ಅನಂತಕೃಷ್ಣನಿಗೆ ಉಪನಯನ ಮಾಡಿಯಾಯಿತು. ಕನ್ನಡ ಶಾಲೆಯಲ್ಲಿ ಶಿಕ್ಷಣವನ್ನು ಕೊಡಿಸಿಯೂ ಆಯಿತು. ಇನ್ನೇನು ಮಾಡಬೇಕೆಂಬ ಪ್ರಶ್ನೆಯು ಬಂದಿದೆ. ಮಠಾಧಿಪತ್ಯವು ಕನಸಿನ ಅರಮನೆಯಾಯಿತು. ಸುಳ್ಳು ಜ್ಯೋತಿಷ ಹೇಳಿದನೆಂದು ರಾಮಾಚಾರ್ಯರಿಗಿಷ್ಟು ಸೊಗಸಿನ ಮಂಗಳಾರತಿಯಾಯಿತು. ಅನಂತಪದ್ಮನಾಭ ಆಚಾರ್ಯರಿಗೆ ಹುಡುಗನನ್ನು ಮನೆಯಲ್ಲೇ ಇರಿಸಿಕೊಳ್ಳಲು ಇಷ್ಟವಿರಲಿಲ್ಲ. ಮೊದಲಿನ ಸನ್ಯಾಸಿಗಳು ಇದ್ದಿದ್ದರೆ ಮಠದಲ್ಲೊಂದು ಗಿಂಡಿಮಾಣಿಯ ಕೆಲಸವಾದರೂ ಸಿಗುತ್ತಿತ್ತು. ಅದಿಲ್ಲವೆಂದಾದ ಬಳಿಕ ಅವನನ್ನೇನು ಮಾಡಲಿ? ಹ್ಯಾಸ್ಕೂಲಿಗೆ ಹಾಕುವಾ ಎಂದರೆ ಸಂಬಳಕೊಡದೆ ವಿದ್ಯೆಯಿಲ್ಲ. ಸಂಬಳ ಕೊಡಲು ಮನಸ್ಸಿಲ್ಲ. ಹೀಗಾಗಿ ಹುಡುಗನನ್ನೇ ಕೇಳುವ ಎಂದು ಯೋಚನೆಮಾಡಿದನು. ಹುಡುಗನು ಯಾವ ಜವಾಬುದಾರಿಯೂ ಬೇಡವೆಂದು "ಅಪ್ಪ, ನಿನಗೆ ತೋರಿದಂತೆ" ಮಾಡು ಎಂದನು. ಅವನಿಗೆ ಒಂದು ಹೆದರಿಕೆಯಿತ್ತು. ತನ್ನ ಶಾಲಾ ಸಹಪಾಠಿಗಳ ಗತಿಯೂ ತನಗೆ ಬರುವುದೋ ಎಂದು. ಅದೆಂತಹ ಗತಿಯೆಂದು ನಮ್ಮ ವಾಚಕರಾದರೂ ತಿಳಿಯಲು ಕುತೂಹಲಪಡ

ಬಹುದು. ನಮ್ಮ ಅ. ಕೃಷ್ಣನು ಶಾಲೆಗೆ ಹೋದಂದಿನಿಂದ ನೋಡಿದ್ದೆಂದರೆ, ಅವನ ಸಹಧ್ಯಾಯಿಗಳಲ್ಲಿ, ನಿನ್ನೆ ಇದ್ದವರು ಇಂದಿಲ್ಲ, ಇಂದಿದ್ದವರು ನಾಳೆ ಇಲ್ಲ. ಹೀಗೆಂದರೆ ಅವರು ಪರಲೋಕಯಾತ್ರೆ ತೊಡಗುತ್ತಿದ್ದರೆಂದಲ್ಲ. ಅವರದು ಪರದೇಶದ ಯಾತ್ರೆ. ಅಲ್ಲಿನ ಬ್ರಾಹ್ಮಣ ಹುಡುಗರಿಗೆ 6×3 ಎಂದು ಹೇಳಲು ಬಂದೊಡನೆ ಅವರ ಹಿರಿಯರು ಅವರನ್ನು ಬೆಂಗಳೂರಿಗೆ ರಫ್ತು ಮಾಡುತ್ತಿದ್ದರು. ಈ ಸಮುದಾಯದ ಬಾಲಕರು ಪಾಕಶಾಸ್ತ್ರದಲ್ಲಿ ನಿಪುಣರು. ಇದು ಬ್ರಾಹ್ಮಣ ಹುಡುಗರ ಪಾಡು. ಉಳಿದ ಜಾತಿಯವರಲ್ಲಿ ಕೆಲವರು ಹ್ಯಾಸ್ಕೂಲು ಏರುವವರು. ಹಲವರು, ಊರಲ್ಲೆ ಉಂಡಾಡಿಗಳಾಗಿರುವವರು. ಅವರಲ್ಲಿ ಎರಡು ಮುಖ್ಯ ತಂಡ. ಒಂದನೇ ತಂಡದವರು ಬೀಡಿಕಟ್ಟುವವರು, ಎರಡನೆಯವರು ಅದನ್ನು ನಾಶಪಡಿಸುವವರು. ಅವನ ಶಾಲೆಯಲ್ಲಿ ಕದ್ದು ಕದ್ದು ಧೂಮ್ರಪಾನ ಮಾಡುವವರು ಬಲುಮಂದಿ; ದೊಡ್ಡವರು ಎದುರಿನಿಂದ. ನಮ್ಮ ಸೂತ್ರಧಾರಿಗೆ ಅದು ಆಶ್ಚರ್ಯವೆನಿಸಲಿಲ್ಲ. ಇದು ಸಂಚಾರೀ ಅಗ್ನಿಹೋತ್ರದ ವಿಧಾನವೆಂದು ತಿಳಿದುಕೊಂಡು, ಅವನೂ ಪಾರಮಾಡಿದನು. ಆದರೆ ಅದನ್ನು ಕ್ರಮಕ್ಕೆ ಕೊಳ್ಳುವ ತ್ರಾಣ ಅವನಿಗಿರಲಿಲ್ಲ. ಯಾರಾದರು ಕೊಟ್ಟರೆ ಮಾತ್ರ ಅವನು ಧೂಮಶಕಟವಾಗುತ್ತಿದ್ದ. ಹೂಂ—ಕಥಾಸರಣಿಯು ತಪ್ಪಿತು. ಅನಂತಪದ್ಮನಾಭರಿಗೆ ಮಗನನ್ನು ಬೆಂಗಳೂರಿಗೆ ಕಳುಹಿಸುವ

ಯೋಚನೆ ಬಂದಿತ್ತು ಅಲ್ಲಿ ಹುಡುಗನ ಚಿಕ್ಕಪ್ಪನೊಬ್ಬ ನಿರುವನು. ಅವನು ಹುಡುಗನನ್ನು ಕಳುಹಿಸಿಕೊಡಲೂ ಬರೆದಿದ್ದ. ಆದರೆ ಈ ಕಾಗದವು ತಂದೆಯ ಕೈಗೆ ಸಿಗುವ ಮೊದಲು ಮಗನ ಕೈಗೆ ಸಿಕ್ಕಿದುದರಿಂದ, ಸುದ್ದಿ ಆಚಾರ್ಯರಿಗೆ ಮುಟ್ಟಲಿಲ್ಲ. ಇತ್ತ ಆಚಾರ್ಯರಿಗಾಗಿ ಕಳುಹುವ ಮನವಿದ್ದರೂ, ಹುಡುಗನು ಕನಕವೈರಿ ಎಂದು ಜಾತಕದಲ್ಲಿದ್ದುದನ್ನು ಕಂಡು, ಸುಮ್ಮನೆ ಬಿಟ್ಟೇಕೂಳಿಗಾದರೆ ಪರವೂರಿಗೇಕೆ ಕಳುಹುವುದೆಂದು ನಿಶ್ಚಯಮಾಡಿದನು ಸಮಯಕ್ಕೆ ಸರಿಯಾಗಿ ಅವನು ಊರ ಛಾಪಖಾನೆಯಲ್ಲಿ ಒಂದು ಉದ್ಯೋಗ ದೊರಕಿಸಿಕೊಂಡನು. ಸಂಬಳದವಿಚಾರ–ಮೊದಲಿನ ಒಂದೆರಡು ವರುಷ ತಿಂಗಳಿಗೆ ಮೂವತ್ತರಂತೆ[1] ಮುಂದೆ ಹೆಚ್ಚಿಸುವುದು, ಬಿಡುವುದು,ಅವನ ಕೆಲಸ ನೋಡಿ. ಊಟಕ್ಕೆ ಮರ ಅನಂತಕೃಷ್ಣನು ಛಾಪಖಾನೆಗೆ ಸೇರಿದವನೇ, ಅಲ್ಲಿ ಮುದ್ರಣಕ್ಕೆ ಬರುವ ಪುಸ್ತಕಗಳನ್ನು ಬಕಾಸುರನಂತೆ ಭಕ್ಷಿಸತೊಡಗಿದ. ಅವನಿಗೀಗ ತನ್ನ ಕಾರ್ಯರಂಗದ ವಿಚಾರವನ್ನು ತಿಳಿಯಲು ಎಷ್ಟು ಓದಿದರೂ ಸಾಲದು. ಹಗಲೆಲ್ಲಾ ಛಾಪಖಾನೆಯಲ್ಲಿ ಮುದ್ರಣಕ್ಕೆ ಬರುವ ಕೆಟಲಾಗಿನಿಂದ ಹಿಡಿದು, ಕಾದಂಬರಿಗಳ ವರೆಗೆ ಓದುವುದು; ಹೊರಗೆ ಬಂದರೆ, ಊರ ಕನ್ನಡ ಪತ್ರಿಕೆಗಳನ್ನು ಓದುವುದು. ಕಂಪೋಜಿಂಗ್ ಹಾಲಿನಲ್ಲೇ ಕುಳಿತು ಸ್ವಲ್ಪ ಇಂಗ್ರೇಜಿ ಸಂಗ್ರಹಿಸಿದ. ಸರಿಯಾಗಿ

---

1 ದಿನ.

ಮಾತನಾಡಲು ಬಾರದಿದ್ದರೂ, ಅವನೀಗ ಹೇಳಿದ್ದಕ್ಕೆಲ್ಲ ಗಕ್ಕೆ ಗಿ|| ಅರ್ಥಮಾಡಬಲ್ಲ.

ಹುಡುಗನಿಗೆ ಹದಿನಾಲ್ಕು ವಯಸ್ಸಾಗಿದೆಯಷ್ಟೆ— ಅಪ್ಪನು ಜಾತಕದ ನಕಲುಗಳನ್ನು ನಾಲ್ಕೂ ಕಡೆಗೆ ಪ್ರಸಾರಕ್ಕೆ ಹೊರಡಿಸಿದ. ತನ್ನ ಮಗ ಅಂಥವನಿಂಥವ ನೆಂದು ಪ್ರಶಂಸೆ ಸಾರಿದನು ಬೇಗ ಮಗನಿಗೊಂದು ಮದುವೆ ಮಾಡಿಸಿ ಹೊಸ ಶ್ರೀಪಾದಂಗಳವರ ಪ್ರಸನ್ನ ತೆಗೆ ಪಾತ್ರನಾಗುವುದರಲ್ಲಿ ಮುಂದಾಳಾಗಬೇಕೆಂಬ ಆಸೆ ಹೊಸ ಸ್ವಾಮಿಯವರಿಗೆ ಈಗ ಹದಿನಾರು ವಯಸ್ಸು ಉಪದೇಶಕ್ಕೆ ತಕ್ಕ ಕಾಲ. ಆಚಾರ್ಯರು ಸುತ್ತಿಸುತ್ತಿ ನಾಲ್ಕಾರು ಮೈಲು ದೂರದ ಹಳ್ಳಿಯಿಂದ ಒಂದು ಸಂಬಸ್ತಿಕೆ ಗಂಟುಹಾಕಿದರು. ಹುಡುಗಿಗೆ ತಂದೆಯಿಲ್ಲ. ಪಾಪದ ತಾಯಿಯೊಬ್ಬಳಲ್ಲದೆ ಇನ್ನಾರಿಲ್ಲ. ವರುಷಕ್ಕೆ ಒಂದೆರಡು ಸಾವಿರದ ವರಮಾನವೂ ಇದೆ. ಅವಳಿಗೆ ಇಲ್ಲದ ರಂಗುಮಾಡಿ ಜಾತಕ ತರಿಸಿ ನೋಡಿದರೆ—ಎಂಥಾ ಜಾತಕ ಅನ್ನುವಿರಿ! ಇದ್ದಿಗೂ ಚಟ್ಟಿಗೂ ಇರುವಷ್ಟು ಮೇಳ. ಹುಡುಗಿಗೆ ಬರೇ ಹದಿನಾಲ್ಕು ವಯಸ್ಸು ಏನೋ ಹುಟ್ಟಿದ ನಕ್ಷತ್ರವು ಸ್ವಲ್ಪ ಕಟ್ಟದ್ದೆಂಬುದರಿಂದ ಮದುವೆ ಬಾಕಿಯಾಗಿ ನಿಂತುಬಿಟ್ಟಿತು. ಬಾಲೆಯು ಇನ್ನೂ ಋತುಮತಿಯಾಗಿಲ್ಲವಾದರೂ ಊರ ಮಂದಿಯ ಬಾಯಿಯಲ್ಲಿ— ಅವಳು ಗೋಪಕನ್ಯೆಯೆಂದು—ಹೆಸರು ಬಿದ್ದಾಗಿದೆ. ಹೀಗಾಗಿ ಹುಡುಗಿಯ ತಾಯಿ ರಾಧಮ್ಮನಿಗೆ ಮಗು

ವನ್ನು ಯಾವದಾದರೂ ಒಂದು ಕೊರಡಿಗೆ ಕೊಟ್ಟರೆ ಸಾಕೆಂದಿತ್ತು. ನಮ್ಮ ಹುಡುಗನ ತಂದೆಗೂ ಬೇಕಾದುದು ಅದೇ. ಆದರೆ—ಮಗನ ಅಧ್ಭುತ ಸ್ವರೂಪವನ್ನರಿತ ಇವನಿಗೆ ಹುಡುಗನ ಮುಂದೆ ಈ 'ಸಮಸ್ಯೆಯನ್ನಿರಿಸುವ, ಇಲ್ಲವೆ ಅವನ ಮೇಲೆ ಹೊರಿಸುವ ಸಾಹಸವಿದ್ದಿಲ್ಲ ಅದಕ್ಕಾಗಿ ಒಂದು ದಿನ ಉಪಾಯದಿಂದ ಹುಡುಗನನ್ನು ಯಾತ್ರೆಯ ನಪದಿಂದ ತಿರುಪತಿಗೆ ಒಯ್ದನು. ಇವರಂತ ಆಕಸ್ಮಿಕವಾಗಿ ಹುಡುಗಿಯ ಮನೆಯವರೂ ಅಲ್ಲಿಗೆ ಬಂದರು. ಆಕಸ್ಮಿಕ ಭೇಟಯಾಯಿತು. ಹುಡುಗ ಹುಡುಗಿಯ ಮುಂದೆಯೇ ಕುಳಿತಿದ್ದ. ಆಗ ರಾಧಮ್ಮ—'ಇವನೇನು ನಿಮ್ಮ ಮಗ' ಎಂದು ಕೇಳಿದಳು. ಅ. ಕೃಷ್ಣನು, "ಅಹುದು, ನಾನೇ? ಏನಾಗಬೇಕು;" ಎಂದನು. ಅವಳ ಎದೆ ಧಸಕ್ಕೆಂದಿತು. ಆಗ ಅಪ್ಪನು "ಮಗೂ ಅನಂತಕೃಷ್ಣ, ಈ ಹುಡುಗಿಯನ್ನು ಕೊಟ್ಟು ನಿನಗೆ ವಿವಾಹ ಮಾಡುವುದಕ್ಕಾಗಿ ಇಲ್ಲಿಯ ತನಕ ನಿನ್ನನ್ನು ಕರತಂದುದು. ಅವರು ಬಂದುದೂ ಅದಕ್ಕೆ. ನೋಡು, ಹುಡುಗಿಯು ಗುಣವತಿ, ರೂಪವತಿ, ವಿದ್ಯಾವತಿ, (ಕನ್ನಡ ಎರಡನೇ ಕ್ಲಾಸು ಫೇಲು.) ಧನವಿದೆ, ಗುಣವಿದೆ, ಲಕ್ಷಣವಿದೆ.... ಹೆಸರೇನಮ್ಮ ನಿನ್ನದು?" ಎಂದನು.

ಬಾಲಿಕೆ:—(ನಾಚಿಕೆಯಿಂದ ಮೋರೆ ತಗಿಸಿದಳು).

ರಾಧಮ್ಮ:— ಕಮಲಾವತಿ.

ಅ. ಕೃಷ್ಣ:—(ಆ) ಗುಣವತಿ, ರೂಪವತಿ, ವಿದ್ಯಾವತಿ—ನಮ್ಮ—ಕಮಲಾವತಿ. ಒಟ್ಟಾರೆ ಬಂತೀಗ ಪ—ಜೀ—ತಿ.

ಅ. ಪ:—ಏನು ಮಗೂ, ಆಗಬಹುದಲ್ಲವೇ?

ಅ. ಕೃಷ್ಣ:—ಅಪ್ಪ. ನಿನಗೇ ಗೊತ್ತು, ನನ್ನನ್ನು ಕೇಳುವುದೇನು? ನೀನು ಹೇಗೂ ಅವರನ್ನು ಬರಹೇಳಿಯಾಯಿತು.

ಅ. ಪ:—(ಹಿಗ್ಗಿನಿಂದ) ಆದರೂ ನಿನ್ನ ಹತ್ತಿರ ಒಂದು ಮಾತು ಕೇಳದೆ ಇರಬಾರದಲ್ಲ

ಅ. ಕೃಷ್ಣ:—ಅಪ್ಪಾ, ಅವಳ ವಯಸ್ಸೆಷ್ಟು

ಅ. ಪ:—ಇನ್ನೂ ಹದಿನಾಲ್ಕಷ್ಟೆ.

ಅ. ಕೃಷ್ಣ:—ತೀರ ಚಿಕ್ಕವಳಾಗಲಿಲ್ಲವೆ!

(ಅಪ್ಪನು ಬೆಪ್ಪಾದನು.)

ಅ. ಕೃಷ್ಣ:—ಇದೇನು ಎರಡನೆಯ ನಾಟಕವೇ!

ಸರಿ ಎಲ್ಲರೂ ಸ್ತಂಭಿತರಾಗಿ ಅವನ ಮೋರೆಯನ್ನು ಮಿಟಮಿಟ ನೋಡುತ್ತ ನಿಂತರು. ಅವನೀಗ ಕಾಡ್ಗಿಚ್ಚಿನಂತೆ ತಮ್ಮ ಮೇಲೆ ಊರಿದು ಬೀಳುವನೆಂದು ಅವರಿಗೆ ಗೊತ್ತು. ಆದರೆ—ಏಕೋ ಅಷ್ಟು ಮುಂದರಿಯಲಿಲ್ಲ. ಯೋಚಿಸಿ ಯೋಚಿಸಿ—"ಹೂಂ, ಎಲ್ಲಾ ಸಿದ್ಧತೆಯಾದ ಬಳಿಕ ಮಾತೇನು? ನಿಮಗೆ ಹೇಗಾದರೂ ಮದುವೆಯಾಗದೆ ನಿರ್ವಾಹವುಂಟೇ" ಎಂದು ಸುಮ್ಮನಾದನು. ತನ್ನ ಮಗನು ಪ್ರತ್ಯಕ್ಷ ರಾಮಚಂದ್ರನೆಂದು ತಂದೆಯು ಮನಗಂಡನು. ಬೇಗ ಬೇಗ ಒಂದು

ಶಾರ್ಟಹ್ಯಾಂಡ ವಿವಾಹ ಸಿದ್ಧತೆಯಾಯಿತು. ನಂಟ ಸ್ತಿಕೆ ಗಂಟುಹಾಕುವುದೆಂದರೆ "ಗಾಡಿ ಎತ್ತಿಗೊಂದು ಜತೆ ಹುಡುಕುವುದಕ್ಕಿಂತ ಸುಲಭ."

ಸರಿ, ಕ್ಷೇತ್ರದ ಪುರೋಹಿತರೊಬ್ಬರು, ವಿವಾಹಾ ರೂಢರಾಗಿ ಮಂತ್ರಸಾಗಿಸಿದರು. ಮಧುವರ್ಕ ವಧೂ ವರರಿಗಡ್ಡ ಹಿಡಿದರು. ಆಚೆ, ಆ ಹುಡುಗ ಮತ್ತು ಹುಡು ಗನ ತಂದೆ; ಈಚೆ, ಹುಡುಗಿ, ತತ್ಕಾಲಕ್ಕೆ ಅವಳ ತಂದೆಯ ಅಧಿಕಾರವನ್ನು ವಹಿಸಿದ ಪುರೋಹಿತರಾಯ. ವಧೂವರರಿಗೆ ಮಾಲೆ ಕೊಡಿಸಿದ್ದಾಯಿತು. ಪಾಪದ ಮಾಲೆಯಲ್ಲಿ ಹೂವು ಬಾಡಿ, ಉದುರಿಹೋಗಿತ್ತು ಆದರೂ ಉಳಿದ ಮಾಲೆಯನ್ನು ಹಿಡಿದು ಸಿದ್ಧರಾಗಿ ನಿಂತರು. 'ಸುಮುಹೂರ್ತ ಸಾವಧಾನ, ಸುಲಗ್ನ ಸಾವಧಾನ'ವೆನ್ನುವಲ್ಲಿಗೆ ಸರಿಯಾಗಿ ಹುಡುಗಿಯ ಹಾರವನ್ನು ಹಾಕಲು ಮಧುಪರ್ಕದ ಈಚೆಗೆ ಕೈತಂದ ಳು. ಅ. ಕೃಷ್ಣನು ಬಾಲಕಿಯ ಕೈಗೆ ತಲೆಯೊಡ್ಡುವ ಬದಲು, ಅವಳೆರಡು ಕರಗಳನ್ನು ಬಲವಾಗಿ ಹಿಡಿದು ಬಳಿಯಲ್ಲಿರುವ ತನ್ನ ತರುಣ ತಂಡೆಯ ಕೊರಳಿಗೆ ಮಾಲೆ ಹಾಕಿಸಿ, ತಕ್ಷಣವೇ ಪರಾರಿಯಾದನು. ಮುಂದೇನಾಯಿತೆಂದು ಅವರೇ ಬಲ್ಲರು.

ಅಲ್ಲಿಂದ ತಂದೆ ಮಕ್ಕಳ ಋಣಕಡಿಯಿತು. ಹುಡು ಗನು ಅಲ್ಲಿಂದ ಪರಾರಿಯಾಗಿ ರೈಲುಬಂಡಿಯಲ್ಲಿ ಕುಳಿ ತನು. ಟಿಕೇಟು ಮಾಸ್ತರರು ಬಂದಾಗಲೆಲ್ಲಾ ಕೆಳಗಿ ಳಿಯುವುದು; ಅವನು ಕಣ್ಮರೆಯಾಗಲು ತಿರುಗಿ

ಏರುವುದು ಹಾಗೂ ಹೀಗೂ, ಉದ್ದೇಶ, ಗೊತ್ತು ಗುರಿಯಿಲ್ಲದೆ, ಊರೂರು ಅಲೆಯತೊಡಗಿದನು. ತನ ಗಂದಿನಿಂದ ಮೂರನೆಯ ಜನುವುದೊರಕಿತೆಂದು ತಿಳಿದನು. ಅದಕ್ಕಾಗಿ ಹೆಸರನ್ನು ಬದಲಾಯಿಸುವ ಯೋಚನೆಮಾಡಿದನು. ಯಾವ ಹೆಸರನ್ನು ಇರಿಸಿಕೊಳ್ಳಲಿ ಎಂದು ಬಹುಹೊತ್ತು ಯೋಚಿಸಿದನು. ಆಗ ಅವನ ಕಂಪೋಜಿಂಗಕಾಲವ ಅನುಭವವುಸಹಾಯ ಬಂದಿತು: ಅಪ್ಪನಿಟ್ಟ ಹೆಸರನ್ನು ಕಿತ್ತು, ಊರ ಹೆಸರಿಗೆ ಒಂದು ಕಾರನ್ನು ನೇರಿಸಿದರಾಯಿತೆಂದು "ಉಡುಪಿಕಾರ್"ನಾದ. ಆದರೆ, ಉಡುಪಿ ಪ್ರಸಿದ್ಧ ಸ್ಥಳವೆಂಬುದರಿಂದ ಅದು ತನ್ನನ್ನು ಉಡುಪಿ ಮಾಣಿಯಾಗುವಂತೆ ಮಾಡೀತೆಂದು ಅಂಜಿ— ಆ ಹೆಸರಿನಲ್ಲಿ ಒಂದು ಸುಧಾರಣೆಮಾಡಿದನು. ಮೊದಲಿನ ಅಕ್ಷರ ಉದುರಿಸಿಬಿಟ್ಟನು. ಸರಿ. ಅವನ ಹೆಸರೀಗ ಎ.ಕೆ. ಡಿಪ್ಕರ್— ಎಂದು.

ಒಂದು ದಿನ ನಮ್ಮ ಡಿಪ್ಕರನು ಬಳ್ಳಾರಿಕಡೆಯಲ್ಲಿ ಸಂಚರಿಸಿ, ಹಾಗೇ ಅಲೆದಾಡುತ್ತ ಹಾಳಾದ ಹಂಪಿಯನ್ನು ಕಾಣಲು ಬಂದನು ಆ ಗುಡಿ, ಹಾಳೂರುಗಳನ್ನೆಲ್ಲಾ ಕಂಡು ಅವನ ಮನಸ್ಸು ತಳಮಳಗೊಂಡಿತು. ಎಲ್ಲಿನೋಡಿದರೂ ಸ್ಮಶಾನಮಯವಾಗಿ ಆ ಊರು ಕಂಡಿತು. ಭರತಖಂಡವೆಲ್ಲ ಹೀಗೇ ಇದೆಯೆಂದೂ ತೋರಿತು. ನಡೆದು ನಡೆದು ಆಯಾಸವಾದುದರಿಂದ, ಮೆಲ್ಲನೆ ಹಂಪಿ ವಿರುಪಾಕ್ಷನ ಗುಡಿಯ ಮಂಟಪದ ಜಗು

ಲಿಯಲ್ಲಿ ಮಲಗಿದನು. ಚೆನ್ನಾಗಿ ನಿದ್ರೆಯೂ ಬಂತು. ರಾತ್ರಿಯಾದುದೂ ತಿಳಿಯಲಿಲ್ಲ. ಬೆಳಗ್ಗೆ ಏಳುವಾಗ ನೋಡುತ್ತಾನೆ: ಸುತ್ತ ನಾಲ್ಕಾರುಮಂದಿ ಮಲಗಿದ್ದರು. ಅವರಲ್ಲೋರ್ವನು ದೃಢಾಂಗನಾದ ಮೂವತ್ತೈದು ವಯಸ್ಸಿನ ಸುಂದರ ಯೌವನಸ್ಥನು. ಗಡ್ಡ ಮೀಸೆಗಳಿದ್ದುವು. ಮೈಮೇಲೆ ಒಂದು ಸೊಗಸಿನ ರೇಷ್ಮೆಕಾವಿಯಿತ್ತು. ಬಳಿಯಲ್ಲಿ ಮಲಗಿದವರನ್ನೂ ಕಂಡರೆ, ಅವರು ಶ್ರೀಮಂತರಂತೆ ಕಂಡಿತು. ಇವನು ಎದ್ದು ಅಲ್ಲಿಂದ ಹೊರಡಬೇಕೆನ್ನುವಷ್ಟರಲ್ಲಿ ಸನ್ಯಾಸಿಗಳ ಸವಾರಿಯೂ ಎದ್ದಿತು. ಎದ್ದಮೋರೆಗೇ ಡಿಪ್ಕರನ ದರುಶನವಾಯಿತು. ಅವನ ಮುಖಸೌಂದರ್ಯದಿಂದ ಅವರು ಮುಗ್ಧರಾಗಿ ಕುಳಿತುಬಿಟ್ಟರು. ನಮ್ಮ ಭೂಪನೆದ್ದು ನಿಲ್ಲಲು ಅವರು--"ಸ್ವಲ್ಪ ತಾಳಿರಿ, ನಮ್ಮೊಡನೆ ಒಂದೆರಡು ಮಾತುಗಳನ್ನಾಡಬಾರದೇ"--ಎಂದು ಕೇಳಿದರು.

ಡಿಪ್ಕರ:—ಏನು ವಿಷಯ, ನನಗೀಗ ಹೊರಡಬೇಕಾಗಿದೆ.

ಸನ್ಯಾಸಿ:—ಅಷ್ಟೇನು ಅವಸರ?

ಡಿಪ್ಕರ:—ನಿಮಗವಸರವಿರಲಾರದು ನಾನು ಉಣ್ಣದೆ ಮೂರುದಿನಗಳಾದುವು.

ಸನ್ಯಾಸಿ:—ಉಣ್ಣದೆ ಮೂರುದಿನಗಳಾದುವು! ಅದೇನು ವ್ರತವಿದೆಯೋ?

ಡಿಪ್ಕರ:—ಆಹುದು, ಆಹಾರ ಸಿಗುವ ಮೊದಲು ಉಣ್ಣುವದಿಲ್ಲೆಂಬ ವ್ರತ. ಸ್ವಾಮೀ, ಪರಿಹಾಸ್ಯ ಸಾಕು.

ಸನ್ಯಾಸಿ:— ನಿಮ್ಮನ್ನು ಪರಿಹಾಸ್ಯಮಾಡಿಲ್ಲ. ನಿಮ್ಮನ್ನು ನಾವು ಹಾಗೆಯೇ ಕಳುಹಿಸಲಾರೆವು. ನಮ್ಮಲ್ಲೀಗ ಉಪಾಹಾರ ಮಾಡದೆ ಹೊರಡಬಾರದು

ಹೀಗೆಂದು ಒಂದು ದಬ್ಬಿಯಿಂದ, ತಾವು ಬರುವಾಗ ತಂದಿದ್ದ ಚಪಾಟಿ ಬಾಳೆಹಣ್ಣುಗಳನ್ನು ಅವನ ಮುಂದಿರಿಸಿದನು ಡಿವ್ಕರಗೆ ಅತಿರೇಕ ಹಸಿವಾಗಿತ್ತು. ಬೇಗ ಬೇಗ ಸ್ವಲ್ಪ ನೀರನ್ನು ತಂದು ಮೋರೆ ತೊಳೆದುಕೊಂಡು ಫಲಾಹಾರವೆಬ್ಬಿಸಿದನು. ಅವನ ಮುಂದೆ ಬಂದ ತಿಂಡಿಯಲ್ಲಿ ಶಿಷ್ಟಾಚಾರದಸಲುವಾಗಿಯೂ ಶೇಷವಿರಿಸಲಿಲ್ಲ ಇವನ ಉಪಾಹಾರ ಮುಗಿಯಲು, ಉಳಿದವರೂ ಎದ್ದರು. ಇವರೆಲ್ಲರಲ್ಲಿ ಪರಸ್ಪರ ಮಾತುಕಥೆಗಳಾದುವು. ನಮ್ಮ ತರುಣನು ಅವರ ಮುಂದೆ ತನ್ನ ಪೂರ್ವ ವಾರ್ತೆಯನ್ನು ಇರಿಸಲಿಲ್ಲ. ತಾನೋರ್ವ ಅನಾಥಬಾಲನೆಂದೂ, ಊರೂರು ಅಲೆಯುತ್ತಿರುವುದೇ ತನ್ನ ಕೆಲಸವೆಂದೂ ಹೇಳಿದನು ತನ್ನ ನವೀನ ಹೆಸರನ್ನೂ ಅವರ ಮುಂದಿರಿಸಲು, ಅವರಿಗೆ ತೀರ ಆನಂದವಾಯಿತು ಕಾರಣ, ಅವರು ವಿದ್ಯಾವಂತರಾಗಿದ್ದರು. ಈ ರೀತಿಯ ನವಸುಧಾರಣೆಯು ಅವರ ಮನಸ್ಸಿಗೆ ತೀರ ಒಪ್ಪುವುದಿತ್ತು ಅವರಲ್ಲೊಬ್ಬನು, ಮೆಲ್ಲನೆ—'ಸ್ವಾಮಿಜೀ, ಇವರು ನಿಮ್ಮೊಡನೆ ಇರಬಾರದೇಕೆ? ಅವರೂ ಅವಿವಾಹಿತರು. ಮನೆಯ ತಾಪತ್ರಯಗಳಿಲ್ಲ. ನಿಮ್ಮಂತಹ ಸನ್ಯಾಸಿಗಳಿಗೆ ತಕ್ಕ ಗೆಳೆಯರಾಗಲು ಅಡ್ಡಿಯಿಲ್ಲ'— ಎಂದನು. ಸ್ವಾಮಿ

ಯುವರ ಮನಸ್ಸಿನಲ್ಲೂ ಅದೇ ವಿಚಾರ ಮೊಳೆತಿತ್ತು; ಆದರ ಕೇಳುವ ಸಾಹಸವಿದ್ದಿಲ್ಲ ಈಗ ಪ್ರಶ್ನೆಯು ಹೇಗೂ ಬಂದಿತೆಂದ ಬಳಿಕ ಅವರು ದಿವ್ಕರನ ಉತ್ತರ ನಿರೀಕ್ಷಣೆ ಮಾಡತೊಡಗಿದರು ದಿವ್ಕರಗೆ ಒಮ್ಮೆಗೇ 'ಹೂಂ'ಯೆನ್ನುವ ಸಾಹಸವಾಗಲಿಲ್ಲ. ಆದರೆ ಸದ್ಯಕ್ಕೆ ತಾನಿರುವುದು ಅಪರಿಚಿತನಾಡು, ಅಪರಿಚಿತ ಜನರು; ಆದುದರಿಂದ ಈ ಆತಿಥ್ಯವನ್ನು ತತ್ಕಾಲಕ್ಕಾಗಿಯಾದರೂ ಸ್ವೀಕರಿಸಬಾರದೇಕೆ ಎಂದು ಯೋಚಿಸಿದನು ಅವರು ಯತಿಗಳಾದರೂ, ಅವರೊಡನೆ ಇದ್ದರೆ ಹಿಜೆರ್ಪೆಟ್ವ, ತಿಂಡಿತಿನಸು, ಬಟ್ಟೆಬರೆಗಳಿಗೆ ಕೊರತೆಯಿಲ್ಲವೆಂದು ತೋರಿತು ಕೊನೆಗವನು ಯೋಚಿಸಿ, ಯೋಚಿಸಿ--' 'ಸ್ವಲ್ಪಕಾಲ ಇದ್ದು ನೋಡುವ'—ಎಂದನು ಆ ಸೂಚನೆಯನ್ನು ಅವರಾವರೂ ನಿರಾಕರಿಸಲಿಲ್ಲ ಏಕೋ ಅವರ ಪ್ರೇಮವು ಒಮ್ಮೆಗೇ ಈ ತರುಣನಲ್ಲಿ ಬೇರೂರಿತು.

ಸರಿ, ಆ ದಿನ ಮತ್ತು ಮರುದಿನ ಅವರೆಲ್ಲರು ಹಂಪಿ ಯಾತ್ರೆ ಮುಗಿಸಿಕೊಂಡು, ಹುಬ್ಬಳ್ಳಿಗೆ ಹೊರಟರು. ನಮ್ಮ ಯತಿಯವರಿರುವುದು ಈಗ ಹುಬ್ಬಳ್ಳಿಯಲ್ಲಿ. ಅವರ ಸ್ವಂತ ಊರಾವುದೋ ನಮಗೂ ತಿಳಿಯದು. ಹೆಸರು — 'ಪ್ರಭುದಾಸ ಮಹಾರಾಜ' ಎಂದು. ಅವರ ಶಿಷ್ಯರು ನಾಲ್ವರಲ್ಲಿ ಇಬ್ಬರು ಹುಬ್ಬಳ್ಳಿಯವರು, ಇಬ್ಬರು ಧಾರವಾಡದವರು ಅಂತು ಸದ್ಯಕ್ಕೆ ಮಹಾರಾಜರು ಹುಬ್ಬಳ್ಳಿ ಬಿಟ್ಟುಬಿಡುವ ಪ್ರಸಂಗವಿದ್ದಿಲ್ಲ.

## ಪ್ರಕರಣ ೬.

# 'ಪ್ರಭುದಾಸ ಮಹಾರಾಜರ ಪಾದಪಂಕಜಗಳಲ್ಲಿ.'

ಪ್ರಭುದಾಸ ಮಹಾರಾಜರ ಗೆಳೆತನವನ್ನು ಸ್ವಲ್ಪ ಸಮಯುಕ್ಕಾದರೂ ಒಪ್ಪಿಕೊಂಡುದುದರಿಂದ ಆವಾಗ ಏನೇನು ಅನುಭವಗಳಾದುವು ಎಂಬುದನ್ನು ಈ ಪ್ರಕರಣದಲ್ಲಿ ಬಣ್ಣಿಸುವ ಉದ್ದೇಶವು ನಮಗಿದೆ. ಪ್ರಭುದಾಸರು ಮಹಾರಾಜರಾದರೂ ಯಾವುದೊಂದು ನಾಡಿನ ರಾಜರಲ್ಲ. 'ಮಹಾರಾಜ'ರೆಂಬುದು ಮಹಾರಾಷ್ಟ್ರದಲ್ಲಿ ಸಾಧುಸಂತರಿಗಿರುವುದು ಬಿರುದಾವಳಿ. ಹಿಂದಿನ ಕಾಲದ ಸಾಧುಸಂತರು ಮಹಾರಾಜರಾಗಲು ಭಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಅರಸರು ಮಹಾರಾಜರಾಗಲು ರಾಜ್ಯವನ್ನು ಪಟ್ಟಿಸಿಕೊಳ್ಳುವರು. ಆದರೆ ಈಗಣ ದಿನಗಳಲ್ಲಿ ಕೆಲವೊಂದು ವಿಚಿತ್ರಗುಣವುಳ್ಳವನಾವನೂ ಮಹಾರಾಜನಾಗಬಲ್ಲನು. ಮಹಾರಾಷ್ಟ್ರದಲ್ಲಿ ಇಂಥ ಮಹಾರಾಜರು ಬಹಳ. ಕನ್ನಡ-ಮರಾಠಿ ವಾದವನ್ನಡಗಿಸಲು ಕೆಲವೊಂದು ಮಂದಿ ಮಹಾರಾಜರು ಆಗಾಗ ಹುಬ್ಬಳ್ಳಿ ಪ್ರಾಂತ್ಯಕ್ಕೂ ಬರುವರು. ಅಂಥವರಲ್ಲಿ ನಮ್ಮ ಪ್ರಭುದಾಸರೊಬ್ಬರು. ಅವರಲ್ಲಿ ಜನರನ್ನು ಸೆಳೆಯುವ ಜಾಣ್ಮೆಯು ಬಹಳವಿದೆ. ಇನ್ನು ಜನರು ಸಾಕಷ್ಟು ಮಂಕರಾಗಿರುವಲ್ಲಿ ಇಷ್ಟೊಂದು ಮಂತ್ರವೂ ಬೇಕಾಗಿಲ್ಲ. ನಮ್ಮ ಪ್ರಭುರಾಜರು ನವವಿಧಾನದ

ಯೋಗಿಗಳು; ಭಕ್ತರು. ಅವರು— ಕೀರ್ತನೆಯ ಜಾಣ್ಮೆಯಿಂದಲೂ, ಕಾಲೋಚಿತ ಉಪಕಥೆ, ಕಥೆ, ಹಾಡು, ಹಾಸ್ಯ, ಹಾವಭಾವ, ಇವುಗಳಿಂದ ಕೂಡಿದ ಕೀರ್ತನೆಗಳಿಂದಲೂ–ಬೇಕೆನ್ನುವಷ್ಟು ನರಕುರಿಗಳನ್ನು ಮರುಳುಗೊಳಿಸಬಲ್ಲರು. ಅಷ್ಟೇ ಅಲ್ಲ, ವಿಶೇಷತರದ ವಕ್ತೃಗಳು ಹುಬ್ಬಳ್ಳಿಯ ಒಂದಲ್ಲ ಒಂದು ಗುಡಿಯಲ್ಲಿ ಅವರ ಧಾರ್ಮಿಕ ಉಪನ್ಯಾಸಗಳು ಇದ್ದೇ ಇವೆ ವೇದ, ವೇದಾಂತ, ಉಪನಿಷತ್, ಪುರಾಣ–ಇವುಗಳನ್ನು ಕೂರ ವೈಜ್ಞಾನಿಕ ದೃಷ್ಟಿಯಿಂದಲೂ ಪ್ರತಿಪಾದಿಸಬಲ್ಲರು. ಅಸ್ಪೃಶ್ಯತೆ, ಜಾತಿಭೇದ ವಿಚಾರಗಳು ಧರ್ಮಕ್ಕೆ ಎಷ್ಟು ಅವಶ್ಯವೆಂದು ಅವರು ಶಾಸ್ತ್ರೋಕ್ತವಾಗಿ ಮಾತ್ರವಲ್ಲ, "ಸೈನ್ಸ್"ಗಳ ದೃಷ್ಟಿಯಿಂದಲೂ ತೋರಿಸಬಲ್ಲರು ಅವರ ಪ್ರತಿ ಆದಿತ್ಯವಾರದ ಕೀರ್ತನೆಗೆ ಶೈವ, ವೀರಶೈವ, ವೈಷ್ಣವ, ಕಡು ವೈಷ್ಣವ, ಈ ಎಲ್ಲ ಪಂಥಗಳ ಮರಿಮೊಟ್ಟೆಗಳಿಂದ ಹಿಡಿದು ಮುದಿಗೊಡ್ಡುಗಳ ವರೆಗೆ ಬಂದು ಕಿಕ್ಕಿರಿಯುತ್ತಿದ್ದುವು ಆ ಊರಿಗೆ ಬಂದ ಬಂದ ನಾಟಕ ಕಂಪೆನಿಯವರು ಇವರನ್ನು ತಪ್ಪದೆ ತಮ್ಮ ನಾಟಕಕ್ಕೆ ಕರೆದೊಯ್ಯುತ್ತಿದ್ದರು ಕಾರಣ–ಇವರು ಹೋದಲ್ಲಿ ಜನಸಂದಣಿಯು ಬಹಳ ಎರಡನೆಯದಾಗಿ ನಾಟಕದ ದಿನ ಕೀರ್ತನೆ ಇಟ್ಟಲ್ಲಿ ನಾಟಕದವರ ಬಾಯಿಗೆ ಮಣ್ಣು. ಇನ್ನು ಪ್ರತಿನಿತ್ಯವೂ ಅವರ ವಿಶಾಲವಾದ ಮನೆಯಲ್ಲಿ ನಡೆಯುತ್ತಿರುವ ಭಜನೆಗೆ ಊರ ತರುಣ ತರುಣಿಯರೆಲ್ಲ ಪತಂಗದಂತೆ ಬಂದು ಕಲೆಯುತ್ತಿದ್ದರು.

ಪ್ರಭುರಾಜರು ಚಿಟಕಿಹಿಡಿದು ಕುಣಿಯುವುದನ್ನು ಕಾಣುತ್ತ ಕುಳಿತ ತರುಣಭಕ್ತರಿಗೆ ತಾವಾದರೂ ಬೂಟು ಪೆಂಟಲೂನ್— ಇವುಗಳನ್ನು ಕಳಚದೆ ಸಹ ಕುಣಿಯು ವಷ್ಟು ಉತ್ಸಾಹವುಂಟಾಗುತಿತ್ತು ಪ್ರಭುದಾಸರು ಹುಬ್ಬಳ್ಳಿಗೆ ಬಂದಂದಿನಿಂದ ಪ್ಲೇಗಿನಂತ ಭಕ್ತಿಣಿಯರು ಒರತೂವಗಿರುವರು ಭಕ್ತಿಣಿಯರು—(ಎಂದು ಉಪ ಯೋಗಿಸಿದಕ್ಕೆ ಕ್ಷಮೆಯಿರಲಿ!) ಇನ್ನು ಶಿಷ್ಯರಿಗೆ ಗುರು ಗಳನ್ನು ಅವರ ಠಿಕಾಣಿಯ ತನಕ ಬಂದು ಕಾಣುವ ಉತ್ಸಾಹವಿದ್ದಂತ, ಅವರಿಗಾದರೂ ಇವರನ್ನು ತಮ್ಮ ಮನಗೆ ಒಯ್ಯುವ ಉತ್ಸಾಹವೂ ಕಡಿಮೆ ಇದ್ದಿಲ್ಲ. ಹೀಗಾಗಿ ಪ್ರಭುರಾಜರು ತಮ್ಮ ಮನೆಯಲ್ಲಿ ಕಾಣಸಿಗು ವುದು ಕೇವಲ ಭಜನಿಯ ಕಾಲಕ್ಕೆ ಮಾತ್ರ. ಉಳಿದ ಕಾಲದಲ್ಲಿ ಶಿಷ್ಯಕೋಟಿಯ ಗುಡಿಸಲುಗಳಲ್ಲಿ ಶಿಷ್ಯರಿ ಗಂತು ಗುರುಸೇವೆ ಮಾಡಿದಷ್ಟು ಸಾಲದು. ನವಪುತ್ರ ವಂತ ನಾರಿಯರು ತಮ್ಮ ಮಕ್ಕಳ ಸುಖದುಃಖವನ್ನು ಸಹ ಎಣಿಸದೆ ಮನೆಯಲ್ಲಿದ್ದ ಹಾಲನ್ನೆಲ್ಲ ದೂದುಪೇಡ ಮಾಡಿ, ಗುರುಗಳಿಗೆ ಅರ್ಪಿಸುತ್ತಿದ್ದರು. ಅದನ್ನು ಮಾಡಲು ತಿಳಿಯದವರು ತಮ್ಮ ಪತಿರಾಯರ ಕಿಸ ಯಿಂದ— ಹೇಳಿಯೊ, ಹೇಳದೂ,— ಕಾಸುಗಳನ್ನು ಜಾರಿಸಿ ಹೊಟೆಲುಗಳಿಂದಲಾದರೂ ಪೇಡ ಒಯ್ಯು ತ್ತಿದ್ದರು. ಹೀಗೆ ಹೇಳುವಾಗ ದೂದುಪೇಡಕ್ಕೂ ಭಕ್ತಿಗೂ ಏನಾದರೂ ಸಂಬಂಧ ಇರಬಹುದೇ ಎಂದು ನಮ್ಮ ವಾಚಕರಿಗೆ ಸಂಶಯಬರಬಹುದು ಅದರ

ರಹಸ್ಯವಿಷ್ಟೆ— ಪ್ರಭುದಾಸರು ತಮ್ಮ ಹಿಂದಿನ ಜನ್ಮ ದಲ್ಲಿ-ಅತಿ ಪೂರ್ವಜನ್ಮದಲ್ಲಿ —ಶ್ರೀ ಕೃಷ್ಣರಾಗಿದ್ದರಂತೆ! ಕೃಷ್ಣನಂತೂ ಕ್ಷೀರಪ್ರಿಯನು; ಆದಕಾರಣ ಗೋಪ ಕನ್ನೆಯರು ಹಾಲನ್ನು ಒಗ್ಗುತ್ತಿದ್ದರು. ಹಾಲಿಗೆ ಸಕ್ಕರೆಹಾಕಿದರೆ ಮತ್ತಷ್ಟು ರುಚಿಕರವಲ್ಲವೇ? ಹೀಗಾಗಿ ಅರ್ವಾಚೀನ ಭಕ್ತಿಯು ದೂದುಪೇಡದ ರೂಪಹೊಂದಿ ತು ಪ್ರಭುದಾಸರಿಗಾದರೂ ಯೋಗ ಬಲವಿಲ್ಲದಿದ್ದರೆ ಈ ಭಕ್ತರ ಕಾಣಿಕ ಸ್ವೀಕರಿಸಿ ಸ್ವೀಕರಿಸಿ ಸಿಹಿಮಾತ್ರ ರೋಗವೇ ತೊಡುಗುತ್ತಿತ್ತು ಶಿಷ್ಯರ ಪ್ರೀತಿಯು ಗುರು ವರ್ಯರ ಮೇಲೆ ಕೇವಲ ದೂದುಪೇಡಾ ಸಮರ್ಪಣೆ ಯಿಂದಲೇ ತೃಪ್ತಿಯಾಗುತ್ತದೆಂದು ತಿಳಿಯಬೇಡಿರಿ. ಅವರ ಹೃದಯದ ಆಳವನ್ನು ಬಲ್ಲವರಾರು? ಅನೇಕ ಬಾಲಿಕೆಯರು, ತಮ್ಮ ಪತಿಬಂಧಿರ ಕೋಪತಾಪಗಳನ್ನು ಸಹ ಲಕ್ಷಿಸವೆ ಅವರನ್ನು ಮನೆಗೆ ಕರೆತರುವರು; ತಾವೇ ಸ್ನಾನಮಾಡಿಸುವರು; ಬಳಿಕ ನೂತನವಾದ ಪಟ್ಟೆ ಪೀತಾಂಬರಗಳಲ್ಲಿ ಅವರನ್ನು ಆಚ್ಛಾದಿಸಿ, ದಿಂಬು ಪರ್ಯಂಕಗಳ ಮೇಲೆ ಕುಳ್ಳಿರಿಸಿ, ಅವರ ಪಾದಸೇವೆ ಯನ್ನು ಮಾಡುವರು ಕಾಲನ್ನು ಹಿದಿಸಿಕೊಂಡು ಹಿದಿಸಿ ಕೊಂಡು, ಅವರ ಚರಣಯುಗಳೆಲ್ಲ ಹತ್ತಿಯಂತಾಗಿವೆ. ಇನ್ನು ಕೆಲವರು ಅವರ ಪಾದಸೇವೆಯನ್ನುಮಾಡುತ್ತಿದ್ದರೆ—ಉಳಿದವರು ಗಾಳಿಹಾಕುತ್ತಲೋ, ಬಾಯಿಗೆ ದೂದು ಪೇಡವನ್ನುಹಾಕಿ ಆ ಉಚ್ಛಿಷ್ಟವನ್ನು ಭುಂಜಿಸುತ್ತಲೋ, ಕಾಲಕಳೆಯುವರು. ಪ್ರಭುರಾಜರು ಈ ರೀತಿ ಭಕ್ತರ

ಪೀಡೆಯನ್ನು ಸಹಿಸಿ, ಅವರ ಭಕ್ತಿಗೆ ಪ್ರಸನ್ನರಾಗಿ, ನಾಲ್ಕು ಉಪದೇಶದ ಮಾತುಗಳನ್ನಾಡುವರು 'ಸಂಸಾರಿಗರಿಗೆ ಗುರುವೇ ಬ್ರಹ್ಮನು; ಗುರುವೇ ವಿಷ್ಣುವು; ಗುರುವೇ ಮಹೇಶ್ವರನು'–ಎನ್ನುವರು 'ಗುರುವಿಂದ ಭಕ್ತಿಮುಕ್ತಿ ಪ್ರಾಪ್ತಿ' ಎನ್ನುವರು 'ಗುರುಸೇವೆಯನ್ನು ಮಾಡುವವರಿಗೆ ಸಿಶ್ಚಯವಾಗಿಯೂ ಸ್ವರ್ಗಪ್ರಾಪ್ತಿ' ಎನ್ನುವರು ಆಗ ಭಕ್ತಾವಳಿಯೂ ಈ ಉಪದೇಶಾಮೃತವನ್ನು ಕುಡಿದು ಮತ್ತರಾಗಿ "ಜಯ ಜಯ ಜಯ ಜಯ ಪ್ರಭುರಾಜ। ಜಯ ಜಯ ಜಯ ಜಯ ಗುರುರಾಜ॥" ಎಂದು ಗುರುನಾಮ ಸಂಕೀರ್ತನೆಯನ್ನು ಮಾಡುವರು ಇನ್ನು ಹತ್ತಿರದವರು ಅವರ ದರ್ಶನವನ್ನು ಸದಾ ಮಾಡುತ್ತಿರುವರಾದರೆ ದೂರದವರಾದರೂ ಅದು ಅಲಭ್ಯವೆಂದು ತಿಳಿಯಲಿಲ್ಲ ಎಲ್ಲೆಲ್ಲಿಂದೆಲ್ಲ ಅವರನ್ನು ಕಾಣಲು ಜನರು ಬರುತ್ತಿದ್ದರು ಕ್ರಿಸ್‌ಮಸ್, ಮತ್ತು ನೆಕೆಗಾಲದ ರಜೆದಿನಗಳಲ್ಲಿ ಹುಬ್ಬಳ್ಳಿಯ ಗುಡಿಸಲುಗಳಲ್ಲಿ ಮಂದಿ ಕಿಕ್ಕಿರಿಯುತ್ತಿತ್ತು ನಗರವನ್ನು ಬಿಟ್ಟು ಮರಳಿದ ಬಳಿಕವೂ ಅವರಿಗೆ ಗುರುದೇವನ ವಿಸ್ಮರಣೆ ಆಗುತ್ತಿರಲಿಲ್ಲ. ಅವರ ಭಾವಚಿತ್ರವನ್ನು ಮನೆಗೊಯ್ದು ಪೂಜಿಸುವರು; ಅವರ ಹೆಸರಿನಲ್ಲ ಸಪ್ತಾಹಗಳನ್ನು ನಡೆಸುವರು. ಹೆಚ್ಚೇನು ಗುರುರಾಯರು ನಿರ್ವಾಣಾವಸ್ಥೆಗೆ ಮುಟ್ಟುವ ಮೊದಲೇ ಅವರ ಸಲುವಾಗಿ ಒಂದು ಅಮೃತಶಿಲೆಯ ಸಮಾಧಿಯನ್ನು ಕಟ್ಟಬೇಕೆಂದು ವರ್ಗಣಿ ಪಟ್ಟಿಯೊಂದು

ಹೊರಟು, ಈಗಾಗಲೇ ಐವತ್ತುಸಾವಿರಕ್ಕೆ ಮಿಕ್ಕಿ ಹಣ ಕೂಡಿದೆ. ಊರಿನ ಪ್ರತಿ ಕಾಫಿಹೊಟೆಲಿನ ಸೈನ್ ಬೋರ್ಡಿನ ಮೇಲೂ 'ಪ್ರಭುರಾಜ ಪ್ರಸನ್ನ' ಎಂದು ಬರವಣಿಗೆ ಇದೆ. ಒಬ್ಬ ಮಾರ್ವಾಡಿಯಂತು ತನ್ನ ಉಪಹಾರಗೃಹಕ್ಕೆ 'ಪ್ರಭುರಾಜ ಉಪಹಾರ ಗೃಹ' ಎಂದು ಹೆಸರಿಡಿಸಿರುವನು. ಕಾರಣ–ಅವನಲ್ಲಿಗೆ ಪ್ರಭು ರಾಜರ ಶಿಷ್ಯರು ದೂದುಪೇಡಾ ಖರೀದಿಗೆ ಬರುವುದು ಬಹಳ,

ಶಿಷ್ಯರು ಈ ರೀತಿ ಅಪ್ರತಿಮ ಭಕ್ತಿಯನ್ನು ತೋರಿ ಸಿದರೆ ಗುರುಗಳೆಂತಿರಬೇಕು? ಎಲ್ಲರೂ 'ದೇವರನ್ನು ತೋರಿಸಿರಿ'—ಎಂದೇ ಅಲ್ಲಿಯ ವರೆಗೆ ಬರುವುದಿಲ್ಲ. ಅಲ್ಲದಿದ್ದರೆ ಕೆಳಪೇಟೆಯ ವಜೀರಿಯೂ ಅಲ್ಲಿಗೆ ಬರಲು ಕಾರಣ? ಅವಳಿಗೆ ಮಕ್ಕಳಿಲ್ಲ. ಬೀಬಿಯಾದರೂ ಹಿಂದೂ ಪ್ರಭುರಾಜರ ಸೇವೆಯಿಂದ ಈ ಅಪರ ವಯಸ್ಸಿ ನಲ್ಲಾದರೂ ಸಂತತಿ ಪ್ರಾಪ್ತಿಯಾಗಬಹುದೆಂದು ಆಸೆ. ಇನ್ನು ನಮ್ಮ ಕೇಶವಾಚಾರ್ಯರಿಂದ ಹಿಡಿದು ಜಯ ರಾಮಾಚಾರ್ಯರ ತನಕ ಬರುವರು. ಅವರಿಗೂ ಮಕ್ಕಳು ಬೇಕೆಂದು ತಿಳಿಯಬೇಡಿರಿ; ಇದ್ದ ಮಕ್ಕಳು ಹೆಚ್ಚಾಗಿವೆ. ಪ್ರಭುರಾಜರ ಸಂದರ್ಶನದಿಂದ ವಾರಕ್ಕೆ ನಾಲ್ಕಾರಾದರೂ ಭೋಜನ ಪ್ರಾಪ್ತಿ ಅವರಿಗೆ ಇನ್ನು ತಮ್ಮ ಹೆಣ್ಣುಮಕ್ಕಳಿಗೆ ಮದುವೆಯ ಖರ್ಚಿಗೆ ಹಣ ಬೇಕೆಂದು ಕೆಲವರು ಬರುವರು. ಸ್ವತಹ ಪ್ರಭು ರಾಜರು ಕಾಸನ್ನು ಮುಟ್ಟದಿದ್ದರೂ ಅವರ ಶಿಷ್ಯರು

ಈ ಆರ್ತಿಗಳ ದುಃಖವನ್ನು ಪರಿಹರಿಸುವರು. ಈಗೀಗ ರೋಗಪರಿಹಾರಕ್ಕಾಗಿ ಅಲ್ಲಿಗೆ ಬರುವವರ ಸಂಖ್ಯೆಯು ಹುಬ್ಬಳ್ಳಿ ಕೋಪರೇಟ್ವು ಆಸ್ಪತ್ರೆಗೆ ಹೋಗುವ ಸಂಖ್ಯೆಗಿಂತ ಹೆಚ್ಚಾಗಿದೆ ಏಸಿಲ್ಲ, ಪ್ರಭುರಾಯರು ತಮ್ಮ ಮಾದುವೇಡಾ ಉಚ್ಛಿಷ್ಠವನ್ನು ಅನುಗ್ರಹಿಸಿದ್ದಾರೆ–ಬಂಜೆಯರು ಗರ್ಭಿಣಿಯರಾಗುವರು; ಮುದುಕಿಯರು ಯೌವನೆಯರಾಗುವರು; ರೋಗಿಗಳು ದೃಢಕಾಯರಾಗುವರು — ಹೀಗೆಂದು ಊರಲ್ಲೆಲ್ಲಾ ಗಟ್ಟಿಯಾದ ಸಂಬಿಕೆ ಹುಟ್ಟಬಿಟ್ಟದೆ ಇಷ್ಟೆಲ್ಲ ಊರಮಂದಿಯ ಹೇಳಿಕೆಯಿಂದ ನಾವು ಕೇಳಿದ್ದು ಇನ್ನು ಅವರ ಶಿಷ್ಯನೊಬ್ಬನು — "ಪ್ರಭುರಾಯರ ಕೃಪೆಯಾದರೆ ವಿಧವೆಯು ಸಧವೆಯಾಗಬಹುದು" ಎಂದು ಹೇಳಿದ್ದನ್ನು ಕೇಳಿದ್ದೇವೆ. ಇವರ ಉಪನ್ಯಾಸವೆಲ್ಲ ಹೆಚ್ಚಾಗಿ ದೇವಾಲಯದಲ್ಲಿ ನಡೆಯುವುದರಿಂದ ಅಲ್ಲಿಯ ಪೂಜಾರಿಗೆ ಈಗ ಹಂಚಿನ ಮನಹಾಕುವಷ್ಟು ಸಾಮರ್ಥ್ಯ ಬಂದದೆ. ಈಗ ನಮ್ಮ ಪ್ರಭುರಾಯರ ಆಪ್ತ ಶಿಷ್ಯರ ಮಹಿಮೆಯನ್ನು ಹೇಳುವೆವು.

ನಮ್ಮ ಸಿ. ಬಿ. ಬ್ಯಾಳಿಹುಳಿ (ಚನ್ನ ಬಸಪ್ಪ ಬ್ಯಾಳಿಹುಳಿ) ಇವರು ಊರ ಪ್ರಸಿದ್ಧ ವ್ಯಾಪಾರಿ, ಬ್ಯಾಳಿಹುಳಿ ಸಿದ್ಧರಾಮಪ್ಪನವರ ಮಕ್ಕಳು ಫಿಪ್ತ್‌ಫೋರ್ಮ ತನಕ (ತನ್ನ ಇಪ್ಪತ್ತುಮೂರನ ವಯಸ್ಸಿನ ತನಕ) ವಿದ್ಯಾಭ್ಯಾಸಮಾಡಿ ಬಳಿಕ ಅಸಹಕಾರ ಮಾಡಿದರು ಇವರಿಗೆ ವ್ಯಾಪಾರದಲ್ಲಿ ಅಷ್ಟು ಆಸಕ್ತಿ ಇಲ್ಲ. ಇದ

ಕ್ಕಾಗಿ ಊರ ನವಯುವಕರದ್ದೊಂದು ನಾಟಕ ಮಂಡ
ಳಿಯನ್ನು ಒಂದೆರಡು ವರ್ಷ ನಡೆಸಿದರು (ಇವರ
ದೆಸೆಯಿಂದಲೇ ಮಿಸ್ ಚಂದ್ರಾವಾಸಿಯವರು ಪ್ರಸಿದ್ಧ
ನಟಿಯರೆಂದು ಕರ್ನಾಟಕದಲ್ಲೆಲ್ಲಾ ಖ್ಯಾತಿಹೊಂದಿ
ದುದು) ಮಿ। ಬ್ಯಾಳಿ ಹುಳಿಯವರು ಸ್ವಲ್ಪ ಸಮಯ
ದಲ್ಲಿ ನಾಟಕದಿಂದ ಬೇಸರಗೊಂಡು ತಮ್ಮ ಕಾಲ–
ಧನ–ವಯಸ್ಸು — ಇವುಗಳನ್ನು ದೇಶವಿದೇಶದ ಗಣಿಕೆ
ಯರ ಆರ್ಥಿಕಸ್ಥಿತಿಯನ್ನು ಅಭಿವೃದ್ಧಿಗೊಳಿಸಲು ವಿನಿ
ಯೋಗಿಸಿದರು. ಇವರ ಅಪೂರ್ವ ಸ್ವಾರ್ಥತ್ಯಾಗ
ವನ್ನು ಕೇಳಿಯೋ, ಕಂಡೋ, ಪ್ರಭುದಾಸರು ಇವರನ್ನು
ಬಳಿಗೆ ಕರೆದುಕೊಂಡರು ಅಂದಿನಿಂದ ಇವರು ಹೊಂದ
ಬೇಕಾದ ಸುಖವನ್ನೆಲ್ಲಾ ಗುರುಸೇವೆಯ ದೆಸೆಯಿಂದ
ಹೊಂದುತ್ತಿರುವರು ಅವರು ನಮ್ಮ ರಾಯರ ಕೋಶಾ
ಧ್ಯಕ್ಷರಲ್ಲಿ ಪ್ರಮುಖರು. ತಂದೆಯ ಕಡುಲೋಭದ
ದುಡ್ಡನ್ನು ಇವರು ನಿಸ್ಸಂಗತ್ವದಿಂದ ವ್ಯಯಿಸಬಲ್ಲರು
ಇನ್ನು ನಮ್ಮ ಧಾರವಾಡದ ವಕೀಲ್ ಮಧ್ವೇಶರಾವ್
ಕೇಶವರಾವ್ ದೇಶಪಾಂಡೆ (ಎಮ್. ಕೆ. ದೇಶಪಾಂಡೆ)
ಇವರ ವಿಚಾರ. ಇವರು ಪ್ರಸಿದ್ಧ ವಕೀಲರು ಧಾರ
ವಾಡ ಒಂದರಲ್ಲೇ ಇವರಿಗೆ ಮನೆಬಾಡಿಗೆಯಿಂದ
ಮೂರು ಸಾವಿರ ರೂಪಾಯಿ ಮುನಾಫೆಯಿದೆ. ವಯ
ಸ್ಸು ಅರ್ವತ್ತಕ್ಕೊಂದು ಕಡಿಮೆಯಾಗದು ಕೂದಲು
ನೆರೆದು ಮುಖದಲ್ಲಿ ಒಂದೆರಡು ನೆರಿಗಗಳು ಕಾಣಿಸಿ
ದರೂ ಇವರನ್ನು ಮುದುಕರೆಂದು ಕರೆವವರ ಮೇಲೆ

ಉರಿದುಬೀಳುವರು ಕಾರಣ, ಇಂಥ ವಯಸ್ಸಿನಲ್ಲೂ ತನ್ನ ಚತುರ್ಥ ಪತ್ನಿಯ ದಾಂಪತ್ಯಸುಖವನ್ನು ಅನು ಭವಿಸುತ್ತಿರುವೆವೆಂಬ ಹಿಗ್ಗು ಅವರಿಗೆ. ಎಷ್ಟೆಂದರೂ ವಯಸ್ಸನ್ನು, ಅರ್ವತ್ತಕ್ಕೆ ಮೀರಿದ ಆ ಶರೀರವನ್ನು ಹಿಂಬಾಲಿಸದಷ್ಟೆ. ಆದಕ್ಕಾಗಿ ವೇಹದಾರ್ಢ್ಯವನ್ನು ತಂದುಕೊಳ್ಳಲು ಅಥವಾ ಕಾದಿಡಲು ತೀರಾ ಮುಂದಾ ಲೋಚನಯುಳ್ಳವರಂತೆ ಅವರು ಕೆಂಗಾಜನ್ನು ಧರಿಸು ತ್ತಿದ್ದರು ಸರಳವಾಗಿ ಹೇಳುವುದಾದರೆ ಅವರು ಪಿಸಾ ಯಿಯ ಭಕ್ತರು ಅಖಿಲ ಕರ್ಣಾಟಕದ ದೇಶಭಕ್ತ ರೆಂಬ ಕೀರ್ತಿ ಇದೆ. ಹೆಚ್ಚೇನು, ಅವರು ಸ್ವತಃ ಸಂಪಾ ದಕರು. ಕನ್ನಡ, ಮರಾಠಿ, ಇಂಗ್ಲಿಷ್‌ಯೆಂಬ ತ್ರಿ ಭಾಷಾಶ್ರಿತವಾದ “ರಣದುಂದುಭಿ” ಎಂಬ ವಾರ ಪತ್ರಿಕ ಅವರದು ಪ್ರಭುಗಳಾವ ಆಂಗ್ಲೇಯರಿಗೆ ಸಿಟ್ಟು ಬರಬಾರದೆಂದೂ ಇಂಗ್ಲಿಷು, ತಾನು ಸತಾರೆ ಯವನಾದರೂ ಕನ್ನಡ ನಾಡಿನಲ್ಲಿ ಆಶ್ರಯವನ್ನಿತ್ತ ಕನ್ನಡಿಗರ ಸಲುವಾಗಿ ಕನ್ನಡ, ಮಾತೃಭಾಷೆಯಾದ ಮರಾಠಿಯ ಸಲುವಾಗಿ ಮರಾಠಿ. ಈ ಮೂರನ್ನು ತಮ್ಮ ಪತ್ರಿಕೆಯಲ್ಲಿ ಸೇರಿಸಿದ್ದರು ಕನ್ನಡ ಮರಾಠಿ ವಾದ ಬಂದಾಗ ಮರಾಠೀ ಪಕ್ಷವನ್ನೇ ಹಿಡಿದರೂ, ವಿದ್ಯಾವಂತರೊಡನೆ ಇಂಗ್ಲೀಷನ್ನೂ, ಪಕ್ಕಿಗಾರರೊಡನೆ ಮಾತಾಡುವಾಗ ಕನ್ನಡವನ್ನೇ ಆಡುತ್ತಿದ್ದರು ಇನ್ನು ಕನ್ನಡಿಗರ ಮೇಲೆ ದ್ವೇಷವಿಲ್ಲೆಂದು ತೋರಿಸಲು “ಕರ್ಣಾಟಕದ ಹಕೀಕತು” “ತಾತ್ಯಾ ಕುಲಕರ್ಣಿ

ಯವರ ಜೀವನಚರಿತ್ರೆ" ಮುಂತಾದ ಪುಸ್ತಕಗಳನ್ನು ಬರೆದಿದ್ದರು. ಅಷ್ಟೇ ಅಲ್ಲ, ಕನ್ನಡ ವಾಙ್ಮಯ ಪರಿಚಯವನ್ನು ಮಾಡಿಕೊಳ್ಳಲು ಸಂಜೀವರಾಯರ ಎರಡು ಮೂರು ಗ್ರಂಥಗಳನ್ನು ಓದಿರುವರು. ಇಂಥ ಮುದಿ ವಯಸ್ಸಿನಲ್ಲಿ ಕೂಡ—"ತಾರುಣ್ಯಸುಖ ಮತ್ತು ಮಿತ ಸಂತತಿ" ಎಂಬ ವಿಷಯದ ಮೇಲೆ ಒಂದು ಪುಸ್ತಕವನ್ನು ಬರೆಯುತ್ತಿರುವರು ಇನ್ನು ರಾಜಕೀಯ ರಂಗಭೂಮಿಯಲ್ಲಿ ಅವರೆದುರಿಗೆ ಕೌನ್ಸಿಲಿಗೆ ನಿಲ್ಲುವ ಬಂಟನಿಲ್ಲ. ಸಾರ್ವಜನಿಕ ಸಭೆಗಳಲ್ಲಿ ತಪ್ಪದೆ ಖಾದಿಯನ್ನು ಧರಿಸುತ್ತಿರುವರು ಇನ್ನು ಧಾರ್ಮಿಕ ವಿಚಾರ ಮಹಾರಾಷ್ಟ್ರದಿಂದ ಯಾವನೊಬ್ಬ ಧಾರ್ಮಿಕ ಉಪನ್ಯಾಸಕನೇ ಬರಲಿ; ಆ ದಿನದ ಉಪನ್ಯಾಸಕ್ಕೆ ದೇಶಪಾಂಡೆಯವರೇ ಅಧ್ಯಕ್ಷರು. ಇಂಥ ಮಹನೀಯರು ಪ್ರಭುದಾಸರ ಶಿಷ್ಯರಲ್ಲೊಬ್ಬರು—ಎಂದರೆ ಗುರುವಿನ ಯೋಗ್ಯತೆ ಕಡಿಮೆಯಾಯಿತ? ಇದಲ್ಲದೆ ಹಲವೊಂದು ಮಂದಿ ಸರಕಾರಿ ಉದ್ಯೋಗಸ್ಥರು, ಊರಲ್ಲಿ ಷ್ಟೇಗು ಅಧಿಕವಾದಲೆಲ್ಲಾ ವ್ಯಾಪಾರಸ್ಥರು, ಅವರ ಬಳಿಗೆ ಬಂದು ಅವರೊಡನ ಧಾರ್ಮಿಕ ವಿಚಾರವನ್ನು ಚರ್ಚಿಸುತ್ತಿದ್ದರು ಪ್ರಭುದಾಸರು ಲಿಂಗವಂತರಿಗೆ ವೀರಶೈವ ಧರ್ಮವನ್ನೂ, ಕಡುವೈಷ್ಣವರಿಗೆ ಅಚ್ಚವೈಷ್ಣವ ಧರ್ಮವನ್ನೂ, ಸ್ಮಾರ್ತರಿಗೆ ಅದ್ವೈತವನ್ನೂ, ಅವರವರ ಮನಸ್ಸಿಗೊಪ್ಪುವಂತೆ, ಸ್ಥಿತಿಗತಿಗ ಅನುಕೂಲಿಸುವಂತ, ಬಣ್ಣಿಸುತ್ತಿದ್ದರು.

ಹೀಗಾಗಿ ಪ್ರಭುರಾಯನೆಂಬ ಸಾಗರದಲ್ಲಿ ಹಲ ವೊಂದು ಬಗೆಯ ನದನದಿಗಳು ಬಂದು ಕೂಡುತ್ತಿದ್ದವು. ಗುರುವನ್ನು ಕಾಣದೆ ಶಿಷ್ಯರಿಗೆ ಅದೆಷ್ಟು ಬೇಸರವಾಗು ತ್ತಿತ್ತೋ ಗುರುವಿಗಾದರೂ ಶಿಷ್ಯರು ಬಾರದಿದ್ದಲ್ಲಿ ಅಷ್ಟೇ ವ್ಯಥೆಯಾಗುತ್ತಿತ್ತು. ಧಾರವಾಡದ ಕೂಲೇಜಿನ ನೂರಾರು ಹುಡುಗರು ಪ್ರತಿ ಶನಿವಾರ ಆದಿತ್ಯವಾರ ಪ್ರಭುರಾಯರ ದರ್ಶನಕ್ಕ ಬರುತ್ತಿದ್ದರು ಆ ಎರಡು ದಿನಗಳಲ್ಲಿ ಅಖಂಡ ಗುರುಸಾನ್ನಿಧ್ಯ ದೊರೆಯಲೆಂದು ಊಟ, ಉಪಚಾರ, ಸಿಗರೇಟು ಇವುಗಳ ವ್ಯವಸ್ಥೆಯನ್ನು ತಮ್ಮ ನಿವಾಸದ ಯೇ ಮಾಡುತ್ತಿದ್ದರು ಮುಖ್ಯವಾಗಿ ಇವರ ಕಲ್ಯಾಣೇಚ್ಛೆಯು ಅವರಿಗೆ—ಬಾಲಕರಿಗಾವರೂ ತಾವಲ್ಲಿಗೆ ಬಂದರೆ ತಮ್ಮ ಕಲ್ಯಾಣವಾಗುವುದೆಂಬ ನಿಶ್ಚಿತ ತಿಳುವಳಿಕೆ ಇತ್ತು ಅವರ ಅತಿ ಸೂಕ್ಷ್ಮ ಆವಶ್ಯಕತೆಯನ್ನೂ ಪ್ರಭುದಾನರು ಗಮನಿಸುತ್ತಿದ್ದರು ಸಂಜೆ ಯುವಕರ ದೃಷ್ಟಿಯು ಬೀದಿಕಡೆಗೆ ಹರಿಯಿ ತೆಂದರೆ ತಾವಾಗಿಯೇ ಸಿನಮಾಕ್ಕೆ ಅವರನ್ನು ಕರೆ ದೊಯ್ಯುವರು. ಅಬಲೆಯರ ಮೇಲಂತೂ ಅವರ ಅನುಗ್ರಹ ಬಹಳ. ಅವರೆಲ್ಲಾದರೂ ಬರುವುದು ನಿಧಾನ ವಾದರೆ ತಾವೇ ಅವರ ಮನೆಗೆ ತಮ್ಮ ಹೊಸ ಸ್ಪೋರ್ಡ್ರ್ ಕಾರನ್ನು ಕಳುಹಿಸುವರು

ನಮ್ಮ ಡಿಫ್‌ಕರನಿಗೆ ಇಂಥ ಜನಸಂದಣಿಯಲ್ಲಿ ಬಾಳ್ವೆ ದೊರೆಯಿತು. ಉಂಡಷ್ಟು ತಿನ್ನುವಷ್ಟು ಅನು ಕೂಲಗಳು. ಏನೊಂದಕ್ಕೂ ಕೊರತೆ ಇಲ್ಲ. ಹದಿನೈದು

ದಿವಸಗಳ ಸಹವಾಸದಲ್ಲಿ ಸತ್ಯ ಎಷ್ಟೊ ಷನೆಯೇ ಭೇದಿಗೆ ಔಷಧವನ್ನು ತೆಗೆದುಕೊಳ್ಳುವಂತಾಯಿತು ಇನ್ನು ಜನರ ಹಿಂದಿನಲ್ಲಿ ಅವನ ಮನಸ್ಸು, ಏನು ಮಾಡು ವುದೆಂದು ತೋಚದ ತಬ್ಬಿಬ್ಬಾಯಿತು ಅವರೆಲ್ಲರನ್ನು ಕಂಡು ಮನಸ್ಸಿನಲ್ಲಿ–"ಎಂಜಲು ತಿನ್ನುವ ನಾಯಿಗಳೇ"– ಎಂದಂದುಕೊಂಡನು. ಆ ಗುಂಪಿನಲ್ಲಿ ಪ್ರಭುಪ್ರಸಾದ ವನ್ನು ಸ್ವೀಕರಿಸದವನು ಇವನೊಬ್ಬನ ಒಂದುದಿನ ಗುರುರಾಯನು ಒಂದು ಬಾಳೆಹಣ್ಣನ್ನು ಅರ್ಧ ಕಚ್ಚಿ ಇವನ ಬಾಯಿಗೆ ಹಾಕಲು ಬಂದನು ಅದನ್ನು ಹಿಡಿದು ಅವನ ಮೋರಗೆ ಎಸದುಬಿಡುವಷ್ಟು ಸಿಟ್ಟುಬಂತು ಡಿಫ್‌ಕರನಿಗೆ! ಆ ರೀತಿ ತಮ್ಮ ಗೆಳೆತನಕ್ಕೆ ಭಂಗ ತರ ಬಾರದಂದು ಯೋಚಿಸಿ ಸುಮ್ಮನಾದನು ಅದನ್ನು ತೆಗೆದುಕೊಂಡು ನಾಲ್ವಾರು ಎಂಜಲುಬಾಕ ಶಿಷ್ಯರಲ್ಲಿ ಹಂಚಿ ತಾನೂ ತಿನ್ನುವವನಂತೆ ನಟಿಸಿದನು ತನ್ನಭಾವೀ ಕಾರ್ಯಸಿದ್ಧಿಗಾಗಿ ಈ ತರನ ಜನಾಕರ್ಷಣ ಶಕ್ತಿಯು ಅವಶ್ಯವೆಂದು ತಿಳಿದುದರಿಂದ ತಾನು ಹೇಗಾದರೂ ಮಾ ಡಿ ಈ ವಶೀಕರಣ ಮಂತ್ರಕಲಿಯಬೇಕೆಂದು ನಿಶ್ಚಯಿ ಸಿದನು ಅದಕ್ಕಾಗಿ ಪ್ರಭುರಾಜರನ್ನು ನೆರಳಿನಂತ ಹಿಂಬಾ ಲಿಸುತಿದ್ದ. ಅವರ ಭಕ್ತಮಂಡಳಕ್ಕಾದರೂ ಗುರುವಿ ಗೊಬ್ಬ ಶಿಷ್ಯನು ಸಿಕ್ಕಿದುದು ಬಹಳ ಹರ್ಷದಾಯಕ ವಾಯಿತು. ಅದೂ ತರುಣ; ರೂಪದಲ್ಲಿ ರತಿರಮಣ.

ಡಿಫ್‌ಕರನಿಗೆ ಈ ಗೆಳತನದಲ್ಲಿ ಎರಡು ತಿಂಗಳ ಕಾಲಕಳೆಯಬೇಕೆಂದಿತ್ತು. ಆದರೆ ಆ ಅವಧಿಯೊಳ

ಗಾಗಿ ಒಂದು ಅಪೂರ್ವ ಘಟನೆಯು ನಡೆದು ಅವನ ಮನಸ್ಸು ಭ್ರಮೆಗೊಂಡಿತು ರೋಗವು ಮೀರವಪ್ಪಿತು. ಹಾಗಾಗಿ ಅಲ್ಲಿಂದ ಜಗಳಾಡಿ ಹೊರಡುವಂತಾಯಿತು

ಒಂದುದಿನ ಗುರುವಿನೊಂದಿಗೆ ಶಿಷ್ಯಳೊಬ್ಬಳ ಮನಗೆ ಸಾಗಿದ್ದನು. ರಾತ್ರಿ ಎರಡುತಾಸಿನ ತನಕ ಗುರುಸೇವೆಮಂಗಳಾರತಿಗಳೆಲ್ಲ ನಡೆದು ಎಲ್ಲರೂ ಮಲಗಿಕೊಂಡರು ಪ್ರಭುರಾಯರು ಮಲಗಿದ ಸರ ಕೊಟಡಿಯಲ್ಲಿ ಟಿಫ್‌ಕರನು ಮನೆಯವರು ಪ್ರೀತಿಯಿಂದ ಹಾಸಿಕೊಟ್ಟ ಹಾಸಿಗೆಯಲ್ಲಿ ಮಲಗಿಕೊಂಡನು. ಗಾಢನಿದ್ರೆ ಬಂದಿತು ಅವನಿಗೆ ಸ್ವಪ್ನದಲ್ಲಿ ತನ್ನ ದೇವ ಲೋಕದ ಗೆಳೆಯರನ್ನು ಆಮಂತ್ರಿಸುವುದೆಂದು ವಿಚಾ ರವೇ ನುಳಿಯುತ್ತಿತ್ತು. ತಾನಾಗಿ ನರರ ಟೀಕಟಿಪ್ಪಣಿ ಗಳನ್ನು ಸಿಭ೯ಯವಾಗಿ ಮಾಡಬೇಕೆಂದು ತೋರಿತು. ಆದರ ದುಡುಕಬಾರದೆಂದೂ ಮನಸ್ಸಿಗ ತೋರಿತು. ಇತ್ತ ನಾಲ್ಕಾರುದಿನಗಳಿಂದ ಅವನ ಆರೋಗ್ಯವು ಚೆನ್ನಾಗಿದ್ದಿರಲಿಲ್ಲ. ಕಾರಣವಿಷ್ಟೆ. ಪಚನೇಂದ್ರಿಯಗಳಿಗೆ ವಿರಾಮಕೊಡಲು ಅವನ ಗುರುವಿನ ಭಕ್ತರು ಬಿಡಲಿಲ್ಲ. ಸ್ವಪ್ನದಲ್ಲಿಯೂ ತನ್ನ ಶರೀರಾಯಾಸದ ನೆನಪುಮಾಡಿ "ಈ ಸಮಯದಲ್ಲಿ ನನ್ನ ಉಮೆಯು ಇರುತ್ತಿದ್ದರೆ ನನ್ನ ನ್ನೆಷ್ಟು ಉಪಚರಿಸುತ್ತಿದ್ದಳೋ" ಎಂದು ಯೋಚನೆ ಮಾಡುತಿದ್ದನು. ಈ ಯೋಚನ ಬಂದುದೇ ತಡ, ಯಾರೋ ಅವನ ಪಾದಸೇವೆಯನ್ನು ಮಾಡತೊಡಗಿ ದರು. ಉಮೆ ಎಂಬ ಭ್ರಾಂತಿಯಿಂದ ಎದ್ದುಕುಳಿತನು.

ಪಾದಗಳಿಗೆ ಕೈಬಳೆಯ ಸ್ಪರ್ಶವಾದುದನ್ನು ಕಂಡು ತನ್ನ ಎರಡೂ ಕೈಗಳನ್ನು ಪ್ರಿಯೆ ಎಂದು ಮುಂದೆ ನೀಡಿದನು. ಆಗವನ ಆಲಿಂಗನದಲ್ಲಿ ಭೂಲೋಕದ ಉಷೆಯೊಬ್ಬಳು ಬಿದ್ದಳು ಈ ಆಕಸ್ಮಿಕ ಬೀಳ್ವಿಕೆಯಿಂದ ಅವನ ನಿದ್ರಾಭಂಗವಾಯಿತು. ಕಣ್ತೆರದು ನೋಡಿದರೆ ಕತ್ತಲಯಲ್ಲಿ ಏನೂ ಕಾಣಿಸದು. ಮೈಮೇಲೆ ಯಾರೋ ವಿಶ್ರಮಿಸಿದಂತ ಕಂಡಿತು ಬಳಿಯಲ್ಲಿದ್ದ ವಿದ್ಯುತ್ ಲಾಂಧ್ರವನ್ನು ಅತಿಥಿಯ ಮೋರೆಗೆ ಹಿಡಿದನು ಯಾರಂದು ಹೇಳಲಿ? ಮನೆಯ ತರುಣ ಯಜಮಾನಿನಿ! ತೀರ ಪರಿಚಿತಳಂತ ಇವನನ್ನು ಆಲಿಂಗಿಸಲು ಮುಂದಾದಳು ಅಷ್ಟರಲ್ಲಿ ತಾನು ಹಿಂದೆ ಪುಷ್ಪಬಾಣನನ್ನು ಸಂಹರಿಸಿದುದು ನನಪು ಬಂತು ಚುಂಬಿಸಲು ಮುಂದೆ ಬಂದ ಆಕಯ ಅಧರಗಳಿಗೆ ಬಲವಾದ ಒಂದು ಏಟನ್ನು ಕೊಟ್ಟನು. ಏಟನ ಭರದಿಂದ ರಮಣಿಯು ಚೀರಿದಳು ನೆರೆಕೊಟಡಿಯಿಂದ ಗಾಬರಿಯಾಗಿ ಪ್ರಭುದಾಸರೂ ಅವರ ಸೇವಾನಿರತಳಾದ ಇನ್ನೋರ್ವ ಯುವತಿಯೂ ಧಾವಿಸಿಬಂದರು. ಏಟುತಿಂದ ರಮಣಿಗೆ ಮೂರ್ಛೆ ಬಂದಿತು. ಅದನ್ನು ಕಂಡು ಪ್ರಭುರಾಯನಿಗೆ ಕೋಪವು ಉಕ್ಕೇರಿ ಬಂತು ಅವನು ಹಲ್ಲನ್ನು ಕಡಿಯುತ್ತ "ಪ್ರೀತಿಸಿ ಬಂದ ಶಿಷ್ಯರನ್ನು, ಮೂರ್ಖಾ, ಈ ರೀತಿ ಕಾಡುವುದೇ?" ಎಂದು ಕೇಳಿದನು ಸರಿ. ಅಷ್ಟು ಅಂದುದೇ ತಡ ಡಿಫ್‌ಕರನ ದಕ್ಷಿಣ ಹಸ್ತವು ಆವೇಗದಿಂದ ಪ್ರಭುರಾಯರ

ಕಪೋಲವನ್ನೇರಿತು. ಬಳಿಯಲ್ಲಿದ್ದ ಶಿಷ್ಯಳು ಪರಾರಿಯಾದಳು

ಮರುದಿನ ಡಿಪ್ಪರನು ಹುಬ್ಬಳ್ಳಿಯಲ್ಲಾರಿಗೂ ಕಾಣಸಿಗಲಿಲ್ಲವಂತೆ ಊರವೈದ್ಯರು ಒಬ್ಬಿಬ್ಬರು ಪ್ರಭುರಾಮರ ಉನ್ನತ ಕಪೋಲವನ್ನು ಔಷಧಾದಿ ಲೇಪನದಿಂದ ಸತ್ಕರಿಸುವುದು ಮಾತ್ರ ಕಂಡಿತು

## ಪ್ರಕರಣ ೭

## ಸಾಧು ಸದಾನಂದ.

ಈಗೀಗ ನಮ್ಮ ಡಿಪ್ಪರನಿಗೆ ನರಜನ್ಮವು ಎಂಥದೆಂದು ತಿಳಿಯ ತೊಡಗಿದೆ. ನರನಾಗಿ ನರರೊಡನ ಜೀವನ ಮಾಡುವುದು ಎಷ್ಟು ಕಠಿಣವೆಂದು ಅವನಿಗೀಗ ತಿಳಿಯ ತೊಡಗಿದೆ. ಅನನು ತನ್ನ ಪಾರಲೌಕಿಕ ಶಕ್ತಿಯನ್ನು ಉಪಯೋಗಿಸಿ ಬೇಕಾದಂತ ವರ್ತಿಸಬಲ್ಲನು. ಆದರೆ ಅವುಗಳಿಗೆ ನರಲೋಕದಲ್ಲಿ ಬೆಲೆಯಿಲ್ಲ. ಇಲ್ಲವೆ ಅವನ ಗುರುತರ ಅಸ್ತ್ರವೆನಿಸಿದ ಕೋಪಾಗ್ನಿಯನ್ನು ಹೊರತೆಗೆದರೆ ಬಂದ ಕಲಸವು ಕೆಟ್ಟೀತು. ಈಗವನ ಬಳಿಯಲ್ಲಿ ಕಾಸಿಲ್ಲ. ಕಾಸಿಲ್ಲದೆ ಭೂಲೋಕದಲ್ಲಿ ಜೀವನವಿಲ್ಲ. ನಿನ್ನಲ್ಲಿ ದುಡಿಯಲು ಬೇಕನ್ನುವಷ್ಟು ಶಕ್ತಿಯಿರಲಿ, ನೀನು ದುಡಿಯಲು ಸಿದ್ಧನಿರು ನಿನ್ನಿಂದ ದುಡಿಸಿಕೊಳ್ಳುವವರು ಒಬ್ಬರು ಬೇಕು ದುಡ್ಡಿದ್ದರೆ ನಿನ್ನ ದುಡಿತಕ್ಕೆ ಬೆಲೆ. ದುಡ್ಡಿದ್ದರೆ ಊಟಉಡಿಗೆ; ದುಡ್ಡಿದ್ದರೆ ಆಟಪಾಠ.

ಹೆಚ್ಚೇನು ಒಂದು ಕಾಲದಲ್ಲಿ 'ಸರ್ವಂ ಶಿವಮಯಂ ಜಗತ್' ಎಂದಿದ್ದ ನಾಣ್ಣುಡಿಯು ಮಣ್ಣು ತಿಂದು, 'ಸರ್ವಂ ಕಾಂಚನಮಯಮಿದಂ ಜಗತ್'–ಎಂದಾಗಿದೆ.

ಡಿಪ್ಪರನು ಹುಬ್ಬಳ್ಳಿಯಿಂದ ಪರಾರಿಯಾದವನು ರಾತ್ರಿ ೨॥ ಘಂಟೆಯ ಬಂದಿಹಿಡಿದು, ಎಲ್ಲಿಗಾದರೂ ಹೋಗಬೇಕೆಂದು ರೈಲ್ವೆ ನಿಲ್ದಾಣಕ್ಕೆ ಬಂದರೆ, ಒಳಗೆ ನುಸುಳುವುದಕ್ಕೆಕಾಸಿಲ್ಲದುದರಿಂದ ಅವಕಾಶ ಸಿಗಲಿಲ್ಲ. ಹೀಗಾಗಿ ಕಾಲುಹಾದಿಯಿಂದ ಕುಂದುಗೋಳಕ್ಕೆ ಹೊರ ಟನು. ಹಾಗೂ ಹೀಗೂ ಬೆಳಗಾಗುವುದರೊಳಗೆ ಆ ಊರನ್ನು ನೇರಿ, ದಿನದ ಗ್ರಾಸದ ಚಿಂತೆಮಾಡತೊಡ ಗಿದನು. ಬಂದವರನ್ನು 'ಇಲ್ಲಿ ಭೋಜನವೆಲ್ಲ ಸಿಗುವುದು?' ಎಂದು ಪ್ರಶ್ನೆಮಾಡಲು ಅವರು 'ಮಹಾರಾಷ್ಟ್ರ ಮಿಲಿ ಟೆರಿ ಹೋಟೆಲೊಂದ'ನ್ನು ತೋರಿಸಿದರು. ಅಲ್ಲಿಯ ತನಕ ಹೋಗಿ 'ಮಿಲಿಟೆರಿ'–ಎಂದರೇನೆಂದು ಕೇಳಿ ದನು ಹೊಟೆಲುಕಾರನು, 'ಹೋಗೋ ನಿನಗಿಲ್ಲೇನು ಕೆಲಸವೆಂದಿವನನ್ನು' ಅಲಕ್ಷಿಸಿ ಕಳುಹಿಸಿದನು. ಈಚೆ ಬಂದು ಒಬ್ಬ ಜರಿಮುಂಡಾಸಿನ ಸಭ್ಯಗೃಹಸ್ಥನೊಡನೆ- ಮಿಲಿಟೆರಿ ಹೊಟೆಲೆಂದರೇನೆಂದು ಕೇಳಿದನು 'ಮಾಂಸಾ ಹಾರ ಅಲ್ಲಿ ದೊರೆಯುವುದರಿಂದ ಹಾಗೆ ಹೇಳುತ್ತಾರೆ'– ಎಂದುತ್ತರ ಬಂದಿತು. ತಾನಲ್ಲಿಗೆ ಹೋಗಿ ಊಟ ಮಾಡಿದರೆ ಬ್ರಾಹ್ಮಣ್ಯಕ್ಕೆ ಭಂಗಬರುತ್ತಿತ್ತೆಂದು ತಿಳಿ ದನು. ಭೇಟಿಯಾದ ಮಹನೀಯರು ಅವನನ್ನು ಮಾತನಾಡಿಸುತ್ತ ಮಾತನಾಡಿಸುತ್ತ ತಮ್ಮ ಮನೆಯ

ವರೆಗೆ ಒಯ್ದರು. ತುಂಬಾ ಪರಿಚಿತರಂತೆ ಉಪಚರಿಸಿದರು. ಅವರ ಮನೆಯನ್ನು ಕಾಣಲು ಅವರು ಶ್ರೀಮಂತರೆಂದಿರಬೇಕೆಂದು ಭಾಸವಾಯಿತು. 'ನಿಮ್ಮ ಜಾತಿಯಾವುದು'? ಎಂದವರ ಪ್ರಶ್ನೆಗೆ 'ನಾವು ಉಡುಪಿ ಆಚಾರ್ಯರು' — ಎಂದುತ್ತರವಿತ್ತನು ಗೃಹಸ್ಥರ ಮೋರೆ ಸಪ್ಪಗಾಯಿತು ಅವರು ಭಸ್ಮಧಾರಿಗಳು. ಆದರೂ ಅದನ್ನು ಅಡಗಿಸಿಕೊಂಡು ಮತ್ತೂ ಮತ್ತೂ ಮಾತನಾಡುತ್ತ ಕುಳಿತರು. ಅಷ್ಟರಲ್ಲಿ ಮನೆಯಾಕೆಯು — 'ಊಟಕ್ಕಾದರೂ ಇನ್ನೂ ಹರಟೆಯೇ?' ಎಂದು ಕರೆದಳು ಮಧ್ಯಾಹ್ನ ತಾಸು ೧೨ ಬಾರಿಸಿತ್ತು. ಗೃಹಸ್ಥರು: 'ನೀವಿಲ್ಲೇ ಕುಳ್ಳಿರಿ, ಸ್ವಲ್ಪ ಮಾತನಾಡೋಣ ನಾನೀಗ ಲಘೂನ ಇಷ್ಟು ಉಂಡುಬರುತ್ತೇನೆ' ಎಂದು ಇವನ ಮೋರೆಗೇ ಬಾಗಿಲು ಜಡಿದು ಒಳ ಹೋದರು ಡಿಪ್ಕರನು ಕೋಪ—ನುಂಗಿದನು. ಅವರ ಮೇಲಿನ ಸಿಟ್ಟಿನಿಂದ ಅವರ ಆಪ್ತ ಸಲ್ಲಾಪದ ಆಮಂತ್ರಣವನ್ನು ಅವಮಾನ್ಯಮಾಡಿ, ಬೇರೆಲ್ಲಾದರೂ ಆಹಾರ ಸಿಗುವುದೋ ನೋಡುತ್ತ ಹೊರಟನು. ಒಂದು ಕಡೆಯಲ್ಲಿ— "ವೀರಶೈವ ಭೋಜನಾಲಯ"—'ಮ್ಯಾನೇಜರ್—ಹುಚ್ಚಯ್ಯ, ವೀರಯ್ಯ ಗದಗೀಮಠದ'— ಎಂದಿತ್ತು. ಡಿಪ್ಕರನಿಗೆ ತನ್ನ ಭಕುತಸಿರಿಸಿದ ವೀರಶೈವ ಭೋಜನಾಲಯವನ್ನು ನೇರುವ ಯೋಚನೆಯಾಯಿತು. ಇವನ ಆಗಮನವಾಗಲು, ಮ್ಯಾಲಿಕನು ತುಂಬಾ ಉಪಚರಿಸಿದನು. ನಿಜವಾಗಿಯೂ ಇವನ ಅತಿಥಿ ಸತ್ಕಾರ ಬುದ್ಧಿಗೆ, ವಾರಿ

ತೋಷಕವಾಗಿ ಒಂದೆರಡು ವರಗಳನ್ನು ಕೊಡುವ ಮನಸ್ಸೇ ಬಂದಿತು. ಸರಿ, ದಿನಗಳನ್ನು ಕೂಡಲು ಯೋಗ್ಯವಾದೊಂದು ನೊಗಸಿನ ವಡನಾಲೆಯಲ್ಲಿ ಒಂದು ತಾಂಬಾಣದಲ್ಲಿ ಡಿಪ್ಕರನಿಗೆ ಅನ್ನ ಬಡಿಸಿದರು. ಪಲ್ಯ, ಪದಾರ್ಥಗಳೂ ಬಂದುವು. ಮೇಲೆ ಸಾರನ್ನ ತಂದರು ಬಡಿಸುವರೆಲ್ಲರ ಕೊರಳಲ್ಲಿ ಒಂದೊಂದು ಭಾರೀಭಾರಿ ಡಬ್ಬಿಗಳು ತೂಗುತ್ತಿದ್ದುವು ಇವನಿಗದಿಲ್ಲ ಪುಣ್ಯಕ್ಕೆ ಅಂಗಿಯನ್ನುಹಾಕಿಕೊಂಡಿದ್ದನು. ಇಲ್ಲದಿದ್ದರೆ ಇವನ ಹಿರಿಯರ ಹಲ್ಲುಗಳು ಉದುರುವಂಥ ಏಟುಗಳು ಬೀಳುತ್ತಿತ್ತು. ಇತ್ತ, ಡಿಪ್ಕರನು ಬಟ್ಟಲು ಮುಂದೆ ಕುಳಿತೊಡನೆಯೇ ಬ್ರಹ್ಮರಂಧ್ರದ ವರೆಗೆ ವ್ಯಾಪಿಸುವಂತಹ ಬೆಳ್ಳುಳ್ಳಿ ಪರಿಮಳವು ನಾಟತು ಸಾರು, ಪಲ್ಯ, ಚಟ್ನಿ– ಎಲ್ಲ ಬೆಳ್ಳುಳ್ಳಿಮಯ. ಹಸಿವಾಗಿತ್ತು ಮಾಡುವುದೇನು? ಮೂಗು ಹಿಡಿದು ಉಂಡನು ಮೆಣಸಿನ ತೀಕ್ಷ್ಣತೆಯಿಂದ ಎದ್ದು ಕುಣಿಯುವಂತಾಯಿತು. ಬೇರೆ ಉಪಾಯ ಕಾಣದೆ, ಬರೆ ಅನ್ನವನ್ನಿಷ್ಟೇ ಊಟ ಮಾಡಿದನು. ಮಜ್ಜಿಗೆ ಬಂದಿತು. ಅದರಲ್ಲಿಯೂ ಮಿ। ಬೆಳ್ಳುಳ್ಳಿಯವರಿದ್ದರು. ಅಂತು ಇಂತು ಹೊಟ್ಟೆ ತುಂಬ ಅನ್ನವನ್ನು ತುಂಬಿ, ಎದ್ದು ಕೈತೊಳೆದುಕೊಂಡನು. ನಾಲ್ಕಾರು ಅರ್ಥವಿಲ್ಲದ ಆಪ್ತವಾಕ್ಯಗಳಾದ ಬಳಿಕ ಡಿಪ್ಕರನೆದ್ದು ಹೊರಗೆ ಬಂದನು. ನಾಲ್ಕಾರು ಗಜ ಬಂದುದೇ ತಡ—ಮ್ಯಾಲಿಕ ಹುಚ್ಚಯ್ಯ ವೀರಯ್ಯನು ಬಂದು—'ರಾಯರೇ, ರೊಕ್ಕಕೊಡಲು ಮರೆತಿ

ರಲ್ಲ'— ಎಂದನು ಡಿಪ್ಪರನ ಎದೆ ಜಗ್ಗೆಂದಿತು. ಅವನು-ಭೋಜನಶಾಲೆಯೆಂದರ ಹಿಂದಿನ ಕಾಲದಲ್ಲಿ, ಎಲ್ಲೆಲ್ಲಿಯೂ ಇದ್ದ ಅನ್ನಛತ್ರವೆಂದೇ ತಿಳಿದಿದ್ದನು. ಮೇಲಾಗಿ ಭೋಜನಶಾಲಯೆಂಬ ಮಾತು ಅವನಿಗೆ ಉಡುಪಿಯಲ್ಲಿ ರೂಢಿಯಾಗಿತ್ತು. ಈಗ ಕಾಸು ಕೊಡುವಾ ಎಂದರೆ ಯಾರ ಬಳಿಯಲ್ಲಿದೆ? ಬೇರೆ ಉಪಾಯವಿಲ್ಲದೆ—'ರಾಯರೇ ನಾನಿದು ಧರ್ಮಛತ್ರ ವೆಂದು ಊಟಮಾಡಿದೆ'—ಎಂದನು. ಸರಿ, ವೀರ ಯ್ಯನು ವೀರಾವೇಶದಿಂದ ಮಾತನಾಡತೊಡಗಿದನು 'ಕಾಸು ಇಡದೆ ಹೋಗಲು ಬಿಡೆ'ನಂದನು ಹೆಚ್ಚೇನು-ಅವನ ಅಂಗಿಯನ್ನು ಕಿತ್ತುಕೊಂಡು, ನಾಲ್ಕು ಏಟನ್ನು ಏರಿಸಿ, ಊರಿನ ನಾಜೂಕಿನ ಶಬ್ದಗಳಿಂದ ಮಂಗಳಾರತಿ ಮಾಡಿ ಕಳುಹಿಸಿಕೊಟ್ಟನು ಡಿಪ್ಪರನು ಮೋರೆ ತಗ್ಗಿಸಿ ಕೊಂಡು, ಅಲ್ಲಿಂದ ಹೊರಟನು ಈ ಘಟನೆಯು ನಡೆ ಯುವಷ್ಟರಲ್ಲಿ, ನೂರು ಶಾಲೆ ಹುಡುಗರೂ ಇನ್ನೂರು ಮಂದಿ ಹಿರಿಯರೂ ಅಲ್ಲಿ ಕಲೆತರು ಹೋಟೇಲುವಾಲನ ಸ್ವರಕ್ಕೆ ಅವರೂ ಧ್ವನಿಗೂಡಿಸಿದರು; ತುಂಬಾ ಸಕ್ಕರು ಚಿಕ್ಕ ಮಕ್ಕಳು ಡಿಪ್ಪರನನ್ನು ಅಟ್ಟಿಕೊಂಡು ಹೋಗಿ ಒಂದೆರಡು ಕಲ್ಲುಗಳನ್ನೂ ಎಸೆದರು ದಾರಿಯಲ್ಲಿ, ಊರ ಮುಹಜಾರ್ನ ಆಫೀಸರರೊಬ್ಬರು ಆ ಕಾಲಕ್ಕೆ ಹಾದುಹೋದುದರಿಂದ ಡಿಪ್ಪರನು ಉಳಿದುಕೊಂಡನು ಕಾರಣ, ಈ ಜನಸಂಪಣಿಯನ್ನು ಆಫೀಸರರಾಯರಿ ಗಾಗಿ ಅವರ ಹಿಂದಿರುವ ಭೃತ್ಯರಿಬ್ಬರು ಚೆದರಿಸಿದರು.

ಡಿಪ್ಟರನು ಓಪೋಡಿ ಹೊರಟನು. ಹುಚ್ಚನಂತೆ ಒಂದೇ ಸವನೆ ನಾಗಾಲೋಟವನ್ನು ಮಾಡಿದನು. ಅವನ ತಲೆ ಯೊಳಗೆ ಹೊಟೇಲುಕೀಪರನ "ಎಲೇ, ಇವನ . . ." ಎಂಬ ವಾಕ್ಯದಕವು ತೂಗುತ್ತಿತ್ತು. ಸರಿ, ಸಂಜೆಯಾ ಯಿತು ಎಷ್ಟು ನೈಲಿ ಸಾಗಿದನೆಂದೂ ಅವನಿಗೆ ತಿಳಿಯದು. ಕತ್ತಲೆಯಾಗಿ ಒಂದೆರಡು ಬಾರಿ ಎಡವಿದುದರಿಂದ, ಪಯಣವನ್ನು ಮುಂದರಿಸುವುದು ಒಳಿತಲ್ಲವೆಂದು ಅಲ್ಲೇ ಎಲ್ಲಾದರೂ ಗುಡಿಸುನಗಳಿರುವುವೋ ಎಂದು ನಿರೀಕ್ಷಿಸಿದನು ಎದುರಿನಲ್ಲಿ ಎರಡು ಫರ್ಲಾಂಗಿನ ದೂರಕ್ಕೆ ಒಂದು ಚಿಕ್ಕ ಗುಡ್ಡದ ಮೇಲೆ ಒಂದು ಮಿನುಗುವ ಬೆಳಕು ಕಾಣಿಸಿದುದರಿಂದ ಮೆಲ್ಲನೆ, ಅಲ್ಲಿಯ ತನಕ ಸಾಗಿಹೋದನು. ಅಲ್ಲೊಂದು ಗುಡಿಯಿತ್ತು. ಚಿಕ್ಕದೊಂದು ದೀಪವು ಉರಿಯುತ್ತಿತ್ತು ಆದರೆ ಹತ್ತಿರ ಯಾರ ಸುಳಿವೂ ಇದ್ದಿರಲಿಲ್ಲ. ಪ್ರಾಯಶಃ ಯಾರೋ ದೇವರಿಗಾಗಿ ದೀಪವನ್ನು ಉರಿಸಿ ಹೋಗಿರಬೇಕೆಂದು ಊಹಿಸಿ, ಬಲು ಆಯಾಸವಾದುದರಿಂದ, ಅಲ್ಲೇ ಗುಡಿಯ ಜಗುಲಿಯ ಮೇಲೆ ಮಲಗಿಕೊಂಡನು. ಕೈಲಾಸದ ನಿದ್ದೆಗಿಂತಘಳವಾದ ನಿದ್ರೆಯು ಬಂದಿತು.

ರಾತ್ರಿ ಎರಡನೆಯ ಪ್ರಹರವು ಸಲ್ಲಲು ಅವನ ನಿದ್ರೆಯು ನಾನಾ ಬಗೆಯ ಸ್ವಪ್ನಗಳಿಂದ ಭಂಗಗೊಂಡಿತು ವೀರಶೈವ ಹೊಟೇಲು ರಾಯನ "ಎಲೇ, ಇವನ—" ಎಂಬ ಮಾತು ಹೃದಯವನ್ನು ಕೊರೆಯುತ್ತಿತ್ತು. ನಿದ್ರೆಯುಲ್ಲಾ ಅವನನ್ನು ಜನರ ಪಲವು ಬಗೆ

ಯು ಪೀಡೆಪರಿತಾಪಗಳಿಗೆ ಗುರಿಮಾಡಿದಂತೆ ಕಂಡಿತು. ಕಳೆದ ದಿನಗಳಂತು ಕಳೆದುವು; ಮುಂದೆ ತಾನು ಬದುಕಲು ಏನು ಮಾಡುವುದು? ಬದುಕಲು ಎಲ್ಲಾ ಪರೂ ಚಾಕರಿಗೆ ನಿಂತರೆ, ದೇವದೂತರ ಆಗಮನಕ್ಕೆ ಪೂರ್ವರಂಗವನ್ನು ಕಲ್ಪಿಸುವುದಾವಾಗ? ಇತ್ತ ಮಾನವನಾದ ಮೇಲೆ ಮಾನವಶರೀರಕ್ಕೆ ಬೇಕಾದ ಊಟಉಡುಗೆಗಳಾದರೂ ಬೇಕಷ್ಟೆ! ಈ ಎಲ್ಲ ಚಿಂತೆಗಳು ಬಲವಾದುವು ನಾಳಿನ ದಿನ ಎಲ್ಲೂ ಹೋಗಲು ಧೈರ್ಯವಾಗಲಿಲ್ಲ; ಹೋದರೆ ಸ್ವಾಭಿಮಾನವೂ ನರರ ಕೈಗೆ ಸಿಕ್ಕಿ ಉಳಿಯುವಂತಿಲ್ಲ. ಇನ್ನು ಇವರು ತಾವಾಗಿಯೇ ಊಟ ಕೊಡುವಂತಿಲ್ಲ. ಬಟ್ಟೆಬರೆಗಳ ವಿಚಾರ ಇದ್ದೊಂದು ಶರ್ಟು—ವೀರಶೈವ ಭೋಜನಾಲಯದಲ್ಲೇ ಹರಿಯಿತು. ಈಗಿರುವುದೊಂದು ಹರಕುಪಂಚೆ. ಇನ್ನು ನಾಲ್ಕು ದಿನ ಸಂದರೆ ಅದೂ ಉಳಿಯುವಂತಿಲ್ಲ. ಇತ್ತ ಉಡುವುದಕ್ಕಿದ್ದರೆ ತೊಳೆಯುವುದಕ್ಕಿಲ್ಲ; ತೊಳೆಯುವುದಕ್ಕಿದ್ದರೆ ಉಡುವುದಕ್ಕಿಲ್ಲ. ಪಾಪ! ವ್ಯಾಘ್ರಚರ್ಮವು ಸಹ ಕೈಲಾಸದಲ್ಲುಳಿಯಿತು. ಆಗವನಿಗೆ ಪ್ರಭುದಾಸನ ಭಾಗ್ಯವನ್ನು ಕಂಡು ತುಂಬಾ ಮತ್ಸರವಾಯಿತು. ಮೈಯನ್ನಿಷ್ಟು ಶ್ರಮಿಸದೆ ಅಂತಹ ಊಟ ಉಪಚಾರಗಳನ್ನು ಹೊಂದಲು ಅವನು ನಿಜವಾಗಿಯೂ ಮಹಾತ್ಮನಾಗಿರಬೇಕೆಂದು ತಿಳಿದನು. ಆದರೆ ಅವನ ಎಂಜಲುಬಾಕ, ನಾರೀಶಿಷ್ಯರನ್ನು ಕಂಡು ರೋಷಮಾಂಚವಾಯಿತು. ತಾನು ಮನೆಯನ್ನು ಬಿಟ್ಟು

ಬಂದುದರಿಂದ ಮೂರ್ಖನಾದೆನೆಂದೂ, ಬಳಿಕ ಪ್ರಭು ದಾಸನಲ್ಲಾದರೂ ಆ ದಿನ ತಾಳ್ಮೆಗೆಡದಿದ್ದರೆ ಕಲವು ದಿನಗಳನ್ನಾದರೂ ಕಳೆಯುಬಹುದಿತ್ತೆಂದೂ ಯೋಚಿಸಿದನು. ನಾರದನು ಮೊದಲೇ ನರಲೋಕದ ಮಹಿಮೆಯುನ್ನು ಬಣ್ಣಿಸಿರಲಿಲ್ಲವೇ? ಅದು ನಿಜವೆಂದು ಇವನೂ ಮನಗಂಡನು.

ರಾತ್ರಿಯಲ್ಲಿ ಹಲವು ಬಗೆಯ ಸ್ವಪ್ನಗಳು ಕವಿದು, ರಾತ್ರಿ ಕಳೆಯುಲು ಇವನ ನಿದ್ದೆಯೊಡನೆ ಸಂದುಹೋದುವು. ಬೆಳಗಾಯಿತು. ಬೆಳಗಿನೊಂದಿಗೆ ಶರೀರ ಶ್ರಮದ ನೆನವೂ ಆಯಿತು. ಮೊದಲಿನ ದಿನ ಓಡಿ ಓಡಿ ಕಾಲನ್ನು ಕೀಳುವುದಕ್ಕಾಗಲಿಲ್ಲ. ನೋಡುತ್ತಾನ, ಎರಡೂ ಕಾಲುಗಳು ಬಾತಿಬಿಟ್ಟವೆ! ಅಲ್ಲಲ್ಲಿ ಚಿಕ್ಕ ಪುಟ್ಟ ಗಾಯುಗಳಿಂದ ರಕ್ತಸುರಿದು, ಒಣಗಿದೆ. ಅದರ ಕಡೆ ಇಷ್ಟು ಹೊತ್ತಿನ ತನಕ ಅವನಿಗೆ ಗಮನವಿರಿಸಲು ಸಾಧ್ಯವಾಗಲಿಲ್ಲ. ಇತ್ತ ಅಗ್ನಿದೇವನು ಇವನ ಉದರದಲ್ಲಿ ಉರಿಯುತ್ತಿದ್ದನು ಭಿಕ್ಷೆ ಬೇಡೋಣವೆಂದರೆ ಏಳಲು ಬರುವುದಿಲ್ಲ. ಏಳೋಣವೆಂದರೆ ಕಾಲು ಬರುವುದಿಲ್ಲ. ಇವೆರೆಡು ಬಂದರೂ ಅಭಿಮಾನಬಿಡುವಂತಿಲ್ಲ. ಈ ತಾಪಗಳ ಸುರಿಮಳೆಯಲ್ಲಿ ಬೆಂದುಬೆಂದು ಕೈಲಾಸಕ್ಕೆ ಮರಳುವುದೊಳಿತೆಂದು ಯೋಚಿಸಿದನು – ಆದರೆ ಭಾರೀ ಅಪಮಾನದ ಅಂಜಿಕೆಯು ಅವನನ್ನು ತಲ್ಲಣಗೊಳಿಸಿತು. ಕೈಲಾಸದ ಶಿವರಾಯನು ನವುಗೆ ಅಂಜಿ ಓಡಿಬಂದನೆಂದರೆ ಎಂಥ ನಗೆಗೇಡು! 'ಇಲ್ಲ, ನನ್ನ

ಹಟವನ್ನೂ ಸೇಡನ್ನೂ ಸಾಧಿಸಿಯೇ ತೀರುವೆನು. ಈ ನರಕುರಿಗಳನ್ನು ನನ್ನ ತಾಳಕ್ಕೆ ಸರಿಯಾಗಿ ನಾನು ಕುಣಿಸದಿದ್ದರೆ ನಾನು ಶಿವನಲ್ಲ' ಎಂದುಕೊಂಡನು. ಈ ಪ್ರತಿಜ್ಞೆಯ ಜತೆಯಲ್ಲಿ—ಅಭಿಮಾನಿಯಾದ ತಾನು ಈ ಮಾನಗೆಟ್ಟ ಮಾನವರೊಡನೆ [ಮಾನಗೆಟ್ಟದರಿಂದ ಲೇ ಮಾನವರೆನಿಸಿರಬೇಕೆಂಬ ಶಂಕೆಯೂ ಅವನಿಗೆ ಬಂದಿತು)—ಎಂದೂ ತಾನಾಗಿ ಮಾತನ್ನು ಆಡಲಾರ, ಬೇಡಲಾರೆ—ಎಂದೂ ಶಪಥಮಾಡಿದನು ಮಾಡಿದ ಪ್ರತಿಜ್ಞೆಗಳು ನಡೆಯುವುದು ಹೇಗೆಂದು ಅವನಿಗೆ ತಿಳಿಯದು. ಅವನು ಅದನ್ನು ಯೋಚಿಸುವ ಗೋಜಿಗೂ ಹೋಗಲಿಲ್ಲ. ಅದು ಅವನ ಸ್ವಭಾವಕ್ಕೆ ವಿರುದ್ಧ. ಇದುವರೆಗೆ ಅವನು ಡಿಪ್ಕರನಾಗಿ ಅಲ್ಲದಿದ್ದರೂ—ಈಶ್ವರನಾಗಿ, ಯಾರಾರಿಗೆ ಎಷ್ಟೆಷ್ಟುವರಗಳನ್ನುಕೊಟ್ಟಿರಲಿಲ್ಲ. ಅವನ್ನು ಕೊಡುವಾಗ ಹಿಂದುಮುಂದು ಯೋಚಿಸಿದ್ದನೇ! ಪ್ರಸನ್ನತೆಯಲ್ಲಿರುವಾಗಲೇ ಬುದ್ಧಿಳನ್ನುಪಯೋಗಿಸದ ಅವನು, ಚಿತ್ತವಿಕಲ್ಪ ಹೊಂದಿದಾಗ, ಸಾರಾಸಾರ ವಿಚಾರಮಾಡುವುದೆಂದರೇನು?

ಅವನಲ್ಲಿ ವಿಚಾರಶೀಲತೆಯು ಕಾಣದಿದ್ದರೂ ಹಟಮಾರಿತನವಿದೆ ಆದೊಂದು ಗುಣದಿಂದ ಅವನ ಮಾನ ಉಳಿದರೆ ಉಳಿಯಬೇಕು.

ಬೆಳಗಿನ ಸೂರ್ಯೋದಯವಾಗಿ ನಾಲ್ಕು ತಾಸಿನ ಬಳಿಕ ಮೆಲ್ಲನೆ ಎದ್ದು, ಉಟ್ಟ ಬಟ್ಟೆಯಿಂದ ಒಂದು ಕೌಪೀನವನ್ನು ಹರಿದು, ತೊಟ್ಟು, ಉಳಿದರ್ಧವನ್ನು ಬಳಿ

ಯಲ್ಲಿರುವ ಒಂದು ಚಿಕ್ಕಹೊಂಡದಲ್ಲಿ ಒದ್ದೆಮಾಡಿ ಒಣ
ಗಿಸಿದನು ನೀರಿನ ಮಹಿಮೆಯಿಂದ ಅದು ಕಾವಿ
ವರ್ಣ ತಾಳಿತು. ಅದೇ ನೀರನ್ನಿಷ್ಟು ಕುಡಿದು ಮಲಗಿ
ದನು ಇಷ್ಟು ದಿನ ಪೈತುಂಬ ಬಟ್ಟೆ ಧರಿಸಿ, ಈಗ
ಬೌದ್ಧಾಚತಾರಿಯಾದುವಕ್ಕೆ ಮನಸ್ಸು ಮುದುರಿತು.
ಅದಕ್ಕಾಗಿ ಹಳೇ ಪಾರವೊಂದನ್ನು ರೂಢಿಗೆ ತಂದನು.
ಬಳಿಯಲ್ಲಿ ಯಾರೋ ಅಡುಗಿಮಾಡಿ ಹೋದ ಒಲೆ
ಯೊಂದಿತ್ತು ಅದರಿಂದ ಸ್ವಲ್ಪ ಬೂದಿಯನ್ನಾರಿಸಿ
ಪೈತುಂಬ ಸವರಿಕಂಡನು. ಹಸಿವನ್ನು ಹಿಂಗಿಸ
ಲಾರದೆ ಅದೇ ಔಷಧವನ್ನು ಸ್ವಲ್ಪ ಭುಂಜಿಸಿದನು
ಇದು ಕೈಲಾಸಕ್ಕೊಂದು ಪಾರ ಮುಂದೆ ಮತ್ತೇನು—
ನಿವ್ರೆ ಮಾಡುವುದು ಅಲ್ಲಿಂದ ಎದ್ದು ಮುಂದೆ ಸಂಚರಿ
ಸುವುದೂ ಅವನಿಗೆ ಸರಿ ತೋರಲಿಲ್ಲ. ದಿನವೆಲ್ಲ
ಸಂದಿತು. ಮಂದಿಯ ಮೋರೆ ಸಹ ಅವನಿಗೆ ಕಾಣ
ಸಿಗಲಿಲ್ಲ ಸಂಜೆಯಾಗಲು ಒಬ್ಬಿಬ್ಬರು ಸ್ತ್ರೀಯರು
ಗುಡಿಗೆ ಬಂದು ಅಲ್ಲಿರುವ ಕಲ್ಲಿನ ಹಣತಿಗೆ ಎಣ್ಣೆ
ಹಾಕಿ, ಬತ್ತಿಯಿರಿಸಿ, ಉರಿಸಿ, ದೇವರಿಗೆ ನಮಸ್ಕರಿಸಿ
ಹೊರಟುಹೋದರು ಆಗಿವನು ಅಲ್ಲಿನ ಅರಳಿಮರಕ್ಕೆ
ಒರಗಿ ಕುಳಿತಿದ್ದನು. ಅವರು ತನ್ನ ಬಳಿಗೆ ಬಂದು
ತನ್ನನ್ನು ಉಪಚರಿಸುವರು ಎಂದು ಅವನ ಹಸಿವೆಯು
ಹೇಳಿತು. ಆದರೆ, ಬಂದ ಸ್ತ್ರೀಯರಿಗೆ ಅದಾ
ಹಸಿವಿನ ಪೀಡೆ ಇರದಿದ್ದುದರಿಂದ, ಅವರು ಇವ
ನನ್ನು ಕಂಡರೂ, ಕಾಣದಂತೆ ತಮ್ಮಷ್ಟಕ್ಕೆ ಊರ

ಸುದ್ದಿ ಮಾತಾಡಿಕೊಂಡು ಹೊರಟುಹೋದರು. ಮರುದಿನವೂ ಯಥಾಪ್ರಕಾರವಾಗಿ ಕಳೆಯಿತು. ರಾಯರು ಕುಳಿತಲ್ಲೇ ಇಲ್ಲವೆ ಮಲಗಿದಲ್ಲೇ, ಹಸಿವಾದರೆ ಅದನ್ನು ನಿವಾರಿಸಲು ಬಂದಷ್ಟು ನಿದ್ರೆ ಮಾಡುವುದು. ಹೀಗಾಗಿ ದಿನ ಹೋಗುತ್ತಾ ಶರೀರವು ಕೃಶವಾಯಿತು. ಮಾತನಾಡುವ ಶಕ್ತಿಯೂ ಕುಂದಿತು. ಈ ಸ್ಥಿತಿಯಲ್ಲಿ ಆರು ದಿನಗಳು ಸರಿದುವು ಈ ಆರು ದಿನವೂ ಅವೇ ಹೆಂಗಸರು ಬರುತ್ತಿದ್ದರು; ಇವನನ್ನು ಕಾಣುತ್ತಿದ್ದರು; ಇವನೋರ್ವ ಹೊಸ ಭೈರಾಗಿಯೆಂದು ಊಹಿಸಿ ಹೋಗುತ್ತಿದ್ದರು ಏಳನೆಯ ದಿನ ಅವರ ಕುತೂಹಲವು ಹೆಚ್ಚಿ, ಅವರು ಮನೆಯಿಂದ ಒಬ್ಬಿಬ್ಬರು ಹುಡುಗರನ್ನು—'ಆ ಭೈರಾಗಿ ಹಗಲೆಲ್ಲ ಅಲ್ಲೇನು ಮಾಡುವನೆಂದು ಕಂಡು ಬನ್ನಿ'—ಎಂದು ಕಳುಹಿಸಿದರು. ಹುಡುಗರು ಬಂದರು ದೂರದಲ್ಲಿ ಅಡಗಿ ನಿಂತರು ಸಂಜೆ ಮನೆಗೆ ಹೋಗಿ, 'ಅವನು ಕುಳಿತಲ್ಲಿಂದ ಕದಲುತ್ತಲಿಲ್ಲ ಧ್ಯಾನಮಗ್ನನಾಗಿರುವನೆ'ಂಬ ಸುದ್ದಿ ತಿಳಿಸಿದರು. ಆಗವರಿಗೆ ಇವನೋರ್ವ ವ್ರತಧಾರಿ ಸನ್ಯಾಸಿಯೆಂಬ ಊಹೆ ಬಂದಿತು ಬೇಗನೆ ಓಡೋಡಿ ಗುಡಿಗೆ ಬಂದರು. ದೀಪ ಉರಿಸುವ ಮೊದಲು, ಇವನ ಬಳಿಗೆ ಬಂದು ನಮಸ್ಕರಿಸಿದರು ಆಗಿವನು ಕುಳಿತಿದ್ದನು. ಅರೆಗಣ್ಣಿನಿಂದ ನಿದ್ದೆಮಾಡುತ್ತಿದ್ದನು; ಅದು ಸನ್ಯಾಸಿಯ ತಪಸ್ಸೆಂದು ತಿಳಿದರು. ಬಂದ ನಾರಿಯರು ಅವನನ್ನು ಮಾತನಾಡಿಸುವ ನಿರರ್ಥಕ ಯತ್ನಮಾಡಿ,

ಗುಡಿಗೆ ಹೋಗಿ ದೀವಿಗೆ ಹೊತ್ತಿಸಿ ತಿರುಗಿ ಅವನ ಬಳಿಗೆ ಬಂದರು ಆಗಲೂ ಮೌನವೇ. ಬೇರೆ ಉಪಾಯ ಕಾಣದೆ ಮನೆಗೆ ಹೋಗಿ, ತಮ್ಮ ಪತಿ ರಾಯರುಗಳಿಗೆ ಸುದ್ದಿಯುರುಹಿದರು. ಅವರು ಮೊದಲು ನಕ್ಕರು. 'ಎಲ್ಲೋ ಮಾರ್ಜಾಲ ಸನ್ಯಾಸಿ' ಎಂದು ಪರಿಹಾಸ್ಯಮಾಡಿದರು. ಕೊನಗೆ ಅವನು ಠಕ್ಕನೆಂದು ಸಿದ್ಧಾಂತಪಡಿಸಲು, ರಾತ್ರಿ ಇಬ್ಬರು ಕೂಡಿಕೊಂಡು ಗುಡಿಗೆಹೋದರು ಆಗಲೂ ಇವನು ಅಲಿಸದೆ ಕುಳಿತಿದ್ದ ಚಿತ್ರವು ಬೆಳ್ದಿಂಗಳಿನಲ್ಲಿ ಅವರ ಕಣ್ಣಿಗೆ ಬಿತ್ತು. ಇವರು ರಾತ್ರಿಯಿಂದ ಬೆಳಗಿನ ವರೆಗೂ ಹಾಗೆ ಇದ್ದುದನ್ನು ಕಂಡು: 'ಅಯ್ಯೋ—ದೇವರಂಥ ಮನುಷ್ಯ'! ಎಂದುಕೊಂಡು ಮನೆಗೋಡಿಬಂದರು.

ಸರಿ; ಊರಿಗೊಬ್ಬ ಮಹಾಸನ್ಯಾಸಿ ಬಂದಿರುವನೆಂಬ ಸುದ್ದಿ ಕತ್ತುರಿಯಂತ ಹಬ್ಬಿತು. ಊರವರಲ್ಲಾ ಓಡಿಬಂದು ಉದ್ದಂಡ ನಮಸ್ಕರಿಸಿದರು. ಇವನ ಪಾದಧೂಳಿಯನ್ನು ಕರೆದು ತಲೆಯ ಮೇಲಿರಿಸಿಕೊಂಡರು. ಅವನು ದೂರದಲ್ಲಿ ಕಡವಿದ್ದ ಕಾವಿಬಟ್ಟೆ ಹರಿದು, ಒಂದೊಂದು ಚೂರನ್ನು ಒಂದೊಂದು ಪ್ರಸಾದವಾಗಿರಿಸಿಕೊಂಡರು. ಆಗ ಡಿಪ್ಕರನು ಹಟದಿಂದಲೂ ಕುಳಿತೇ ಇದ್ದನು. ಸಾಕಷ್ಟು ಚೈತನ್ಯವೂ ಇದ್ದಿಲ್ಲ. ಓರ್ವ ವೃದ್ಧೆಯು ಸ್ವಲ್ಪಹಾಲನ್ನು ತಂದು ಅವನ ಮುಂದಿರಿಸಿದಳು. ಡಿಪ್ಕರನ ಅರೆಗಣ್ಣಿಗೆ ಏನೋ ಬೆಳ್ಳಗಿನ ವಸ್ತುವಿದ್ದಂತೆ ಕಂಡಿತು. ಆದರೂ ಮುಟ್ಟಲಿಲ್ಲ. ಆಗೊಬ್ಬ ಮುದು

ಕಸು 'ಕೆಲವು ಸಾಧುಗಳು ತಾವಾಗಿ ಏನನ್ನೂ ಸ್ವೀಕ
ರಿಸುವುದಿಲ್ಲ' — ಎಂದನು ಆಗ ಬಳಿಯಲ್ಲಿ ಒಂದೆರಡು
ವರುಷಗಳ ಹಿಂದೆ ಪ್ರಭುದಾಸರ ಬಳಿಗೆ ಹೋಗಿ ಬಂದ
ನಾರಿಯೊಬ್ಬಳು, ಉಪಾಯಮಾಡುವೆನೆಂದು ದೂದ
ವೇಡಾ ಪ್ರಭುರಾಯರ ಬಾಯಿಗಿಡುತ್ತಿದ್ದಂತೆ, ಬಲವಂತ
ದಿಂದ ಇವನ ಬಾಯಿತೆರೆದು ಸ್ವಲ್ಪ ಹಾಲುಹಾಕಿದಳು.
ಡಿಪ್ಕರನಿಗೆ ಕುಡಿಯಲೇ ಬಿಡಲೇ ಎಂಬ ವಿಚಾರಬಂದಿ
ತು. ಕುಡಿದರೆ ಅಭಿಮಾನ ಪ್ರತಿಜ್ಞೆಗಳಿಗೆ ಕೂರತೆ
ಯಲ್ಲವೇ ಎಂಬ ಸಂಶಯ ಕೊನೆಗೆ ಅಭಿಮಾನಕ್ಕೂ
ಹಸಿವು ಮಿಗಿಲೆಂದು ತಿಳಿದು ಹಾಲನ್ನು ನುಂಗಿದನು.
ಮತ್ತೇನು—ಒಂದೇ ನವನೆ ತಂದ ಹಾಲೆಲ್ಲಾ ನುಂಗಲ್ಪ
ಟ್ಟಿತು. ಡಿಪ್ಕರನಿಗೆ ತನ್ನ ಪಂಥ ಗೆದ್ದುದಕ್ಕಾಗಿ ನಗೆ
ಬಂದಿತು. ಸರಿ, ಅಲ್ಲೀ ನಾಮಕರಣವಮಾಡಿಬಿಟ್ಟರು.
ಜನರು “ಇವರು ಸಾಧುಸದಾನಂದರಿರಬೇಕು. ಅವರನ್ನು
ನಾನು ಪುಣೆಗೆ ಹೋದಾಗ ಕಂಡಿದ್ದೆ. ನೋಡು; ಇದೇ
ರೀತಿಯಿದ್ದರು. ಇದೇ ಬಂಣ; ಇದೇ ಆಕಾರ.
ಭಾರೀ ತಪಸ್ವಿಗಳು. ಖಂಡಿತ ಅವರೇ ಇವ
ರು”— ಎಂದು ಒಬ್ಬನು ಧೈರ್ಯದಿಂದ ನುಡಿದು
ಬಿಟ್ಟನು.

ಸರಿ, ಆ ಬೆಟ್ಟದ ತುದಿಯು - 'ಸಾಧುಸದಾನಂದ
ಮಹಾರಾಜಕೀ ಜೈ' ಎಂಬ ಜಯಘೋಷದಿಂದ ತುಂಬಿ
ತುಳುಕಿತು

## ಪ್ರಕರಣ ೮.

# ಗೆದ್ದನು, ನಮ್ಮ ಶಿವರಾಯ!

'ಸಾಧು ಸದಾನಂದ ಮಹಾರಾಜಕೀ ಜೈ'— ಇದೇ ನಮ್ಮ ಡಿಪ್ಪರನ ವಿಜಯದ ಹೆಗ್ಗುರುತು. ಅವನಿಗೀಗ ತಿಳಿದಿದೆ: ಯಾರಿಗೂ ತಲೆವಾಗದ ನರರು ಸಾಧು ಸಂತರಿಗೆ ಮಣಿಯುವರೆಂದು. ಆದರೆ ಅವನ ಸಾಧುತ್ವದ ಮಾರ್ಗವು ಸುಲಭವಾಗಿರಲಿಲ್ಲ ಕಾರಣ, ಅವನಿಗೆ ಪ್ರಭುದಾಸರಂತೆ ಶಿಷ್ಯಕೋಟಿಯು ಮೇಲೆ ಆ ವಿಚಿತ್ರ ಪ್ರಸನ್ನಚಿತ್ತತೆಯೂ ಇದ್ದಿಲ್ಲ. ಒಂದೆರಡು ಬಾರಿ ಅವನಲ್ಲಿ ಕಲವೊಂದು ಮಂದಿ ಶ್ರೀಮಂತರು ತಮ್ಮ ಮನೆಯ ಆಮಂತ್ರಣವನ್ನು ಸ್ವೀಕರಿಸಿ ಊಟಕ್ಕ ಬರಬೇಕೆಂದು ಕೇಳಿಕೊಂಡರು. ಆದರೆ, ಹಾಗೆ ಮನ ಮನೆ ತಿರುಗುವ ಸನ್ಯಾಸಿಗೆ ಏನೇನು ಆಪತ್ತಿದೆಯೆಂದು ಅವನು ಮನಗಂಡಿದ್ದನಾದ್ದರಿಂದ ಅದನ್ನು ನಿರಾಕರಿಸಿದನು. ಆಗಿಂದಲೇ ಅವರು ಇವನ ನಡತಯನ್ನು ಟೀಕಿಸತೊಡಗಿದರು. ಇವನೊಡನೆ ಪ್ರಭುದಾಸರನ್ನು ಹೋಲಿಸಿ, ಅವರ ಗುಣಗಳನ್ನು ಹೊಗಳುತ್ತ, ಇವನ ಗುಣಗಳನ್ನು ತಗಳುತ್ತ ಕುಳಿತರು. ಆದರೆ ಸಾಮಾನ್ಯ ಜನರ ಪಾಲಿಗೆ ಸಾಧು ಸದಾನಂದನು ಮಹಾಸಾಧುವೆನಿಸಿಕೊಂಡನು ಅವನೀಗ ಪರರು ನೀಡಿದರೆ ಮಾತ್ರ ತಿನ್ನುವುದು; ಇಲ್ಲದಿದ್ದರೆ ಉಪವಾಸ. ಯಾರ ಮನೆಗೂ ಹೋಗುವವನಲ್ಲ. ಭಕ್ತಿಯಿಂದ

ಯಾರಾದರೂ ಬಂದರೆ ನಾಲ್ಕಾರು ಉಪದೇಶದ ಮಾತುಗಳನ್ನು ಹೇಳುತ್ತಿದ್ದನು. ಇದರಿಂದ ಕೆಲ ವೊಂದು ಶಿಷ್ಯರು ಅವನ ಬಳಿಯಲ್ಲಿ ಸದಾ ಸುತ್ತು ತಿರುಗುತ್ತಿದ್ದರು. ಆದರೆ ಸಾಮಾನ್ಯವಾಗಿ, ಈ ಶಿಷ್ಯ ಕೋಟಿಯ ಗುಣವನು ಟೀಕಿಸುವುದಾದರೆ – ಅವರ ದೆಲ್ಲ ವಿಚಿತ್ರ ಮನೋವೃತ್ತಿಯೆಂದೇ ಹೇಳಬಹುದು

ಸದಾನಂದನು ಸಾಧುಪದವಿಯನ್ನು ಗಳಿಸಿ, ಕಾಲುಹಾದಿಯಿಂದಲೇ ಸಾಗಿ ದಾವಣಗೆರೆಗೆ ಬಂದನು. 'ಕಾಲುಹಾದಿಯಿಂದಲೇ' ಅಂದರೆ ಅವನಿಗೆ ರೈಲಿನವರ ಆಶ್ರಯವನ್ನು ಸ್ವೀಕರಿಸುವ ಇಚ್ಛೆಯಾಗಲಿ, ಕಾಸನ್ನು ಕೂಡಿಸುವ ಇಚ್ಛೆಯಾಗಲಿ ಇದ್ದಿಲ್ಲ. ಯಾರಾದರೂ ಭಕ್ತಿಯಿಂದಲೋ, ಇನ್ನಾವ ಕಾರಣದಿಂದಲೋ ಅವನ ಮುಂದೆ ಹಣವನ್ನು ಸುರಿದರೆ ಅದನ್ನು ತಂದವರ ಮೋರೆಗೇ ಎಸೆಯುವಷ್ಟು ಸಿಟ್ಟು ಬರುತ್ತಿತ್ತು. ಶಿವರಾಯನಿಗೆ ಕಪಟದ ಸಾಧುವಾಗುವುದು ಎಂದೂ ಸಲ್ಲದ ನಡತೆ ಅವನು ಸರಳರಲ್ಲಿ ಸರಳನು ನರರೊಡನೆ ಸರಳ ಮಾರ್ಗವು ಸಲ್ಲದೆಂದು ನಾರದನು ಉಪದೇಶಿಸಿ ಕಳುಹಿಸಿದ್ದರೂ ನರರಿಗಾಗಿ ಅವನು ರಕ್ಕಸನೋಗನ್ನು ಧರಿಸಲಾರನು ಆದರೆ ಅವನೀಗ ಸಾಧುವಾದರೂ, ಸಾಧುತ್ವದಿಂದ ಲಭಿಸಬೇಕಾದುದೇನೂ ಇಲ್ಲ ಒಟ್ಟಾರೆ ಅವನಲ್ಲಿನ ಇಂದಿನ ವಿಶೇಷ ಗುಣವೆಂದರೆ,—ಅಥವಾ ಸುಧಾರಣೆಯೆಂದರೂ ಅನ್ನಿರಿ. ಅದು ಅವನ ಶಾಂತತೆ; ಕೋಪವರ್ಜನೆ. ಕೋಪದಿಂದ ತನ್ನ ಉದ್ದೇಶವು

ಏನೇನೂ ನಾಧಿಸವೆಂಬುದರಿಂದ, ಕೇವಲ ಶಾಂತ ಮೂರ್ತಿಯಾದನು. ಯಾರು ಏನು ಹೇಳಿದರೂ ಸುಮ್ಮನಿರುವನು; ತನ್ನ ಮನಸ್ಸಿಗೆ ತೋರಿದ ಉತ್ತರ ವನ್ನು ಸರಳವಾಗಿ ಅಂದುಬಿಡುವನು. ಅದು ಅಪ್ರಿಯ ವಾಗಿದ್ದರೂ ಅದನ್ನು ಹೇಳುವಾಗ, ಸಿಟ್ಟಿನ ಬೆರಿಕೆಯಿರು ತ್ತಿದ್ದಿಲ್ಲ. ಹೀಗಾಗಿ ಅವನ ಬಳಿಗೆ ಎಲ್ಲ ತರದ ಜನರು ಬರುವ್ರಪಕ್ಕಡ್ಡಿಯಿದ್ದಿಲ್ಲ

ಕಲವರು ಏನಾದರೊಂದು ಕಾಂಕ್ಷೆಯಿಂದ ಅವ ನಲ್ಲಿಗೆ ಬರುವರು ಕೆಲವರು, ತಾವು ಸಾಧು ಸಂಗ ಬೆಳೆಯಿಸುವವರೆಂದೂ ತಮಗೆ ಸಜ್ಜನರಲ್ಲಿ ಪ್ರೇಮ ವಿದೆಯೆಂದೂ ತೋರಿಸಿಕೊಳ್ಳಲು ಬರುವರು ಈ ತರ ಗತಿಯ ಜನರಿಗೆ ಸದಾನಂದನಿಂದ ಕಾಸಿನ ಉಪ ಯೋಗವಾಗದಿದ್ದರೂ, ಅವರು ತಮ್ಮ ಯಾವತ್ತು ಮಾತುಕಥೆಗಳಲ್ಲಿ ಸಾಧುವಿನ ನಾಮಸ್ಮರಣೆ ಬಿಡು ತ್ತಿರಲಿಲ್ಲ. ಏನನ್ನು ಮಾತನಾಡುವಾಗಲೂ—'ಸಾಧು ಗಳು ಹಾಗಂದರು, ಸಾಧುಗಳು ಹೀಗಂದರು'.— 'ಸಂಸಾರವು ನೀರಮೇಲಣ ಗುಳ್ಳೆಯೆಂದರು.' ಎಂದೆಲ್ಲಾ ಹರಟುವರು. ಯಾರಾದರೂ ದುಃಖದಿಂದ ಪೀಡಿತ ರಾಗಿದ್ದರೆ - ಅವರಿಗೆ ಸಾಧುಗಳ ನುಡಿಯಿಂದಲೇ, ಅಥವಾ ಸಾಧುಗಳು ಹೇಳಿದರೆಂದು ತಮ್ಮದೇ ನವೀನ ಸಂದೇಶದಿಂದಲೋ–ಉಪದೇಶ ಮಾಡುತ್ತಿದ್ದರು ಇದ ರಿಂದ ತಾವು ಸಾಧುಗಳ ಮರಿಗಳೋ, ಮೊಟ್ಟೆಗಳೋ ಆಗಬಹುದೆಂದು ಅವರ ಮನಸ್ಸು. ಇವರಲ್ಲದೆ, ಬೇರೆ

ತರಗತಿಯ ಮನುಷ್ಯರೂ ಅವರಲ್ಲಿಗೆ ಬರುತ್ತಿದ್ದರು. ಕೆಲವರು — ಇತರರು ಏತಕ್ಕೆ ಬರುವರು — ಎಂದು ನೋಡುವುದರ ಸಲುವಾಗಿಯೇ ಬರುವರು. 'ಅಲ್ಲಿ ಏನೇನು ಮಾತುಕಥೆಗಳು ನಡೆದುವು. ತಮ್ಮ ಗೆಳೆಯರೋ, ವೈರಿಗಳೋ, ಏನೇನು ಸಂಭಾಷಣೆ ಮಾಡಿದರು, ಅವರಿಗೆ ಸಾಧುಗಳೇಸೆಂದರು — ಅವರೇನಾದರೂ ಅಂದಿದ್ದರೆ ಅವೇ ಟೀಕೆಗಳಿಂದ ಆ ಮನುಷ್ಯರನ್ನು ಹೇಗೆ ಪರಿಹಾಸ್ಯಮಾಡಬಹುದು, — ಇವು ಕೆಲವರ ಚಿಂತೆ. ತಮಗಾಗದವರನ್ನು ಕಂಡರೆ — 'ಸಾಧು ಸದಾನಂದರ ಶಿಷ್ಯ ಚಿದಾನಂದರಷ್ಟೆ' ಎಂದು ನಕಲಿ ಮಾಡುವರು. ಇನ್ನು ಕೆಲವರಿಗೆ ಸಾಧುಗಳೆಂದರೇ ವೈರ. ರಕ್ಕು ಸಾಧುಗಳಿಂದ ಹಿಡಿದು ಯೋಗ್ಯರವರೆಗೆ — ಎಲ್ಲರೂ — ಅವರ ಪಾಲಿಗೆ ರಾವಣ ಸನ್ಯಾಸಿಗಳಾಗಿ ಕಾಣುವರು. ಅವರ ಕೆಲಸವಿಷ್ಟೆ — ಕಾವಿ ತೊಟ್ಟವರನ್ನೆಲ್ಲಾ ಏನೇನೂ ತಿಳಿಯದಿದ್ದರೂ ಬೈಯ್ಯುವುದು. ಅದೂ ಒಂದು ನ್ಯಾಯವೇ — ಕಾರಣ, ತಿಳಿದು ಬಯ್ಯುವುದರಲ್ಲಿ ಕಷ್ಟವಿದೆ. ತಿಳಿಯದೆ ಬಯ್ಯುವುದಕ್ಕೆ ಹಿಂದೆ ಮುಂದೆ ನೋಡಬೇಕಿಲ್ಲ; ಕಾರಣಗಳೂ ಬೇಕಿಲ್ಲ. ಇಂಥವರು ಬರುವುದು — ಕೇವಲ ಸಾಧುಗಳನ್ನು ಕಂಡು, ತಮ್ಮ ಅಳತೆಯ ಕೋಲಿಂದ ಅವರನ್ನಳೆದು ನಿಂದಿಸುವುದಕ್ಕೆ. ಅವರು ಬರುವ ಮೊದಲೇ, 'ಸಾಧು ಸದಾನಂದನು ಹೀಗೇಕೆ ಇರಬೇಕು' ಎಂಬ ನಿಶ್ಚಿತ ಗೊತ್ತುವಳಿಯಿಂದಲೇ ಬರು

ವರು. ಅವರು ಅಲ್ಲಿಗೆ ನೂರಾವೃತ್ತಿ ಬಂದರೂ ಅವರ ಅಭಿಪ್ರಾಯ ಬದಲಿಸದು; ಕಾರಣ, ಬದಲಿಸಬಾರ ದೆಂದೇ ಅವರ ಹಟ. ಇಂಥ ಜನರು, ಸಾಧುಗಳ ಬಳಿಗೆ ಬಂದಾಗ ಭಾರಿ ಭಾರಿ ವಿಜ್ಞಾನದ ಮಾತನ್ನಾಡು ವರು. ಅವರನ್ನು ವಾದದಲ್ಲಿ ನೋಲಿಸಬೇಕೆಂದು ಯತ್ನಿಸುವರು. ತಮಗೆ ತಿಳಿಯದ ನೂರಾರು ಉದಾ ಹರಣೆ, ಉಪಮಾನಗಳನ್ನು ಕೊಡುವರು. ಇವರಿಗೆ ತಾನು ಹೇಳಿದ ವಿಷಯವು ಮುಂದಟ್ಟಾಗಲಿಲ್ಲವೆಂದು ಸಾಧುವಿಗೆ ತಿಳಿದರೆ–“ಸುಮ್ಮನೆ ವಾದವು ಉಪಯೋಗ ವಿಲ್ಲ. ಧರ್ಮದ ರಹಸ್ಯವು ಆಚರಣೆಯ ಮೇಲಿಂದ ಹೊಳೆಯುವುದು; ಅದರ ಪೂರ್ವದಲ್ಲಲ್ಲ” ಎನ್ನು ವನು. ಅಲ್ಲಿಗೆ ಸಾಧುವಿನ ಪರಾಜಯವಾಯಿತೆಂಬ ಹಿಗ್ಗಿನಿಂದ ಈ ತರ್ಕಿಗಳು ಮರಳುವರು.

ಇವರಿಗಿಂತಲೂ ವಿಷಮಯಪ್ರಾಣಿಗಳು ಬರುವು ದುಂಟು. ಅವರ ಬರುವಿಕೆಗೂ, ಸಾಧುವಿಗೂ ಸಂಬಂಧ ವಿಲ್ಲ. ಅವರಿಗೆ ಸಾಧುವು ಕಣ್ಣಿಗೆ ಬೀಳದಿದ್ದರೂ ಹರುಷವೇ. ಅವರಿಗೆ ಸಾಧುವಿನ ಶಿಷ್ಯರ ಮೇಲೆ ಅಂದರೆ ಅಲ್ಲಿಗೆ ಬಂದು ಹೋಗುವ ಸ್ತ್ರೀಪುರುಷರ ಮೇಲೆ ಪ್ರೇಮ. ಹೀಗೆ ಅಲ್ಲಿಗೆ ಬರುವ ತರುಣಸ್ತ್ರೀಯರನ್ನು ನೋಡಲು ಎಳೆಕೊರಡುಗಳಿಂದ, ಹಳೆಕೊರಡುಗಳ ವರೆಗೂ, ತರುಣರನ್ನು ನೋಡಲು ಸ್ತ್ರೀಯರೂ, ತಂಡೋಪತಂಡವಾಗಿ ಬರುತ್ತಿದ್ದರು ಕೆಲವು ದಿನಗಳ ಮಟ್ಟಿಗೆ ನಮ್ಮ ಸಾಧುವು ಬೆಂಗಳೂರಿನ ತನಕ ಹೋಗಿ,

ಒಂದು ಛತ್ರದಲ್ಲಿ ನೆಲಸಿಕೊಂಡನು. ಸಾಧು ಸದಾ ನಂದನು ಬಂದನೆಂದರೆ– ಊರಿಗೆ ತಕ್ಷಣವೇ ಸುದ್ದಿ. ಸರಿ, ಅವನ ಬಳಿಗೆ ಇರುವೆ ಬಂದಂತೆ ಜನರು ಬರು ವರು. ಬೆಂಗಳೂರಿನಲ್ಲಿರುವಾಗ ಸಂಜೆ ಪಾರಕ್ಕ ಚಕ್ಕರುಹಾಕಿ ಕಾಲೇಜಿನ ವಿದ್ಯಾರ್ಥಿಗಳು ಅವರ ಛತ್ರದಲ್ಲಿ ತುಂಬಿಬಿಡುತ್ತಿದ್ದರು. ಅವರ ಸಿಗರೆಟ್ಟು ವೇಷಭೂಷಗಳೇನು? ಅವರಲ್ಲಿ ಅರ್ಧಾಂಶವುಂದಿಗ ಸಾಧುವಿನ ಆಕಾರ ಹೇಗಿದೆ ಎನ್ನಲುಬಾರದು. ಕಾರಣ, ಅವರ ಛತ್ರದ ಬಳಿಗೆ ನೂರಾವೃತ್ತಿ ಬಂದಿರ ಬಹುವಾದರೂ ಸಾಧುವನ್ನು ಕಂಡಿರಲಿಲ್ಲ ಅವರು ಕಂಡದ್ದು, ಕಾಣುವುದು—ಬೇರೆಯುವರನ್ನು. ಇದರ ಮರ್ಮವು ಒಂದುದಿನ ಸದಾನಂದಗೆ ತಿಳಿದು ತೀರ ವ್ಯಸನವಾಯಿತು. ಆದರೆ ಅದನ್ನು ನಿಲ್ಲಿಸುವ ಸಾಮರ್ಥ್ಯ ವಿರಲಿಲ್ಲ. ಅವನ ಕೀರ್ತಿಯಿರುವಷ್ಟು ದಿನ, ಜನರು ಅವನಿರುವಲ್ಲಿಗೆ ಬರುವುದು ತಪ್ಪದು ಅವನಲ್ಲಿ ಯಾರು ಒಳ್ಳೆಯುವರು ಯಾರು ಕೆಟ್ಟವರೆಂದು ಒಮ್ಮೆಗ ನಿರ್ಧರಿ ಸಲು ಬಾರದು. ಹೀಗೆ ಅಂಧವರ ಕುಣಿತಕ್ಕೆ ಅವ ಕಾಶ ಕೊಡಕೂಡದೆಂದು, ವನವಾಸಿಯಾಗೋಣ ವೆಂದರೆ – ಬಂದ ಕಾರ್ಯದ ಗತಿ?

ಇನ್ನು ಅವನಲ್ಲಿಗೆ ಬಂದವರ ಕೆಲವು ಉತ್ತಮ ಉದಾಹರಣೆಗಳನ್ನು ಕೊಡುವೆವು. ಸದಾನಂದನಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ದೊಡ್ಡವರ ತನಕ ಉಪ ದೇಶಕೇಳುವದು ಬಹಳ. ಮೊದಮೊದಲು ಸಾಧುವು

ಅಗ್ಗದ ಉಪದೇಶಮಾಡಿದನು. ಇವರು ನಿಜವಾಗಿಯೂ ಉಪದೇಶವನ್ನು ಬಯಸಿದವರೆಂದೇ ಅವನ ತಿಳುವಳಿಕೆಯಾಗಿತ್ತು ಆದರೆ ಒಂದು ದಿನ ಒಂದು ಚಮತ್ಕೃತಿ ನಡೆಯಿತು. ಒಬ್ಬ ವೈಶ್ಯ ಸಾಹುಕಾರನು ಅವನ ಬಳಿಗೆ ಬಂದು, ಸ್ವಲ್ಪ ಹಣ್ಣುಹಂಪಲನ್ನು ಅವನ ಮುಂದಿರಿಸಿ—'ಸ್ವಾಮಿ, ಈ ಬಡವನಿಗೆ ಏನಾದರೂ ಉಪದೇಶಮಾಡಿ, ಉದ್ಧರಿಸಬೇಕು' ಎಂದನು. ಸಾಧುವು—'ಸರಿ, ಸ್ನಾನಮಾಡಿ ಬಾ' ಎಂದನು ವೈಶ್ಯನು ಸ್ನಾನಮಾಡಿ ಅವರಿರುವಲ್ಲಿಗೆ ಬಂದು, ಅವರನ್ನು ನಮಸ್ಕರಿಸಿ, ಕುಳಿತುಕೊಂಡನು ಸದಾನಂದನು ಉಪದೇಶಮಾಡುವ ಆತುರದಿಂದ, ಅವನ ಮೋರೆಯನ್ನು ನಿರೀಕ್ಷಿಸಿದನು. ಆಶ್ಚರ್ಯವಾಯಿತು. ಅದೇ ನಾಲ್ಕು ದಿನಗಳ ಮೊದಲು ಅದೇ ವ್ಯಕ್ತಿಗೆ ಅವನು ಅದೇ ಸ್ಥಳದಲ್ಲಿ ಉಪದೇಶಮಾಡಿದ್ದನು. ಅದವನಿಗೆ ಮರೆವೆಯಾಗಿತ್ತು. ಇಂಥ ಅದ್ಭುತ ಭಕ್ತಿಯನ್ನು ಕಂಡು, ಸದಾನಂದನು: "ಏನು ಸಾಹುಕಾರರೇ, ನೀವು ಮೊನ್ನೆ ನನ್ನಲ್ಲಿಗೆ ಬಂದು ಉಪದೇಶಮಾಡಿಸಿಕೊಂಡು ಹೋಗಿದ್ದಿರಿ, ತಿರುಗಿ ಇನ್ನೊಂದು ಉಪದೇಶವೆಂದರೇನು?" ಎಂದು ಕೇಳಿದನು. ವೈಶ್ಯನ ಎದೆ 'ಜಗ್ಗೆಂ'ದಿತು "ಸ್ವಾಮಿ, ಆ ದಿನ ವ್ಯಾಪಾರದ ಗಡಿಬಿಡಿ ಬಹಳವಿತ್ತು; ಏನೋ ಒಂದು ಹಣದ ತಗಾದೆಯಿಂದ ಮನಸ್ಸು ಚಂಚಲವಾಗಿತ್ತು. ಆ ಕಾರಣ, ನೀವು ಹೇಳಿದುದು ನನ್ನ ಸ್ಮರಣೆಯಲ್ಲಿ ಉಳಿಯದಿದ್ದುದರಿಂದ ತಿರುಗಿ ಬಂದೆ"—ಅಂದನು.

ಅದಕ್ಕೆ ಸಾಧುವು ನಗುತ್ತ—'ನಿನ್ನ ವ್ಯಾಪಾರವೆಲ್ಲ ನಿಂತು, ನಿನ್ನ ತಲೆಯು ದೈವಚಿಂತನಕ್ಕೆ ತಕ್ಕಷ್ಟು ಶಾಂತ ವಾದಾಗ ಬಾ; ಈಗ ಹೇಳಿದರೆ ತಿರುಗಿ ಮರವೆಯಾ ದೀತು'—ಎಂದು ಹಿಂದಕ್ಕೆ ಕಳುಹಿಸಿದನು.

ಇನ್ನೊಂದು ದಿನ ಓರ್ವ ಯುವಕನು ತನ್ನ ಇನ್ನೊಬ್ಬ ಗೆಳೆಯನನ್ನು ಕರೆದುಕೊಂಡು ಅವರ ದರು ಶನಕ್ಕೆ ಬಂದನು. ಆ ಯುವಕನು ಅಲ್ಲಿಗೆ ಯಾವಾ ಗಲೂ ಬರುವವನು. ಸಾಧುವಿಗೆ ಇದಕ್ಕಾಗಿ ಅವ ನಲ್ಲಿ ಒಂದುರೀತಿಯ ಪ್ರೇಮ ಉತ್ಪನ್ನವಾಗುವುದರ ಲ್ಲಿತ್ತು. ಆದುದರಿಂದ ಈ ಹೊಸ ಗೆಳೆಯನನ್ನು ಅವನು ಕರೆತಂದುದು ನೋಡಿ—"ಏನು, ಒಬ್ಬ ನವೀನ ಮಿತ್ರರನ್ನು ಕರೆತಂದಿರುವೆ! ಇವನಾರು? ಒಳ್ಳೆಯ ದನ್ನು ಮಾಡಿದೆ ನಿಮ್ಮಂತಹ ತರುಣರಿಂದ ಧರ್ಮ ಜಾಗ್ರತಿಯಾಗಬೇಕು"—ಎಂದನು ಆಗ ಯುವ ಕನು—'ಇವನು, ನನ್ನ ಸಹಪಾಠಿ. ಇವನನ್ನು ಆಗ್ರಹ ದಿಂದ ನಿಮ್ಮ ಬಳಿಗೆ ಕರೆತಂದೆ. ಅವನಿಗೆ ಧರ್ಮದ ಮೇಲೆ ಶ್ರದ್ಧೆ ಬಹಳ'—ಹೀಗೆಂದು ಹೇಳಿ ತಾನು ಅವರಿಗೆ ನಮಸ್ಕರಿಸಿದನು. ಅವನ ಜತೆಗಾರನು ತನ್ನ ಗೆಳೆಯನನ್ನು ಅನುಕರಿಸಿ ಸದಾನಂದಗೆ ನಮಸ್ಕರಿಸಿ ದನು. ಸಾಧುವು ಅವನನ್ನು ಪ್ರೀತಿಯಿಂದ ಆದರಿಸಿ, ಅವನ ಕೈಯ್ಯನ್ನು ಹಿಡಿದು, 'ಕುಳಿತುಕೋ' ಎಂದು ಉಪಚರಿಸಿದನು ಹಾಗೆ ಕೈ ಹಿಡಿಯಲು, ಯುವ ಕನು ಅವರ ಹಿಡಿತದಿಂದ ತಪ್ಪಿಸಿಕೊಳ್ಳಲು ಯತ್ನಿಸಿ

ದನು. ಆದರೆ ಹಾಗೆ ಮಾಡುವುದು ಸರಿಯಲ್ಲವೆಂದು ತಿರುಗಿ ಕೈನೀಡಿ, ಅವರ ಅಪ್ಪಣೆಯಂತೆ, ಅಲ್ಲೇ ಕುಳಿತನು. ಸದಾನಂದನು ಈ ನವೀನ ಶಿಷ್ಯನ ಮುಖವನ್ನೇ ನೋಡತೊಡಗಿದನು. ಸ್ವಲ್ಪ ಸಮಯ ಹಾಗೆ ಶಾಂತನಾಗಿದ್ದು, ಬಳಿಯಲ್ಲಿ ಇನ್ನಾರೂ ಇಲ್ಲದುದನ್ನು ಕಂಡು, ಅವನನ್ನು ಕರೆತಂದ ಪರಿಚಿತ ಶಿಷ್ಯನನ್ನು ಕುರಿತು 'ನೀನಿವನನ್ನು ಕರೆತಂದುದು ಒಳಿತಾಯಿತು ಆದರೆ ಇನ್ನುಮುಂದೆ ಕರೆತರುವುದಾದರೆ ಇವನಿಗೆ ಸೀರೆಯನ್ನುಡಿಸಿ ಕರೆದು ತಾ. ಎಷ್ಟೆಂದರೂ, ಸ್ತ್ರೀಯರಿಗೆ ಪುರುಷವೇಷವು ಚಂದ ಕಾಣುವುದಿಲ್ಲ'— ಎಂದನು. ಸರಿ! ಅಲ್ಲಿಂದ ಅವರಿಬ್ಬರು ಪಲಾಯನ!

ಇನ್ನು ಅವನಲ್ಲಿಗೆ ಬರುವವರಲ್ಲಿ ನೂರಕ್ಕೆ ತೊಂಭತ್ತೊಂಭತ್ತು ಮಂದಿ—'ನನಗೆ ಒಂದು ಗಂಡುಶಿಶು ಬೇಕು. ಅನುಗ್ರಹಮಾಡಿರಿ' 'ನಾನು ಬಡತನದಿಂದ ನರಳುತ್ತಿರುವೆ; ನನಗೆ ವರುಷಕ್ಕೆ ೨೦೦೦ ವರಮಾನವಾದರೂ ಸಿಗಲಿ.' 'ನಿಮ್ಮ ಅನುಗ್ರಹದಿಂದ ನನಗೆ ಅಬಕಾರಿ ಇಲಾಖೆಯಲ್ಲಿ ಒಂದು ನೌಕರಿ ಸಿಗಬೇಕು, ಆಶೀರ್ವಾದಿಸಿರಿ. ನೀವು ಅನುಗ್ರಹವಿಟ್ಟರೆ ಖಂಡಿತ ನನ್ನ ಮನೋರಥ ನೆರವೇರುವುದು' 'ನನ್ನ ದಾವೆಯಲ್ಲಿ ನನಗೇ ಗುಣವಾಗಬೇಕು' 'ಗೋವಾ ಸೋಡ್ತಿಯಲ್ಲಿ ಪ್ರಥಮ ಬಹುಮಾನ ನನಗೇ ಸಿಗುವಂತೆ ತಮ್ಮ ಪ್ರಸಾದ ಕರುಣಿಸಿರಿ'— ಎಂದು ಬೇಡುವವರು ಇನ್ನು

ರೋಗರುಜಿಗಳಿಂದ ಮುಕ್ತರಾಗಲು ಬೇಡಲು ಬರುವ ವರು ಒಬ್ಬಿಬ್ಬರಲ್ಲ ಇವರಿಗೆ ಸಾಧುವು: 'ನೀವು ಹಣ ಕೇಳುವಿರಿ. ದೇವರಿಗೆ ನಿಮ್ಮ ಹಣವು ಮಂಣಿಗೆ ಸಮಾನ' —ಎನ್ನುವನು ಸ್ವಲ್ಪ ಬೇಸರವಾದರೆ, ಇಲ್ಲವೆ ಇಂಥ ಶಿಷ್ಯರ ಸತ್ಯಾಗ್ರಹ ಬಲವಾದರೆ—'ನಿಮ್ಮ ಕರ್ಮಫಲದಂತಾಗಲಿ.' ಎನ್ನುವನು. ಒಟ್ಟಾರೆ 'ಆ ಗಲಿ' ಎಂಬ ಶಬ್ದ ಅವರ ಬಾಯಿಯಿಂದ ಬಂದಿತೆಂದರೆ ತಮ್ಮ ಕೆಲಸವಾಯಿತೆಂದೇ ಶಿಷ್ಯರ ನಂಬಿಕೆ. ಕೆಲವ ರಿಗೆ ಹಾಗಾದುದೂ ಉಂಟು. ಆದರೆ ಅದು ಸಾಧು ಗಳ ಆಶೀರ್ವಾದದಿಂದಲ್ಲ. ಆಗುವಂತಾದುದು. ಹಾಗೆಲ್ಲಾದರೂ ಇಷ್ಟೆ ಕೈಗೂಡಿದರೆ ಅವರಲ್ಲಿಗೆ ತಿರುಗಿ ಹೋಗುವಾಗ, ಮಕ್ಕಳಾದರೆ ತಮ್ಮ ಮಕ್ಕಳನ್ನೂ, ಹಣಲಾಭವಾದರೆ ಹಣ್ಣುಕಾಯಿಯನ್ನೂ ಒಯ್ಯು ವರು ಭಗ್ನಮನೋರಥರಾದವರು — 'ಕೇವಲ ಸ್ವಾರ್ಥದ ಸನ್ಯಾಸಿ'ಯೆಂದು ಅವನನ್ನು ಬಯ್ಯುವರು ಆದರೆ ತಿರುಗಿ ಎಲ್ಲಾದರೂ ಆಪತ್ತೊಂದು ಬಂದರೆ, ತಿರುಗಿ ಅವನ ಬಳಿಗೋಡಿ ಅವೇ ಭಿಕ್ಷೆಗಳನ್ನು ಕೇಳು ವರು. ಅವರ ಮನೋವೃತ್ತಿಯು 'ಪ್ರತಿಬಾರಿಯ ಸೋಡ್ತಿಯ ಟಿಕೇಟನ್ನು ಪಡೆದು ಹಣ ಕಳೆದುಕೊಂ ಡರೂ, ಮುಂದಿನ ಬಾರಿ ನಮಗೇ ಸಿಗುವುದೆಂಬ ದೃಢ ನಿಶ್ಚಯವುಳ್ಳ ಜೂಜುಗಾರರಂತಿತ್ತು.

ಹೇಗೂ ಇರಲಿ, ಸಾಧುಗಳ ಬಳಿಯಲ್ಲಿ ಸುಳಿ ದಾಡುವವರ ಜನಸಂಖ್ಯೆಗೆ ಮಿತಿಯಿಲ್ಲ. ಮನಬಂ

ದಂತೆ ವರ್ತಿಸುವವರಾದರೂ ಅವರ ದರ್ಶನಕ್ಕೆ ಬರುವುದನ್ನು ಬಿಡರು. ಅವರು ಹೇಳಿದಂತೆ ಮಾತ್ರ ಮಾಡರು.

ಅವರ ಕೆಲವು ಪ್ರಶ್ನೆಗಳು ತೀರ ವಿಚಾರಶೀಲವಾಗಿವೆ.

'ಸಂಸಾರಸುಖಗಳನ್ನು ಬಿಡದೆ, ದೇವರನ್ನು ಏಕೆ ಹೊಂದಬಾರದು?'

'ನನ್ನ ಪತ್ನಿಯು ತೀರ ಕಾಮುಕಳು ಅವಳ ಪ್ರೇಮದ ಸಲುವಾಗಿ ನಾನು ಅವಳೊಡನೆ ವಿಷಯಪ್ರವೃತ್ತನಾಗದೆ ಮಾರ್ಗವಿಲ್ಲ. ಅವಳಿಗೆ ಅಸಂತೋಷವಡಿಸದೆ ನನ್ನ ಬ್ರಹ್ಮಚರ್ಯ ರಕ್ಷಣೆಯ ಮಾರ್ಗವಿಲ್ಲವೇ?' 'ನನಗೆ ನನ್ನ ಅಂಗಡಿ ಕೆಲಸ, ಜಮೀನಿನ ವಿಚಾರಣೆ, ಮನೆವ್ಯವಹಾರ, ಇವುಗಳ ದೆಸೆಯಿಂದ ಸ್ವಲ್ಪವೂ ಅವಕಾಶವಿರುವುದಿಲ್ಲ. ಇಷ್ಟು ಉಂಡು ಮಲಗಿದರೆ ಸಾಕೆಂದು ತೋರುವುದು. ಹೀಗಾಗಿ ನೀವೆನ್ನುವ ದೇವರ ಸ್ಮರಣೆಗೆ ನಾಲ್ಕೇ ನಾಲ್ಕು ನಿಮಿಷಗಳ ವಿರಾಮವಿಲ್ಲ; ಇಂಥ ನನಗೆ ಮುಕ್ತಿಸಿಗುವ ಮಾರ್ಗ ಇಲ್ಲವೇ? ಅದಕ್ಕೆ ಬೇಕಾದರೆ ಎಷ್ಟೋ ಹಣ ವ್ಯಯಿಸಿ, ಎಂಥ ಸಮಾರಾಧನೆಗಳನ್ನೂ ಮಾಡಿಸುವೆ.'

'ನನ್ನಿಂದ ಶರೀರದ ಕಷ್ಟ ಇಷ್ಟಿಷ್ಟೂ ಸಾಧ್ಯವಾಗುವಂತಿಲ್ಲ. ಊಟಉಡುಗೆಗಳಲ್ಲಿ ನನ್ನ ವ್ಯೈದಣಿದರೆ ನಾನು ಸತ್ತೆನೆಂದೇ ತಿಳಿಯಿರಿ. ಇಂಥ ನನಗೆ, ಯಾವ ರೀತಿಯ, ಶ್ರಮವಿಲ್ಲದ ದೇವತಾರ್ಚನೆಯ ಮಾರ್ಗವನ್ನು

ಹೇಳುವಿರಿ. ಆದರೆ ಪೂಜೆಮಾಡುತ್ತ ಅನಿಮಿಷ ಗಳ ತನಕ ಸುಮ್ಮನಿರುವುದೆಂದರೆ ನನ್ನ ಪ್ರಕೃತಿಗೇ ವಿರುದ್ಧ.'

ಈ ರೀತಿಯ ಹಲವು ಬಗೆಯ ಆರ್ತಿಗಳು ಅವ ರಲ್ಲಿಗೆ ಬರುವರು. ಇವರಿಗೆಂಥ ಸಮಾಧಾನವನ್ನು ಹೇಳಬೇಕು? ನೀವೇ ಊಹಿಸಿರಿ. ಇನ್ನು ಅವರಲ್ಲಿ ಅತಿ ಭಕ್ತಿಯಿಂದ ಬರುವವರಾದರೂ ಅವರನ್ನು ಭಕ್ತಿ ಯಿಂದ ಕೇಳಿ ಹಾಗೇ ಹೊರಟುಹೋಗುವರು ದಿನ ನಿತ್ಯಬರುವರು; ದಿನನಿತ್ಯ ಹೊರಟುಹೋಗುವರು; ಹೇಳಿ ದಂತ ಏನೊಂದು ಜಪಸಾಧನೆಗಳನ್ನು ಮಾಡುವುದಿಲ್ಲ ಹದಿನೈದು ದಿವಸಗಳು ಕಳೆಯುವುದರೊಳಗಾಗಿ, 'ಅವರ ಉಪದೇಶದಿಂದ ಇನ್ನೂ ದೈವತ್ವದ ಗುರುತು ಕಾಣ ಸಿಗದು.' ಎಂದು ಹತಾಶರಾಗಿ ಸಾಧನೆಯನ್ನು ಬಿಟ್ಟು ಬಿಡುವರು.

ಒಟ್ಟಾರೆ ಸಾಧುಮಹಾಶಯನಿಗೆ ಬೇಕಾದುದು ಜನ ಸ್ತೋಮ. ಈಗ—ವಿದ್ಯಾವಂತರು, ಅವಿದ್ಯಾವಂತರು, ನೈವೇದ್ಯಾವಂತರು, ಸ್ತ್ರೀಯರು, ಪುರುಷರು, ಬಾಲರು, ಬಾಲಕಿಯರು ಅವನು ಹೋದಲ್ಲಿಗೆ ಬರುವರು. ಇಷ್ಟಾ ದರೆ ಅವನ ಕೆಲಸವಾಯಿತು. ಇನ್ನು ತನ್ನ ಗೆಳೆಯ ರನ್ನು ಕರೆಯಿಸಲು ತೊಂದರೆಯಿಲ್ಲ. ಅವರಿಗೂ ಈ ನಾಗರಿಕರಿಗೂ ಪರಿಚಯಮಾಡಿಕೊಟ್ಟನೆಂದರೆ ಅವನ ಕೆಲಸ ಮುಗಿಯಿತು. ಅದಕ್ಕೆ ನಗರವೇ ತಕ್ಕ ಸ್ಥಳ ವೆಂದು, ಅವನ ಸವಾರಿಯು ಮೈಸೂರನ್ನು ಠಾಣೆಯಾಗಿ

ಹಿಡಿದುಕೊಂಡು, ಅಲ್ಲಿ ಸಮನಾಗಿ ಆರು ತಿಂಗಳ ಕಾಲ ನಿವಾಸ ಬೆಳೆಯಿಸಿತು. ಅಷ್ಟು ದೀರ್ಘಕಾಲ ಅವನು ಯಾವ ಊರಿನಲ್ಲೂ ನೆಲೆಸಿದವನಲ್ಲ. ಹೆಚ್ಚೆಂದರೆ ಒಂದು ತಿಂಗಳು. ಆದರ ಆರು ತಿಂಗಳು ಒಂದೇ ಸವಸ ವೈಸೂರಲ್ಲಿ ನೆಲೆಸಲು, ಜನರ ಬರುವಿಕೆಯು ಕಡಿಮೆ ಯಾಗುತ್ತಾ ಬಂದಿತು. ಬಂದಾಗ, ದಿನಕ್ಕೆ ಬರುತ್ತಿದ್ದ ವರ ಸಂಖ್ಯೆಯು ೪೦೦-೫೦೦ಕ್ಕೆ ಕಡಿಮೆಯಿರುತ್ತಿದ್ದಿರ ಲಿಲ್ಲ. ಚಾಮುಂಡಿ ಬೆಟ್ಟದ ಬುಡದಲ್ಲಿನ ಒಂದು ಮಂಟ ಪದಲ್ಲಿ ಅವನ ಠಾಣೆಯಿತ್ತು. ಆ ದಾರಿಯಾಗಿ ಬೆಟ್ಟದ ಮೇಲಿಂದ ಚಾಮುಂಡಿ ಗುಡಿಗೆ ಹೋಗುವವರ ಸಂಖ್ಯೆ ಗಿಂತ ಈ ಶಿಷ್ಯಕೋಟಿಯ ಸಂಖ್ಯೆ ಅಧಿಕವಾಗಿತ್ತು. ಆದರೆ ಮೂರನೇ ತಿಂಗಳು ಕಳೆಯಲು ದಿನಕ್ಕೆ ನೂರು ಮಂದಿ ಸಹ ಬರುವುದು ನಿಂತಿತು. ಆರು ತಿಂಗಳ ಅವಧಿಗೆ ಸಂಖ್ಯೆಯು ೩೦, ೪೦ಕ್ಕೆ ಬಂದಿತು. ಅವರಲ್ಲಿ ಹಲವರು ಚಾಮುಂಡಿ ಬೆಟ್ಟದ ಬುಡಕ್ಕೆ ನಿತ್ಯ 'ವಾಕಿಂ ಗಿಗ' ಬರುವವರು. ಈಗಲಾದರೂ ಬರುವರು. ಸಾಧುವಿನ ಮೋರೆ ನೋಡಿಕೊಂಡು, ಅಲ್ಲೇ ಬಳಿಯಲ್ಲಿ ಬೆಳೆದಿದ್ದ ಮಾವಿನ ತೋಪಿನಲ್ಲಿ 'ಇಸ್ಪೀಟು' ಪಾರಾ ಯಣ ಮಾಡಿಕೊಂಡು ಸಂಜೆಯಾಗಲು ಮನೆಗೆ ಹೋಗುವರು. ಸಂಜೆ ಮರಳುವಾಗ— ನೆನಪಾ ದರೆ— ಅವನನ್ನು ಕಾಣುವುದು, ಇಲ್ಲವಾದರೆ ಸೀದಾ ನಗರಕ್ಕೆ. ಅದೆಲ್ಲ ಸಿನೆಮಾ ಪ್ರಾರಂಭದ ಮೇಲೆ ಹೊಂದಿತ್ತು.

ಇದರಿಂದ ಸಾಧುಮಹಾಶಯನು ವಿಚಾರಮಾಡುವ ಪ್ರಸಂಗಬಂದಿತು 'ಮುಂದಿ ಬರುವುದು ನಿಂತ ಬಳಿಕ, ತಮ್ಮವರು ಬಂದು ಉಪಯೋಗವೇನು?'— ಎಂದು ಹೀಗೆ ಮುಂದಿ ಬರುವುದು ನಿಂತಿತೆಂದು ಅಲ್ಲಿಂದ ರಾಣೆ ಕಿತ್ತು ಇನ್ನೊಂದು ಸ್ಥಳಕ್ಕೆ ಹೋದರ ಸಾಕಷ್ಟು ಪರಿಚಯುವಾಗವೆ ನಂತರ ವಿಚಾರಣಾ ಸಮಿತಿಯ ಮುಂದೆ ಸಾಕ್ಷಗಳು ಬೇಕಷ್ಟು ಸಿಗಲಾರವು. ಅದಕ್ಕಾಗಿ ಅಲ್ಲಿಯೇ ನಿಲ್ಲುವ ನಿಶ್ಚಯುಮಾಡಿದನು. ತಿರುಗಿ ಜನರನ್ನು ಕೂಡಿಸಲು—ಅಂದಿಗೆ ಒಂದು ತಿಂಗಳಲ್ಲಿ ರಾಮುನವಮಿ ಬರುವುದಿತ್ತು. ಆ ಸಮಯ ಪೂಜೆ ವತ್ತು ಭಗವದ್‌ಭಕ್ತರಿಗೆ ಹದಿನೈದು ದಿನಗಳ ತನಕ ಸಂತರ್ಪಣೆಯು ನಡೆಯುವುದೆಂದೂ. ಆ ಸಮಯ ಹಿಮಾಲಯದಿಂದ ಬಹಳ ಮುಂದಿ ತಮ್ಮ ಶಿಷ್ಯರೂ, ಹಲವು ಸಾಧುಸಂತರೂ ಬರುವರೆಂದೂ, ಸುದ್ದಿ ಹೊರಡಿಸಿದನು ಇದಕ್ಕೆ ಬೇಕಾಗುವ ಹಣಕ್ಕೆ ಸಾಧುಗಳಾದವರಿಗೆ ಕೊರತೆಯಿಲ್ಲ. ಸಾಧುಗಳಿಗೆ ದಾನಮಾಡಿ ಕೀರ್ತಿಕಟ್ಟಿಕೊಳ್ಳಬೇಕೆಂದು ಬಡಿದಾಡುವವರು ಬಹಳ ಮುಂದಿ ಇರುವರು. ತಮ್ಮ ನೆರಮನೆಯಲ್ಲಿ, ಒಂದು ಬಡಮನೆತನವು ಉಪವಾಸದಿಂದ ಸಾಯುತ್ತಿದೆ ಎಂದಾಗ ಒಂದೇ ಒಂದು ಕಾಸನ್ನು ದಾನಮಾಡಲಾರರಾದರೂ, 'ನಿಮ್ಮ ಕೀರ್ತಿ ಹಬ್ಬುವುದು. ನಿಮ್ಮ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗುವುದು. ನಿಮ್ಮ ಸ್ವರೂಪ ಛಾಪೆಯಾಗುವುದು'—ಎಂದರೆ ಸಾವಿರಾರು ರೂಪಾಯಿ

ಗಳನ್ನು ವ್ಯಯಿಸುವುದುಂಟು. ಅವರು ವ್ಯಯಿಸುವ ದೇತಕ್ಕೆಂದು ಅವರಿಗೇ ತಿಳಿಯದು. ಯಾರೋ ಮಹಾ ನುಭಾವರು ಕೇಳಿದರು; ಅವರು ಕೊಟ್ಟರು. ಅದ ರಿಂದ 'ಕೀರ್ತಿ ಬರುವುದು' ಖಂಡಿತ. ಒಂದು ದಿನ ಒಬ್ಬ ಸಾಹುಕಾರರ ಮೋಟಾರು ಟಾಯರು ಚಾ ಮುಂಡಿ ರಸ್ತೆಯಲ್ಲಿ ಹಾಳಾಗಲು ಅವರ ಡ್ರೈವರನು ಅದನ್ನು ಸರಿಪಡಿಸುವ ತನಕ ಸಾಧುವಿನ ದರುಶನ ಮಾಡಿಕೊಂಡು ಬರುವಾ ಎಂದು ಅಲ್ಲಿಗೆ ಹೋ ದರು ಮಾತಮಾತನಾಡುತ್ತ ಸಮಾರಾಧನೆಯ ಸೂಚನೆಯನ್ನು ಸಾಧುವು ಹೊರಗೆಡವಿದನು. ಕೂಡಲೆ ನಮ್ಮ ಧರ್ಮಪ್ರಕಾಶ ಚನ್ನಪ್ಪನವರು — 'ಅದಕ್ಕೇನು, ನಾನೊಬ್ಬನೇ ಅಷ್ಟುಮಾಡಿಸುವ' — ಅಂದರು.

ಸಾಧು :— ಆದರೆ ತುಂಬಾ ಹಣಬೇಕಾಗಬ ಹುದು. ೧೫ ದಿನಗಳ ತನಕ ಧಾರ್ಮಿಕವಿಚಾರಗಳ ಕಾಲಕ್ಷೇಪ ನಡೆಯಬೇಕು. ದಿನಕ್ಕೆರಡು ಬಾರಿ ೫,೦೦೦ ಮಂದಿಗಾದರೂ ಸಂತರ್ಪಣೆ ನಡೆಯುವುದವಶ್ಯ. ಅಲ್ಲದೆ ಜಾತಿವಾರು ವ್ಯವಸ್ಥೆ ಮಾಡಬೇಕು. ಆದರೂ, ಬಹಳ ಕೀರ್ತಿಕಾರಕ ವಿಷಯ.

ಧ. ಚನ್ನಪ್ಪ: — ಅಷ್ಟಕ್ಕೇನು ಯೋಚನೆ ಸ್ವಾಮಿ. ನಾಳೆ ಬೆಳಿಗ್ಗೆ ೧೫ ದಿನಕ್ಕೆ ೧೫೦೦೦ರ ಚೆಕ್ ಬರಾ ಯಿಸಿ ಕಳುಹಿಸುವೆ. ಮುಖ್ಯವಾಗಿ ಸಾಧುಸಜ್ಜನರ ಸೇವೆಗಾಗಿ ನಮ್ಮ ಸರ್ವಸ್ವವಿರುವುದು.

ಸರಿ, ಎಲ್ಲ ನಿಶ್ಚಯವಾಯಿತು. ರಾಮನವಮಿ ಯಿಂದ ಹಿಡಿದು ೧೫ ದಿನಗಳ ತನಕ ಎಲ್ಲ ಜಾತಿಯವರಿಗೆ ಸಂತರ್ಪಣೆ ಬರಗಾಲದ ಮುಂದಿಯನ್ನು ಭೋಜನಕ್ಕೆ ಕರೆದಂತೆ! ಅಂತು ಅಂದಿಗೆ–ಗೆದ್ದನು, ನಮ್ಮ ಶಿವರಾಯ!

## ಪ್ರಕರಣ ೯.

## ಬಂದ ಮುಹೂರ್ತ.

ರಾಮನವಮಿ ಬಂತೇ ಬಂತು. ಚಾಮುಂಡಿ ಬೆಟ್ಟದ ಬುಡದಲ್ಲಿ ಜನಸಂಮರ್ದವೋ ಸಂದಣಿ. ಮೂರು ನಾಲ್ಕು ಸಾವಿರ ಜನರು ೧೫ ದಿನಗಳ ವರೆಗೆ ಆ ಪ್ರದೇಶವನ್ನು ಬಿಡುವ ಯೋಚನೆಯಲ್ಲೇ ಇಲ್ಲ. ಇನ್ನು ಕೇವಲ ಭೋಜನಕಾರ್ಯಕ್ರಮವನ್ನು ಪೂರೈಸುವುದರಮಟ್ಟಿಗೆ ಅದರ ಇಮ್ಮಡಿಗಿಂತ ಅಧಿಕವಾಗಿ ಜನರು ನಗರ ಮತ್ತು ಸುತ್ತಲಿನ ಹಳ್ಳಿಗಳಿಂದ ಬರುತ್ತಿದ್ದರು. ಪಾಪ, ಅವರಿಗೆ ಗೃಹತಾಪತ್ರಯಗಳಿಲ್ಲದಿದ್ದರೆ ಅವರೂ ಅಲ್ಲಿ ಕಾಯಂ ಠಾಣೆಹೊಡೆಯುತ್ತಿದ್ದರು. ಊಟದ ಮುಂದಿಯೋ ಇಷ್ಟಾದರೆ, ಬಂದು ಹೋಗುವ ಪ್ರೇಕ್ಷಕ ವರ್ಗಕ್ಕೆ ಮಿತಿಯೆಲ್ಲಿ! ಬೆಳಗಿನಿಂದ ಸಂಜೆಯ ವರೆಗೆ, ಸಂಜೆಯಿಂದ ಬೆಳಗಿನ ವರೆಗೆ—ಮೋಟಾರು, ಗಾಡಿ, ಕಾಲುಗಳಿಂದು—ಜನರು ಬರುತ್ತಲೇ ಇರುವರು, ಹೋಗುತ್ತಲೇ ಇರುವರು ಮೊದಲಿನ ವರ್ಗದವರಿಗೆ ಊಟವೊಂದು ಗಟ್ಟಿಯಾದ ಉದ್ದೇಶವಿದೆ; ಉಳಿ

ದವರಿಗೇನು ಕೆಲಸವೆಂದು ನೀವು ಕೇಳಬಹುದು. ಉಳಿ ದವರಲ್ಲಿ ಹೆಚ್ಚಿನವರು ತಮಾಷೆ ನೋಡಲು ಬಂದವರು; ಇನ್ನುಳಿದವರು ಬೇರೆಯವರು ಬಂದುವೇಕೆಂದು ತಿಳಿ ಯಲು ಬಂದವರು. ಇಂಥ ಜನಸ್ತೋಮದ ಸತ್ಕಾ ರಕ್ಕೆ ಧರ್ಮಪ್ರಕಾಶಕರು ಹಣ ಕಡಿಮೆಬಿದ್ದರೂ ಪೂರೈ ಸಲು ಹಿಂಜರಿಯುತ್ತಿದ್ದಿಲ್ಲ. ಬಂದವರಲ್ಲಿ ಸಾಧುವನ್ನು ಕಂಡು ಕೈತೋರಿಸುವುದಕ್ಕಿಂತ ಹೆಚ್ಚಾಗಿ ಇವರ ಜರ ತಾರಿ ಧೋತರ ಮುಂಡಾಸುಗಳನ್ನು ತೋರಿಸುವವರೇ ಅಧಿಕ. ಹದಿನೈದು ದಿನಗಳ ಅವಧಿಯ ತನಕ ಧರ್ಮ ಪ್ರಕಾಶ ಚನ್ನಪ್ಪನವರು ಪ್ರತ್ಯಕ್ಷ ಧರ್ಮರಾಯರೆನಿಸಿ ಕೊಂಡರು. ಇನ್ನು ಸಾಧುಗಳು ಕುಳಿತ ಉನ್ನತ ದಿನ್ನೆಯ ಮುಂದೆ, ಬಂದವರು ಸಾಷ್ಟಾಂಗವೆರಗಿ ಹೊತ್ತು ಕೊಂಡುಹೋದ ಮಣ್ಣಿನ ದೆಸೆಯಿಂದ, ಅಲ್ಲೊಬ್ಬರು ಮುಣುಗುವಷ್ಟು ಆಳದ ಕುಣಿಯೇ ಉಂಟಾಗಿತ್ತು. ಈ ಸಮಯದಲ್ಲಿ ಅವರ ಮುಂದೆ ಬಂದುಬಿಪ್ಪ ಹಣ್ಣು ಕಾಯಿ, ಹೂವು, ಕಾಣಿಕೆಗಳ ರಾಶಿಯೇ ರಾಶಿ! ಆದರೆ ಹೀಗೆ ಅದೆಷ್ಟು ಉನ್ನತವಾದ ರಾಶಿಬಿದ್ದರೂ, ಅದು ಮರುಕ್ಷಣದಲ್ಲಿಯೇ ಅಲ್ಲಿನ ಸ್ವಯಂಸೇವಕರ ಕರದಲ್ಲಿ ಸಿಲುಕಿ ಮಾಯವಾಗುತಿತ್ತು.

ಸ್ವಯಂಸೇವಕರೆನ್ನುವಾಗ ನನಪಿಗೆ ಬಂತು— ತಮ್ಮ ಸೇವೆ ತಾವೇ ಮಾಡಿಕೊಂಬವರೆಲ್ಲಾ ಸ್ವಯಂ ಸೇವಕರೆಂಬುದು ಯಥಾರ್ಥವಾದ ಟೀಕೆ. ಈ ಸತ್ಕಾ ರ್ಯದಲ್ಲಿ ಶಿಸ್ತನ್ನಿರಿಸುವ ಸಲುವಾಗಿ ಖಾಕಿ ವೇಷ ಧರಿ

ಸಿದ ಮುಂಡಾಸಿನ ಮಂದಿಯು ದಳವೇ ಐನೂರಕ್ಕ ಮಿಕ್ಕಿತ್ತು. ಸನ್ಯಾಸಿಗಳ ಠಾಣೆಯ ಮಗ್ಗುಲಲ್ಲೇ ಇವರ ಶಿಬಿರ. ಡೇರಾ, ಚಪ್ಪರ, ಗುಲ್ಲು, ಗದ್ದಲಗಳೇ ಗದ್ದಲ ಗಳು! ಇವರೆಲ್ಲ ಸಮರೂಪ (Uniform) ಧರಿಸಿದ ಸಿಪಾಯಿಯರೆಂದು ಲೆಕ್ಕ. ಆದರೆ ಸಮರೂಪಕ್ಕಿಂತ ಅವರವರ ಮೆಚ್ಚಿಕೆಯಂತೆ, ಅಚ್ಚುಮೆಚ್ಚಿನ ಬಣ್ಣಬಿರು ಸುಗಳನ್ನು ಹಾಕಿಕೊಂಡವರೇ ಅವರಲ್ಲಿ ಅಧಿಕ. ನಿತ್ಯ, ಧರ್ಮಪ್ರಕಾಶರು ಮೋಟಾರಿನಲ್ಲಿ ಬರಲು, ಇವರಲ್ಲಿ ಅರವತ್ತೆಪ್ಪತ್ತು ಮಂದಿ ಸೇರಿ ಪೊಣ್ಣೆ ಕವಾಯತುಮಾಡಿ 'ಗಾರ್ಡ್ ಆಫ್ ಆನರ್' ಕೊಡುವರು. ಅಂದರೆ ಉ ಳಿದವರಿಗೆ ಬೇರೆ ತಾಪತ್ರಯ ಬಹಳ ಊಟ, ಉಪ ಹಾರಗಳ ಕಾಲದಲ್ಲಿ ಅವರ ಹಾಜರಿ ಎಂದೂ ತಪ್ಪುವು ದಿಲ್ಲ ಶಾಲಾ ಕಾಲೇಜಿನ ಹುಡುಗರನ್ನು ಉತ್ತಮ ಪ್ರಜೆ ಗಳನ್ನಾಗಿಮಾಡಲು ಇವರನ್ನು ಈ ರೀತಿ ಶಿಸ್ತಿನಲ್ಲಿ ಈಜಾಡಿಸುವರಂತೆ. ಅಂತು ಚಾಮುಂಡಿ ಕ್ಷೇತ್ರದಲ್ಲಿ ಇರುವ ಮಂದಿ, ಬರುವ ಮಂದಿ, ಈ ಶಿಸ್ತಿನ ಸಿಪಾಯಿ ಗಳೆಂದು ಆರೇಳು ಸಾವಿರದ ಮೇಲಿನ ಲೆಕ್ಕ.

ಸಾಧು ಸದಾನಂದರಿಗೆ ಈ ಅವಾಂತರ ಏಕ ಕಟ್ಟಿ ಕೊಂಡೆ ಎಂಬಷ್ಟಾಯಿತು. ಊಟಕ್ಕಿದ್ದ ಕಾಲಂಶ ಮಂದಿ ಭಜನೆಗಿಲ್ಲ. ಭಜನೆಗಿದ್ದವರಲ್ಲಿ ನೂರಕ್ಕೊಬ್ಬ ನಲ್ಲಿ ಭಕ್ತಿಯಿಲ್ಲ. ಇಂಥ ಶಿಷ್ಯಸಾಗರದ ನಡುವೆ ಅವರು ತಮ್ಮ ದೇವಬಂಧುಗಳನ್ನು ಸ್ವಾಗತಮಾಡಿ ಕೊಳ್ಳಬೇಕಾಗಿದೆ.

ಪ್ರಥಮ ದಿನ ಮಧ್ಯರಾತ್ರಿಗೆ ಶಿವಾಲಯದಿಂದ ಸಾಧು ಸದಾನಂದನ ಶಿಷ್ಯವರ್ಗದವರೂ ಗೆಳೆಯರೂ ಬರುವರೆಂದು ವದಂತಿಯಾಯಿತು ಸರಿ, ಮತ್ತೇನು— ದೇವಾಲಯದಿಂದ ಸಯ್ಯಾಜಿ ರಸ್ತೆಮೇಲೆ ರೈಲ್ವೆ ಸ್ಟೇಷನ ತನಕ ಜನರ ಗದ್ದಲವೇ ಗದ್ದಲ. ಬರುವವರು ಯಾವುದರ ಮೇಲೆ ಬರುವರೆಂಬುದನ್ನು ಸಾಧುವು ಬಾಯಿಬಿಟ್ಟು ತಿಳಿಸದ ಕಾರಣ, ಜನರು, ಅವರು ಸ್ಪೆಶಲ್ ಟ್ರೈನಿನಲ್ಲಿ ಬರುವರು ಎಂದು, ತಿಳಿದಿದ್ದರು. ಇತ್ತ ಸೇರಿದ ಜನರಲ್ಲಿ ಎಲ್ಲಾ ಜಾತಿ ಮತದವರೂ ನೆರೆದಿದ್ದರು ನಗರದ ಪೋಲಿಸು ಪಡೆಯು ದಾರಿ ಯುದ್ದಕ್ಕೂ ನಿಂತಿತ್ತು. ಮಧ್ಯೆ, ಮಧ್ಯೆ ಬಡಲುಡಿಗೆ ಧರಿಸಿದವರನ್ನು ಬೆದರಿಸುವ ಸವಾರಿ ಶಿಪಾಯಿಗಳು ಬೇರೆ.

ಈ ಗದ್ದಲದಲ್ಲಿ ನಡುವೆ ಒಂದು ಪಿಕಲಾಟ ಹೊರ ಟಿತು ಯಾರೋ ಅಂದರು—'ಹಿಂದುಗಳು ಈ ರೀತಿ ಸಾಲಾಗಿ ನಿಂತುದನ್ನು ಕಂಡರೆ, ಅದು ಮುಸಲ್ಮಾನ ಜನರಿಗೆ ಅಸಮಾಧಾನವಾಗಿ ಇದರಿಂದ ಅನರ್ಥವಾಗ ಬಹುದು'—ಎಂದು. ಸರಿ, ಈ ಪಿಸುಮಾತು ಹೊರ ಟುದೇ ತಡ, ಅರ್ಧ ತಾಸಿನಲ್ಲಿ, ಹಿಂದುಮುಸಲ್ಮಾನರ ಕಲಹಕ್ಕಾಗಿ ಜನರಿಷ್ಟು ಸೇರಿರುವರೆಂದು ವಾರ್ತೆಯಾ ಯಿತು. ಪೋಲಿಸರು ಅದೇ ನಿಶ್ಚಯವೆಂದರು ಈ ಸಂದಣಿಯನ್ನು ಚದರಿಸದಿದ್ದರೆ ಜನರ ನೆಮ್ಮದಿಗೆ ಅಪಾ ಯವೆಂದು, ನಗರದ ಇನ್ಸ್ಪೆಕ್ಟರ ಜನರಲರು, ಅವರೂ

ಹಿಂದೂಗಳೇ, ಕೂಡಲೇ ನೋಟಿಸು ಹೊರಡಿಸಿ, ಸ್ಪೆಶಲ್ ಮೋಟಾರಿನ ಮೇಲೆ ಚಾಮುಂಡಿ ಬೆಟ್ಟಕ್ಕೆ ಓಡಿಹೋಗಿ, ಸಾಧು ಸದಾನಂದನ ಮೇಲೆ ಅದನ್ನು ಜಾರಿಮಾಡಿದರು. "ಅಪ್ಪಣೆಯಿಲ್ಲದೆ ಹೀಗೆ ಮೆರವಣಿಗೆ ಕೂಡಿಸಿದ್ದು ಅಪರಾಧವಾಯಿತು ಇದರಿಂದ ಹಿಂದುಮುಸಲ್ಮಾನ ಕಲಹಕ್ಕೆ ಎಡೆಯಾಗುವುದು; ಇದನ್ನು ನಿಲ್ಲಿಸಿರಿ"—ಎಂದು ನೋಟಿಸು! ಸಾಧುವು ತಬ್ಬಿಬ್ಬಾದನು. ವಿಚಾರಮಾಡಿ ಅಂದನು—"ನಾನು ಯಾರೊಡನೆಯೂ ಮೆರವಣಿಗೆ ಮಾಡಿರಿ ಅನ್ನಲಿಲ್ಲ. ಅದರ ವ್ಯವಸ್ಥೆಯನ್ನು ನಮ್ಮವರಾಗಲಿ ನಾನಾಗಲಿ ಮಾಡಿಸಲಿಲ್ಲ"—ಎಂದರು ಇನ್ಸ್ಪೆಕ್ಟರನು ತಣ್ಣಗಾದ. ಹಾಗಾದರೆ ಅವನಿನ್ನಾರಮೇಲೆ ನೋಟಿಸು ಜಾರಿ ಮಾಡಬೇಕು? ಭಾರಿ ದಂಗೆ ನಿಲ್ಲಿಸಿದನೆಂಬ ಕೀರ್ತಿ ಅವನಿಗೆ ಸಿಗುವುದು, ತಪ್ಪಿದರೆ ಮುಂದೇನು ಗತಿ! ಅವನು ಕೂಡಲೆ ರೌದ್ರಾವೇಷದಿಂದ—"ನಿಮ್ಮ ಶಿಷ್ಯರು ಯಾರೋ ಈ ರಾತ್ರಿ ಬರುವರಂತೆ. ಅವರ ದೆಸೆಯಿಂದ ಈ ಜನಸಂದಣಿ ಸೇರಿದೆಯೆಂದು ಕೇಳಿದೆವು ಆದುದರಿಂದ ಈ ಅನರ್ಥದ ಜವಾಬುದಾರಿ ನಿಮ್ಮದು."

ಸಾಧು:—ನಮ್ಮ ಶಿಷ್ಯರೂ ಗೆಳೆಯರೂ ಬರುವರೆಂದಾದ ಸುದ್ದಿ ನಿಜ. ಅವರು ಬಂದೂ ಆಗಿದೆ. ಮೇಲೆ ಈ ಜನರು ಹೀಗೇಕೆ ದಾರಿಯುದ್ದಕ್ಕೆ ನಿಂತಿರುವರೆಂದು ಅವರನ್ನೇ ಕೇಳಬೇಕಲ್ಲದೆ ನನ್ನನ್ನಲ್ಲ.

ಅಷ್ಟರಲ್ಲಿಯೇ ಎರಡನೇ ಮೋಟಾರ ಬಂಡಿಯೊಂದು ಬಂತು. ಡಿ. ಸಿ., ಪೋ. ಕಮಿಶನರು ಇಬ್ಬರು ಖುದ್ದಾಗಿ ಬಂದಿದ್ದರು. ಅವರು ಬಂದವರೇ—"ಯಾರೋ ನಿಮ್ಮಲ್ಲಿಗೆ ಬರುವರಂತೆ. ಅವರು ಈ ಪ್ರಾಂತದಲ್ಲಿರುವ ತನಕ ಯೋಗ್ಯನಡತೆಯಿಂದಿರುವರೆಂದು ಮುಚ್ಚಳಿಕೆ ಕೊಡ ಬೇಕು"—ಎಂದು ಪೋ. ಕಮಿಶನರ ಅಪ್ಪಣೆಯಾ ಯಿತು.

ಸಾಧು:—ಅವರು ಜೈಲಿನಿಂದ ಬಿಡುಗಡೆಯಾಗಿ ಬಂದವರಲ್ಲ. ಅವರು ಹಿಮಾಲಯದಿಂದ ಬಂದಿರುವ ಸಾಧುಗಳು.

ಪೋ. ಕಮಿ.:—ನಮಗೆಲ್ಲಾ ತಿಳಿದಿದೆ: ಬದ ಮಾಷ್ ಜನರ ವಿಚಾರ. ಇಲ್ಲಿ ರಾಜಕೀಯ ಚಳವಳ ಎಬ್ಬಿಸಿ ಸರಕಾರವನ್ನು ತಲೆಕೆಳಗೆ ಮಾಡಲು ಬಂದಿರು ವರು. ಅದು ಸಾಕು. ಅವರೆಲ್ಲಿರುವರು? ಅವರನ್ನು ನಮಗೆ ತೋರಿಸಿರಿ. ಅವರಿಗೆ ಸರಕಾರವು ವಾಗ್ಬಂಧನದ ಆಜ್ಞೆಯಿತ್ತಿರುವುದು!

ಸಾಧು:—ಅವರು ಯಾರು, ಏಕೆ ಬಂದಿರುವರು- ಎಂಬುದನ್ನು ತಿಳಿಯುವ ಮೊದಲೇ ವಾಗ್ಬಂಧನದ ಆಜ್ಞೆಯೆಂದರೆ ಅರ್ಥವೇನು? ಅವರು ಕೇವಲ ಧರ್ಮ ಪ್ರಚಾರಕರು. ನಿಮ್ಮ ಕುತುಬ್ ಬಸವಪ್ಪನವರಂಥವರು ಧರ್ಮಪ್ರಚಾರಕ್ಕೆ ನಿಲ್ಲಲು ಅಡ್ಡಿಯಿಲ್ಲವಂತೆ, ಬಡ ಸಾಧು ಸಂತರು ತಮ್ಮ ಮಾತುಕಥೆ ನಡೆಯಿಸಲು ಬಂದರೆ ಮಾತ್ರ ವಾಗ್ಬಂಧನವೇ?

ಡಿ. ಸಿ.:—ಇಲ್ಲದ್ದನ್ನು ಮಾತನಾಡಬೇಡಿ. ನಿಮ್ಮ ಅತಿಥಿಗಳೆಲ್ಲಿರುವರೆಂದು ಹೇಳಿರಿ. ಅವರ ಮೇಲೆ ವಾಗ್ಬಂಧನದ ನೋಟಸನ್ನು ನಾವು ಕೊಡಲಿರುವೆವು.

ಸಾಧು:—ಏನೆಂದು?

ಡಿ. ಸಿ.:—ಅವರು ಸಾರ್ವಜನಿಕ ಭಾಷಣಕೊಡ ಬಾರದೆಂದು.

ಸಾಧು:—ಅಂದರೆ ಅವರು ಸಾರ್ವಜನಿಕರೊಡನೆ ಮೌನತಾಳಬೇಕೆಂದೇ? 'ಸಾರ್ವಜನಿಕ'ರೆಂದರೆ ಯಾರು? 'ಭಾಷಣ'ವೆಂದರೇನು? ಅವರು ಊಟಉಡುಗೆಗಾಗಿ ಮಾತನಾಡುವ ಪ್ರಸಂಗವೂ ಸಹ ನಿಮ್ಮ ಹೊಸ ಕಾಯಿದೆಗೆ ನೇರುವುದಿಲ್ಲವೇ?

ಪೋ. ಕಮಿ.:—ನಿಮ್ಮ ಅಧಿಕಪ್ರಸಂಗ ಸಾಕು ಅವರೆಲ್ಲಿರುವರು?

ಸಾಧು:—ಅವರೀಗಲೇ ನಿಮಗೆ ಸಿಗಲಾರರು. ಅವರು ಬೇಕೆಂದಿದ್ದರೆ ತಾಸರ್ಧತಾಸು ನೀವು ಕುಳಿತಿರಬೇಕಾದೀತು

ಇಷ್ಟರಲ್ಲಿಯೇ ಒಬ್ಬ ಪೋಲಿಸು ಜವಾನನು ಪ್ರಾಣ ಹೋಗುವಷ್ಟು ವೇಗದಲ್ಲಿ ಒಂದು ಸ್ಕಾಕಲನ್ನೇರಿ ಇವರಿರುವಲ್ಲಿಗೆ ಬಂದು—"ಸ್ವಾಮಿಾ, ಭಯಂಕರ ದಂಗೆ ನಡೆದಿದೆ"—ಎಂದನು. ಉಳಿದ ವಿಚಾರವನ್ನೆಲ್ಲಾ, ಸಾಧು ವಿನೆದುರಿಗೆ ನುಡಿಯಬಾರದೆಂದು ಕಿವಿಯಲ್ಲೇ ಪಿಸಿ ಪಿಸಿ ಊದಿದನು. ಇಬ್ಬರೂ ಗಾಬರಿಯಾದರು. "ಅರೇ ಅಲ್ಲಾ—ತಿರುಗಿ ಬೆಂಗಳೂರು ಗಲಭೆಯೇ"—ಎಂದು

ಕೊಂಡು, ತಾವು ತಂದ ನೋಟಿಸನ್ನು ಸಾಧು ಸದಾನಂದನ ಮೇಲೆ ಜಾರಿಮಾಡಿ, 'ಕಾರ'ನ್ನೇರಿ ಹೋದರು.

ಅವರಲ್ಲಿಗೆ ಹೋಗುವುದರೊಳಗಾಗಿ ನಡೆದ ಭಯಂಕರ ಗಲಭೆಯನ್ನೇನು ಕೇಳುವಿರಿ! ಹಿಂದುಮುಸಲ್ಮಾನರ ಕಲಹವಾಗುವುದೆಂದು ಸುದ್ದಿ ಬೀಳುವುದರೊಳಗೇ, ಹಿಂದುಗಳಲ್ಲಿ ಅರ್ಧಕ್ಕರ್ಧ ಮನೆಗೆ! ಉಳಿದವರು ಇದ್ದ ರಕ್ತವನ್ನು ಕೂಡಿಸಿಕೊಂಡು—"ಹೂಂ, ಆಗೋದು ಆಗಲಿ, ನೋಡೋಣ.—ನಮ್ಮ ಸಾಧುಗಳು ಬಂದರೆ ಈ ಜನರಿಗೆ ಇಷ್ಟು ಕೋಪವೇಕೋ! ಅಂದರು." ಅಷ್ಟರಲ್ಲಿ ಒಬ್ಬ ಪೋಲಿಸು ಜವಾನನು ಜನರನ್ನು ಆಚೀಚೆ ಸರಿಸುವಾಗ ಅಕಸ್ಮಿಕವಾಗಿ ಅವನ ಕರೇ ಮುಂಡಾಸವು ಮಗುಚಿಬಿತ್ತು. ಯಾರೋ ರಾಜದ್ರೋಹಿಗಳು ಅದನ್ನು ಕೆಡೆದರೆಂದು ಊಹಿಸಿ, "ಮಾರೋ" ಎಂದು ರೇಗಿ ಅಜ್ಞೆ ಕೊಟ್ಟನು. ಕೂಡಲೇ ಪೋಲಿಸರ ಲಾಟಿಗಳು ಹೊರಬಿದ್ದುವು. ಜನರೆಲ್ಲಾ ಕಲ್ಲಾಬಿಲ್ಲಿಯಾಗಿ ಗಲಭೆಯಿಂದ ಕಿರುಚತೊಡಗಿದರು. ಈ ಗೊಂದಲದಲ್ಲಿ ಕೆಲವು ಪೋಲಿಸು ನೌಕರರು ಆ ಜನಸಂದಣಿಯಲ್ಲಿ ಅತ್ತಿತ್ತ ಚಲಿಸಲಾರದೆ ಗಾಬರಿಯಾದರು. ಅವರ ಆರ್ತನಾದವನ್ನು ಕೇಳಿ, ಉಳಿದವರೊಬ್ಬರಿಬ್ಬರು "ಢಂ" ಮಾಡಿದರು. "ಢಂ" ಧ್ವನಿ ಹೊರಬಿದ್ದ ಐದು ನಿಮಿಷದಲ್ಲಿ ಅಲ್ಲಿ ಒಂದೆರಡು ಹೆಣಗಳಲ್ಲದೆ ಉಳಿದ ಜೀವಚ್ಛವಗಳೆಲ್ಲಾ ಪರಾರಿ! ಅಂತೂ, ಒಬ್ಬ ಪೋಲಿಸು ನೌಕರನು "ಢಂ"ಎಂದು ಮಾಡಿ 'ಮುಂದಾಗ

ಬಹುದೇನೋ' ಎಂದಿದ್ದ ಭಾರೀ ದಂಗೆಯನ್ನು ನಿಲ್ಲಿಸಿದ
ನು. ದಂಗೆ ನಿಂತ ಒಂದೆರಡು ಕ್ಷಣಗಳಲ್ಲಿ ಡಿ. ಸಿ. ಪೋ
ಲಿಸು ಕಮಿಶನರುಗಳ ಆಗಮನವಾಯಿತು. ತಮ್ಮ ಆಗ
ಮನದ ಭೀತಿಯೇ ದಂಗೆಯನ್ನು ನಿಲ್ಲಿಸಿತೆಂದು ಊಹಿಸಿ
ಅವರು ಹಿಗ್ಗಿದರು. ಇಷ್ಟಾಗುವಾಗ ರಾತ್ರಿ ಹದಿನೆರಡು
ತಾಸಾಗಿತ್ತು. ಅವರೆಲ್ಲ ತಂತಮ್ಮ ಮನೆಗಳನ್ನು ಸೇರಿದರು.
ಬೋಳುರಸ್ತೆಯನ್ನು ಬಲವಾದ ಕಾವಲು ಕಾಯುತ್ತಿತ್ತು.
ರಾತ್ರಿ ಊರವರೊಬ್ಬರಿಗಾದರೂ ನಿದ್ದೆ ಬರಬೇಕೇ?
ನಡೆದ ಗಲಭೆಯ ಕುರಿತು ನವವಾರ್ತೆ, ನವವಿಚಾರ
ಗಳನ್ನು ಸೃಷ್ಟಿಸಿ, ನವಟೀಕಟಿಪ್ಪಣಿಗಳನ್ನು ಹೂಡುವು
ದವರ ಕೆಲಸ

ಇತ್ತ ಚಾಮುಂಡಿ ಸಂತರ್ಪಣೆ ಚಪ್ಪರದಲ್ಲಿ ಹದಿ
ನೈದು ದಿನದ ಯೋಜನೆಯಲ್ಲಿ ಠಾಣೆ ಇಳಿಸಿದವರಲ್ಲಿ
ಮುಕ್ಕಾಲು ಮೂರು ಪೀಸ ಜನರು ಬೆಳಕು ಹರಿಯು
ವುದರೊಳಗೆ ಸ್ವರಾಜ್ಯವನ್ನು ಸೇರಿದ್ದರು. ಶಿಸ್ತನ್ನು
ಕಾಯಲು ಬಂದ ೫೦೦ ಹಸುರು ಮುಂಡಾಸುಗಳಲ್ಲಿ
ಕೆಲವೊಂದು ಯಜಮಾನರಿಲ್ಲದ ಮುಂಡಾಸುಗಳನ್ನು
ಬಿಟ್ಟು ಇನ್ನೇನೂ ಉಳಿದಿರಲಿಲ್ಲ. ಮುಂಜಾನೆ ಸಂಗ
ತಿಯೇನೆಂದು ಸಾಧುವು, ಕಣ್ಣಿಗೆ ಬಿದ್ದವರನ್ನು
ಕರೆದು ಮಾತನಾಡಿಸಿದರೆ, ಅವರಿಗೆ ಪಲಾಯನದ ಗಡಿ
ಬಿಡಿಯಲ್ಲಿ ಉಸಿರೆತ್ತುವಷ್ಟು ವೇಳೆಯಿಲ್ಲ ಹೀಗಿರಲು
ಅವರೆಲ್ಲಿಯು ಪ್ರತ್ಯುತ್ತರವೀಯುಬೇಕು? ಸರಿ, ಸಾಧು
ವು, ತನ್ನ ದೇವಲೋಕದ ಗೆಳೆಯರನ್ನು ಮಾತ

ನಾಡಿಸುತ್ತಾ ಕುಳಿತನು. ಅವರಿಗೆ ಡಿ. ಸಿ. ಯವರು ಒಪ್ಪಿಸಿಹೋದ ನೋಟಿಸನ್ನು ಕೊಟ್ಟರು. ಪಾಪ, ಸೀದಾ ಪರಲೋಕದಿಂದ ಬಂದ ಪ್ರಾಣಿಗಳವು! ಈ ವಾಗ್ಬಂಧನದ ಅರ್ಥ ಅವರಿಗೆ ಹೇಗಾಗಬೇಕು? ಬೆಳಗಾಗುವ ತನಕ ಸಾಧುವು ತನ್ನ ಯಾವತ್ತು ಕಾರುಭಾರಗಳನ್ನು ಅವರ ಮುಂದೆ ಹೇಳಿದನು. ಪರಿಸ್ಥಿತಿಯನ್ನು ಕೇಳಿ ಅವರ ಶರೀರದ ಉಷ್ಣತೆಯು ಸ್ವಲ್ಪ ಇಳಿಯಿತು. ಇತ್ತ—ವಾಗ್ಬಂಧನ, ದಂಗೆ! ಯಾವುದಕ್ಕೂ ತಲೆ ಬುಡ ಇಲ್ಲ. "ಬೆಳಗಾದರೆ ವರ್ತಮಾನಪತ್ರ ಸಿಗುವುದು. ಎಲ್ಲಾ ವಿಚಾರ ತಿಳಿದೀತು."—ಎಂದು ಸಾಧುವನ್ನಲು ದೂರ್ವಾಸರು: "ವರ್ತಮಾನಪತ್ರ ಅಂದರೆ?" ಎಂದು, ಪ್ರಶ್ನೆಮಾಡಿದರು. "ಕಲಿಯುಗದ ನಾರದ"—ಎಂದು ವರ್ತಮಾನಪತ್ರವೇನೆಂದು ಬಣ್ಣಿಸಿ ಹೇಳಿದನು. ಸರಿ, ಒಂದು ತಾಸಿನಲ್ಲಿ ಎರಡು ಬಾಲಕರು—"ಘಂಟಾನಾದ, ಘಂಟಾನಾದ, ಹಿಂದುಮುಸಲ್ಮಾನ ಕಲಹ, ಪೋಲಿಸರ ಅದ್ಭುತಸಾಹಸ, ಸಾಧುಗಳ ಕುತಂತ್ರ" ಸರಕಾರದ ಮೂರ್ಖತೆ—"! 'ತಿರುಕನ ಸ್ವಪ್ನ'—"ಸ್ವದೇಶ ಸೇವಾ, ಸ್ವದೇಶ ಸೇವಾ—" ಎಂದು ಒದರುತ್ತ ಬಂದರು. ಒಬ್ಬನು "ಘಂಟಾನಾದ" ಪತ್ರಿಕೆಯ ವಿಕ್ರಯಗಾರ, ಇನ್ನೊಬ್ಬ "ಸ್ವದೇಶ ಸೇವಾ" ಪತ್ರಿಕೆಯ ವ್ಯಾಪಾರಿ. ದೊಡ್ಡ ಅಕ್ಷರ, ಮತ್ತೂ ದೊಡ್ಡ ಕಾಗದಗಳಲ್ಲಿ ಮುದ್ರಿಸಿದ ಹಾಳೆಗಳನ್ನು ಸಾಧುವು ಕೊಳ್ಳ ಹೋದನು. ಐವತ್ತು ಕಾಗದ ಹಿಡಿದರೆ ತಲೆಯಿಂದ

ಬುಡದ ವರೆಗೆ ಓದಲು ಬರುವಂತೆ ಒಂದೂ ಇದ್ದಿಲ್ಲ. ಕೆಲವಕ್ಕೆ ಮಸಿಯೇ ಬೀಳಲಿಲ್ಲ, ಕೆಲವು ಮಸಿಮಯ (ವ್ಯಾಕರಣಿಗಳು ಈ ಪ್ರಯೋಗವನ್ನು ಕ್ಷಮಿಸಲಿ). ಕೆಲವಕ್ಕೆ ಮಸಿಯಿಲ್ಲದಿದ್ದರೂ ಮೊಳೆಯ ಜಡಿತದಿಂದ ಕಾಗದವೇ ತೂತು. ಅಂತು ಒಬ್ಬೊಬ್ಬನಿಂದ ಹತ್ತತ್ತು ಹಾಳೆವರ್ತಮಾನಪತ್ರಗಳನ್ನು ತೆಗೆದುಕೊಂಡು, ಬಲು ಪ್ರಯಾಸದಿಂದ ಆ ಮುದ್ದಾದ ಮುದ್ರಣವನ್ನು ಓದ ತೊಡಗಿದನು. ಎರಡೂ ಪತ್ರಿಕೆಗಳಲ್ಲಿ ಎರಡೆರಡು 'ಬ್ಲಾಕು'ಗಳು ಬಂದಿದ್ದುವು. 'ಸ್ವದೇಶ ಸೇವೆ'ಯುವನು ಸಾಧು ಸದಾನಂದನ ಚಿತ್ರವೆಂದು-ಒಂದು ಮುದ್ರೆಯೊತ್ತಿದ್ದನು. ಕೆಳಗೆ ಅವನ ಹೆಸರಿತ್ತು. ಮೇಲೆ ಕಪ್ಪು ಮಸಿಯ ಮುದ್ದೆಯಿತ್ತು. ಪ್ರಾಯಶಃ ಕತ್ತಲೆಯಲ್ಲಿ ತೆಗೆದ ಫೊಟೋ ಇರಬೇಕು. 'ಘಂಟಾನಾದ'ದಲ್ಲಿ-ಪೋಲಿಸು ಕಮಿಶನರ್‌ಜಬರ್‌ಖಾನರು-ಎಂದು ಒಂದು ಚಿತ್ರ. ಅದೂ ಕತ್ತಲೆಯ ಫೋಟೋವೇ. ಆದರೆ ಸ್ವಲ್ಪ ಚೆನ್ನಾಗಿ ಪರಿಶೀಲಿಸಿ ನೋಡಿದರೆ-ಯಾವುದೋ ಒಂದು ಪಡಿಯಚ್ಚನ್ನು ಗಡಿಬಿಡಿಯಿಂದ ಹೊಡೆದದ್ದು-ಎಂದು ಕಾಣುತ್ತಿತ್ತು. ಅಂತು ಪತ್ರಕರ್ತರ ಸಾಹಸ-ಬೇಷ್! ಇಲ್ಲಿ ಅಮೇರಿಕದ ಪತ್ರಿಕಾ ಸಲಕರಣೆಗಳಿಲ್ಲದಿದ್ದರೂ-ಮಧ್ಯರಾತ್ರಿ ನಡೆದ ಸುದ್ದಿಯನ್ನು ಬೆಳಗಾಗುವುದರೊಳಗೆ ಮುದ್ರಿಸಿ ಊರ ಮೇಲೆ ಮೆರೆಯಿಸಬೇಕೆಂದಿದ್ದರೆ! ಅದೂ ಈಗಾಗಲೇ ೩೦೦೦ ಕಾಪಿಗಳಿಗೆ ಮಿಕ್ಕಿ ವಿಕ್ರಯವಾಗಿ ಹೋಗಿದ್ದುವು. 'ಸ್ವದೇಶ

ಸೇವೆ'ಯ ಪತ್ರಕರ್ತರ ಅಜ್ಜಿ, ಸಾಧುಗಳ ಮೆರವಣಿಗೆ.
ಕಾಣಲು ಹೋದವಳು, ಹಿಂದುಮುಸಲ್ಮಾನ ಕಲಹದ
ವಾರ್ತೆ ಕೇಳಿ, ಮನೆಗೋಡಿ ಬಂದು ಸಂಪಾದಕ
ಮೊಮ್ಮಗನನ್ನು ಎಚ್ಚರವಮಾಡಿದಳು. ಅವನು ಮನೆ.
ಬೀದಿಗೆ ಬಂದು ಹಾದಿಯಮೇಲೆ ಓಡುತ್ತಿದ್ದವರು
ಆಡುತ್ತಿದ್ದುದನ್ನು ಕೇಳಿ, ಕಡಿಮೆ ಬಿದ್ದ ಸುದ್ದಿಗೆ,
ಅಜ್ಜಿಯ ಹೇಳಿಕೆ ಕೂಡಿಸಿ, ಬಾರೀ ಕಥೆ, ಉಗ್ರಲೇಖ
ಗಳನ್ನು ಬರೆದಿದ್ದನು. ಇತ್ತ 'ಘಂಟಾನಾದ'ದ ವರ್ತ
ಮಾನದ ಕಾಲಮಿನಲ್ಲಿ ಅರ್ಧ ಕಾಲಮು ಒಂದೂ ತಪ್ಪಿ
ಲ್ಲದೆ ದೊಡ್ಡ ಅಕ್ಷರಗಳಲ್ಲಿ ಜೋಡಿಸಲ್ಪಟ್ಟಿತ್ತು-ಉಳಿದ
ರ್ಧ ಓದಲು ಬರುವ ಹಾಗಿಲ್ಲ. ಕಣ್ಮುಚ್ಚಿ ಜೋಡಿ
ಸಿದ್ದರು: ಮೊಳೆಗಳನ್ನು. ಅಂದರೆ-ಅವರ ಪತ್ರಿಕೆಯಲ್ಲಿ
ಹೀಗಾಯಿತು ಎಂಬ ವರ್ತಮಾನಕ್ಕಿಂತ ಹೀಗಾಗುತ್ತೆ
ಎಂಬ ವರ್ತಮಾನದ ಪೂರ್ವಭಾಗ ಪಸಂದಾಗಿ.
ಹೊರಟಿತ್ತು. ಅದರ ಗುಟ್ಟಷ್ಟೆ. ಘಂಟಾನಾದದ ಎಡಿ
ಟರರಿಗೂ ಡಿ. ಕಮಿಶನರರಿಗೂ ತಾಜಾತಾಜಾ ಸಡ್ಡುಗ
ತನವಿದೆ. ಹೀಗಾಗಿ ದಂಗೆ ನಡೆಯುವ ಮೊದಲೇ
ವರ್ತಮಾನ ಅವರಿಗೆ ಸಿಗುವುದು ಶಕ್ಯವಿತ್ತು. ಹೋ
ಗಲಿ, ಹಾಳುಹರಟೆ. ಪತ್ರಿಕೆಯ ಅಭಿಪ್ರಾಯವೇನು
ಸದಾನಂದನ ಕಣ್ಣಿಗೆ ಬಿತ್ತೆಂದು ನೋಡುವ:

**ಘಂಟಾನಾದ.** ನಿನ್ನೆ ರಾತ್ರಿ ಭಯಂಕರ ಹಿಂದೂ
ಮುಸಲ್ಮಾನ ಕಲಹವಾಗುವುದರಲ್ಲಿತ್ತು. ಪರದೇಶ
ದಿಂದ ಕೆಲವು ಚಳವಳಗಾರರು ಸರಕಾರವನ್ನು ತಲೆ

ಕೆಳಗೆ ಮಾಡಲು ಬರುವರೆಂದು ಸರಕಾರಕ್ಕೆ ಮೊದಲೇ ತಿಳಿದುದರಿಂದ, ನಮ್ಮ ಜನಾಬ ಪೋಲಿಸು ಕಮಿಶನರು ಮುಂಜಾಗ್ರತೆಯಿಂದ, ಬಂದಂಥ ಚಳವಳಗಾರರ ಮೇಲೆ ವಾಗ್ಬಂಧನದ ಆರ್ಡರು ಕೊಟ್ಟು, ಇತ್ತ ತಮ್ಮ ನೌಕರರ ಮುಖಾಂತರ ಉಪಾಯದಿಂದ ಗಲಭೆ ನಿಲ್ಲಿಸಿದರು. ಗುಂಡುಗಿಂಡು ಹಾರಿಸದೆ ಶಾಂತರೀತಿಯಿಂದ ನಿಲ್ಲಿಸಿದ ಗಲಭೆಯೆಂದರೆ ಇದೇ ಮೊದಲು. ಇವರ ಸಾಹಸಕ್ಕೆ ಮೆಚ್ಚಿ, ಇವರಿಗೆ ಮುಂದೆ ಪ್ರಮೋಶನ್ನು ಸಿಕ್ಕೀತೆಂದು ನಮ್ಮ ಆಶೆ.

ಇತ್ತ "ಸ್ವದೇಶ ಸೇವಾ" ಪತ್ರಿಕೆ ಸುದ್ದಿ ಬೇರೆ. "ಸರಕಾರದ ಗುಂಡಿನ ಬಾಯಿಗೆ ನೂರು ಮಂದಿ ಬಲಿಯಾದರು." "ಸರಕಾರವು ೨೬ ಮಂದಿ ಸ್ವದೇಶ ಸೇವಕ ಸಾಧುಗಳ ಮೇಲೆ ವಾಗ್ಬಂಧನದ ಹುಕುಮನ್ನು ಕೊಟ್ಟದೆಯಂತೆ. ಚಾಮುಂಡಿ ಬೆಟ್ಟದ ಬಳಿ ಸಂತರ್ಪಣೆಗೆ ನೇರಿದ ಜನರ ಮೇಲೆ ಪೋಲಿಸರು ದಾಳಿ ಎಬ್ಬಿಸಿ ಅವರೆನ್ನೆಲ್ಲಾ ಓಡಿಸಿಬಿಟ್ಟರಂತೆ! ಹಿಂದೂಗಳ ಧರ್ಮಕ್ರಿಯೆಗಳಿಗೆ ಎಂತಹ ವಿಘ್ನ!"—ಎಂಬಿತ್ಯಾದಿ ಟೀಕೆಗಳು.

ಸರಿ, ಇನ್ನೂ ಒಂದು ತಾಸಿನಲ್ಲಿ "ರಣಭೀಮ" "ಸತ್ಯ ಸಮಾಚಾರ" ಎಂಬೆರಡು ಪತ್ರಿಕೆಗಳು ಹೊರಬಿದ್ದುವು. ರಣಭೀಮದಲ್ಲಿ ಸತ್ತವರ ಸಂಖ್ಯೆ ಸ್ವದೇಶ ಸೇವಕನೆನ್ನುವಂತೆ ೧೦೦ ಎಂದಿರಲಿಲ್ಲ; ಬರೇ ೫೦ ಮಾತ್ರ "ಬಂದ ಸಾಧುಗಳನ್ನು ಪೋಲಿಸರು ನೆರೆಹಿಡಿದು ಜೈಲಿ-

ನಲ್ಲಿರಿಸಿದ್ದು ತೀರ ಅನ್ಯಾಯ" ಎಂದಿತ್ತು. "ಸತ್ಯ ಸಮಾಚಾರ"ದಲ್ಲಿ ಕೂಡಿದಷ್ಟು ಸತ್ಯ ಪ್ರಕಟವಾಗಿತ್ತು. "ಸ್ವದೇಶ ಸೇವಕ ಮೊದಲಾದ ಪತ್ರಿಕೆಗಳಭಿಮತದಂತೆ ಸರಕಾರವು ಗುಂಡು ಹಾರಿಸಲಿಲ್ಲ. ಜನರು ಸತ್ತುದು ಸುಳ್ಳು. ಅಂತೂ ಶಾಂತರೀತಿಯಿಂದ ಪೋಲಿಸರು ಆಗಬಹುದಾಗಿದ್ದ ದಂಗೆ ನಿಲ್ಲಿಸಿದರೆಂಬುದು ಸಂತೋಷ"— ಎಂದು ಸಾರಿತ್ತು.

ನಾಲ್ಕು ಪತ್ರಿಕೆಗಳಲ್ಲಿ ನಾಲ್ಕು ಬಗೆಯ ವಾರ್ತೆಗಳನ್ನು ಕಂಡ ದೇವದೂತರು ಚಕಿತರಾದರು. ತಮ್ಮ ಆಗಮನವೇ ಇಷ್ಟು ಅರಿಷ್ಟಕಾರಿಯಾಯಿತಲ್ಲಾ ಎಂದು ವಿಷಾದಿಸಿದರು. ಇತ್ತ "ರಣಭೀಮ"ದಲ್ಲಿ— "ಬಂದ ಸಾಧುಗಳನ್ನು ಸರಕಾರವು ಸೆರೆಯಲ್ಲಿಟ್ಟಿರುವುದು" ಎಂದು ಬರೆದುದನ್ನು ಕಂಡು ನಕ್ಕರು. ದೂರ್ವಾಸರಿಗಂತು ಹೊಟ್ಟೆ ಹಿಡಿಯುದಷ್ಟು ನಗು ಬಂತು. ಅವರಂದರು: "ಶಿವಣ್ಣಾ— ಇವರೇನು ಕಲಿಯುಗದ ನಾರದರು? ಸತ್ಯಸುಳ್ಳುಗಳ ತಾರತಮ್ಯವೇ ಈ ನಾರದರಿಗೆ ತಿಳಿಯದೆಂದು ಕಾಣುತ್ತದೆ." ಶಿವಣ್ಣನೂ ನಕ್ಕು— "ಆರಂಭದಲ್ಲೆ ಇಷ್ಟು ಕಾಣಲು ಸಿಕ್ಕಿತು— ಇನ್ನು ಅಂತ್ಯದ ವರೆಗೆ ನಿರೀಕ್ಷಿಸಿರಿ."

ಆಗ ದೂರ್ವಾಸರು— "ಅಂತ್ಯದ ವರೆಗೆ ನಿರೀಕ್ಷಿಸಲು ವಾಗ್ಬಂಧನವಿದೆಯಲ್ಲ. ಈ ಕಲಸಕ್ಕಾಗಿ ಬಂದುದಲ್ಲದಿದ್ದರೆ ಒಂದೇ ಒಂದು ಶಾಪದಿಂದ ಇವರ ಕುಲಧ್ವಂಸಮಾಡುತ್ತಿದ್ದೆ"— ಎಂದು ಕೊಚ್ಚಿಕೊಂಡರು.

ಅಂತು ಆ ದಿನದ ಸಂತರ್ಪಣೆಗೆ ೫೦ ಮಂದಿ ಸಹ ಇಲ್ಲ. ಧರ್ಮಪ್ರಕಾಶರು ಅದೇ ದಿನ–ತನಗೆ ಮುಂಬಯಿ ಯಿಂದ ವ್ಯಾಪಾರದ ಸಂಬಂಧ ತಂತಿ ಬಂದಿದೆಯೆಂದು ಬೆಳಗಿನ ಗಾಡಿಗೇ ದಾವಣಗೇರಿಗೆ ಹೊರಟರು. ಮೂರು ದಿನದಲ್ಲಿ ಗಲಭೆಯೆಲ್ಲಾ ಶಾಂತವಾಗಿದೆಯೆಂದು ಅಂಗಡಿ ಮುನಷಿಯಿಂದ ಪತ್ರ ಬಂದ ಬಳಿಕ ಮುಂಬಯಿಯ ಪ್ರವಾಸ ಅಲ್ಲೇ ಮುಗಿಸಿ ಊರನ್ನು ಸೇರಿದರು. ಬಂದ ಒಂದೆರಡು ದಿನ ದೇಹಾಲಸ್ಯವೋ ಏನೋ, ಹೊರ ಹೊರಡಲಿಲ್ಲ. ಅಂತು ಒಂದೆರಡು ದಿನಗಳಲ್ಲಿ ಅದನ್ನು ಗುಣಪಡಿಸಿಕೊಂಡು ತಿರುಗಿ ಸಾಧುಗಳ ಸಮಾಗಮಕ್ಕೆ ಹೊರಟರು ಅಷ್ಟರಲ್ಲಿ ಎಲ್ಲಾ ಯಥಾಪೂರ್ವಕ್ಕೆ ಬಂದಿತ್ತು. "ಎಲ್ಲಾ" ಅಂದರೆ–"ಸಂತರ್ಪಣೆ ಜನ ಸಂಖ್ಯೆ." ಅದರಿಂದೇ ಅಳಿಯಬಹುದು. ನಗರದಲ್ಲಿ ದಂಗೆ ನಿಂತಿತು ಎಂದು. ಪೋಲಿಸುಕಮಿಶನರು ದಂಗೆ ನಡೆಯುದಂತೆ ಪೂರ್ವಜಾಗ್ರತಿವಹಿಸಿದಂತೆ ಡಿ. ಸಿ. ಯುವರು ಸ್ವಲ್ಪ ಉತ್ತರ ಜಾಗ್ರತೆಯನ್ನು ತೆಗೆದು ಕೊಂಡರು. ಸ್ವದೇಶ ಸೇವಾ, ರಣಭೀಮ—ಎರಡು ಪತ್ರಿಕೆಗಳನ್ನು ನಿಲ್ಲಿಸಿಬಿಟ್ಟರು ಮತ್ತು ಸುಳ್ಳು ವಾರ್ತೆಯಿಂದ ಸರಕಾರದ ಮೇಲೆ ಜನರಿಗೆ ಅಪ್ರೀತಿ ಹೆಚ್ಚಿಸುವಂತೆ ಮಾಡಿದಕಾರಣ ಅವರ ಮೇಲೆ—ರಾಜ ದ್ರೋಹ, ಮತ್ತು ಸರಕಾರವನ್ನು ತಲೆಕೆಳಗೆ ಮಾಡು ವುದು—ಎಂಬ ಎರಡು ಕಲಂಗಳ ಮೇಲಿಂದ ಅವು ಗಳ ಸಂಪಾದಕರನ್ನು ಎರೆಸ್ಟುಮಾಡಿದರು. ಮುಂದೆ

ಅವರು ತನಖಿಯಾಗಿ ಆರು ತಿಂಗಳ ಸಾದಾ ಸಜೆ ಅನು ಭವಿಸಿ ಮರಳಿ ಬಂದರಂತೆ. ಅದರಲ್ಲಿ ಒಬ್ಬರು ಪತ್ರಿಕಾ ಉದ್ಯೋಗಕ್ಕೆ ಸಲಾಮುಹೊಡೆದರು. ಇನ್ನೊಬ್ಬರ ಮೇಲೆ ದೇವರ ಅನುಗ್ರಹವಾಗಿ, ಬೇರೆ ಚಾಕರಿ ಸಿಕ್ಕಿದುದರಿಂದ ಅವರು ಸಂಪಾದಕಗಿರಿಯನ್ನೇರುವುದನ್ನು ಬಿಟ್ಟರು.

ಇತ್ತ ದೇವದೂತರ ಸಂಗತಿಯನ್ನು ಅರ್ಧದಲ್ಲಿಯೇ ನಿಲ್ಲಿಸಿಬಿಟ್ಟೆವಲ್ಲ. ಈ ಭಯಂಕರ ದಂಗೆಯಾದ ಮೊದಲನೇ ದಿನ ಉಸುರೆತ್ತುವ ಸಾಹಸ ಅವರಿಗಿದ್ದಿಲ್ಲ. ಸದಾನಂದನಿಗಂತೂ ತಾನು ಇಷ್ಟೆಲ್ಲಾ ಸಾಹಸಮಾಡಿ ಧರ್ಮಪ್ರಕಾಶರಿಂದ 'ಜರುಗಿಸುವಂತೆ ಮಾಡಲ್ಪಡೋಣಾದಂಥ' ಈ ಸಂತರ್ಪಣೆಯು ಉದ್ದೇಶಕ್ಕೆ ಇಲ್ಲದ ಭಂಗ ತಂದು ಕೆಡಿಸಿದರಲ್ಲಾ ಎಂದು—ವ್ಯಸನವಾಯಿತು. ಆದರೆ ೧೫ ದಿವಸಗಳಲ್ಲಿ ಬರೇ ನಾಲ್ಕು ದಿನವಷ್ಟೆ ಉಪಯೋಗಕ್ಕೆ ಬಾರದೆಹೋದುದು. ಉಳಿದ ದಿನಗಳಲ್ಲಿ ಜನಸಂದಣಿ ಮತ್ತಷ್ಟು ಹೆಚ್ಚಿತು. ಈ ಗಲಭೆ ದೆಸೆಯಿಂದ ಬಂದ ಸಾಧುಗಳ ಕೀರ್ತಿ ಇಡೀ ಸ್ಟೇಟಗೇನೆ ಹಬ್ಬಿ, ಮೈಸೂರು ನಗರದ ಜನಸಂಖ್ಯೆಗಿಂತ "ಟೆಂಪರರಿ" ಚಾಮುಂಡಿ ನಗರದ ಜನಸಂಖ್ಯೆಯೇ ಹೆಚ್ಚಿತು. ಅಲ್ಲಿವರು ಮೆಲ್ಲನೆ ತಮ್ಮ ಪ್ರಸಂಗ ಬಿಡಿಸತೊಡಗಿದರು. ತಮ್ಮದು ಸಾರ್ವಜನಿಕ ಭಾಷಣವಲ್ಲ ಎಂದು ತೋರಿಸಲು, ಯಾವತ್ತು ಸಂತರ್ಪಣೆ ಮುಗಿಯುವ ತನಕ ಸ್ವತಃ ಡಿ ಸಿ. ಮತ್ತು ಪೊ. ಕಮಿಶನರಿಗೇ ಬಂದಿರಲು

ಹೇಳಿದರು. ಅವರಾದರೂ ಆ ಎಲ್ಲಾ ದಿವಸಗಳಲ್ಲೂ ತಮ್ಮ ದಿವ್ಯ ಸನ್ನಿಧಿಯಿಂದ ಬಂದವರ ವೃತ್ತಿಗಳನ್ನು ಆದಷ್ಟು ತಮ್ಮ ಕಡೆ ಸೆಳೆದುಕೊಂಡು ತಕ್ಕಮಟ್ಟಿಗೆ ಭಾರೀ ಮನುಷ್ಯರೆನಿಸಿಕೊಂಡರು.

---

## ಪ್ರಕರಣ ೧೦.

## "ಚತುರ್ಮುಖಿಗಳು ಬೇಕು."

ಶಿವರಾಯನು ಸಾಧುವಿನ ಸೋಗಿನಿಂದ ಚಾಮುಂಡಿ ಬೆಟ್ಟದ ಬಳಿಯಲ್ಲಿ ಸಂತರ್ಪಣೆ ನಡೆಯಿಸಿದ ದಿನದಿಂದ ನಮ್ಮ ದೇವದೂತ ವಿಚಾರಣಾ ಸಮಿತಿಯವರ ಕಾರ್ಯ ಕಲಾಪಗಳಿಗೆ ಆರಂಭ. ಅಂದಿನಿಂದ ಆ ಭಿನ್ನ ಭಿನ್ನ ಮಂಡಲದವರು ತಮಗೆ ಬೇಕುಬೇಕಾದ ನಗರ, ನಾಡು, ಕಾಡು, ಹಳ್ಳಿ, ಕ್ಷೇತ್ರಗಳನ್ನು ಸಂಚರಿಸ ತೊಡಗಿದರು. ಸರಿ, ಎರಡು ವರುಷಗಳ ನಂತರ ಅವರು ಚಾಮುಂಡಿ ಬೆಟ್ಟದ ಬಳಿಯಲ್ಲಿಯೇ ತಿರುಗಿ ಭೇಟಿ ಯಾಗಬೇಕೆಂದು ನಿಶ್ಚಯವಾಯಿತು ಅಲ್ಲಿಯ ತನಕ ಈ ಭಿನ್ನ ಭಿನ್ನ ಉಪಸಮಿತಿಗಳು ಜತೆಯಲ್ಲೇ ಸಂಚರಿಸ ಬೇಕೆಂಬ ನಿಯಮವಿದ್ದಿಲ್ಲ. ಮುಖ್ಯವಾಗಿ ಅವರವರ ವಿಚಾರಣೆಗಳಿಗೆ ಸಂಬಂಧಿಸಿದ ಸ್ಥಳಗಳನ್ನು ಅವರವರು ಆರಿಸಬೇಕಷ್ಟೆ. ಇನ್ನು ಪ್ರಮುಖ ಸಮಿತಿಯ ಅಧ್ಯಕ್ಷ ದೂರ್ವಾಸರು ಈ ಸಮಯದ ತನಕ, ಅಂದರೆ ಉಪ ಸಮಿತಿಯವರು ಸ್ವತಂತ್ರ ವಿಷಯವಿಚಾರಣೆ ನಡೆಯಿ

ಸುವ ತನಕ, ಒಂದೊಂದು ಕಮಿಟಿಯವರ ಬಳಿ ಒಂದಷ್ಟು ದಿನವಿರುವುದೆಂದು ನಿಶ್ಚಯವಾಯಿತು. ಶಿವರಾಯನಿಗೆ ತನ್ನ ಕೆಲಸ ಮುಗಿಯಿತು, ತಾನು ಉಮಾದರ್ಶನಕ್ಕೋಡಬಹುದೆಂಬ ಆತುರ. ಆದರೆ ದೂರ್ವಾಸರೆಲ್ಲಿ ಬಿಡಬೇಕು. ಅವರಿಗೊಬ್ಬ ಜತಗಾರನು ಬೇಡವೇ? "ಶಿವರಾಯಾ, ನೀನಿಷ್ಟು ಸಮಯವನ್ನಂತೂ ಕಳೆದುದಾಯಿತು. ಇನ್ನೆರಡು ವರುಷ ನಮ್ಮ ಬಳಿಯಲ್ಲಿರಲು ಅಂಜಿಕೆಯೇನು? ನೀನಿದ್ದರೆ ನಮಗೂ ಇಷ್ಟು ಧೈರ್ಯ"—ಎಂದು ಆಗ್ರಹಪಡಿಸಿದ್ದರಿಂದ ಅದಕ್ಕೊಪ್ಪಿಗೆ ಕೊಟ್ಟನು. ಹೀಗಾಗಿ ಅಲ್ಲಿಗೆ ನಾಲ್ಕು ಉಪಸಭೆಗಳಾದುವೆನ್ನಬಹುದು.

ಇವರಿಗೆ ಆರಂಭದಲ್ಲೇ ಒಂದು ಬಲವಾದ ತೊಡಕು ಬಂದಿತು. ಇವರದು ಗೀರ್ವಾಣಭಾಷೆ ಇವರು ಸಂಚರಿಸಲಿರುವ ನಾಡುಗಳ ಭಾಷೆಯು ಬೇರೆ. ಅವನ್ನು ಕಲಿತು ಮುಗಿಸೋಣವೆಂದರೆ, ಅವು ಒಂದೆರಡಲ್ಲ. ಇವರ ಕಾರ್ಯಕಲಾಪಕ್ಕನುಕೂಲಿಸುವಷ್ಟು ಬೇಕೆಂದರೂ ನಾಲ್ಕೆಂಟು ಭಾಷೆಗಳ ಪರಿಚಯಮಾಡಿಕೊಳ್ಳಬೇಕು. ತಿರುಗಾಡಲಿರುವ ಎರಡು ವರುಷಗಳನ್ನು ಭಾಷೆಗಳ ಪರಿಚಯಕ್ಕೆ ವಿನಿಯೋಗಿಸಿದುದಾದರೆ ಇವರು ಕೆಲಸಮಾಡುವುದೆಲ್ಲುಳಿಯಿತು? ಅದಕ್ಕಾಗಿ ಚಾಮುಂಡಿ ಭೋಜನ ನಗರದಲ್ಲಿ ಚತುರ್ಭಾಷಾ ಪಂಡಿತರು ಬೇಕೆಂದು ಸಾರಿದರು. ಅಂದರೆ— ದೇವಭಾಷೆ ಸಂಸ್ಕೃತ, ರಾಜಭಾಷೆ ಇಂಗ್ಲಿಷು, ಪ್ರಾಮುಖ್ಯ

ಭಾಷೆ ಹಿಂದೀ, ಜತೆಯಲ್ಲಿ ಒಂದಾದರೂ ದ್ರಾವಿಡ ಭಾಷೆ. ಹೀಗೆ ಚತುರ್ಮುಖಿಗಳಾರಾದರೂ ಇರುವರೇ ಎಂದು ಹುಡುಕತೊಡಗಿದರು. ಸಂತರ್ಪಣೆ ಸಂತೆಯಲ್ಲಿ ಇಂಥ ವಸ್ತುಗಳೆಲ್ಲಿ ವಿಕ್ರಯಕ್ಕಿರಬೇಕು! ಒಂದು ಭಾಷೆಯಿದ್ದರೆ ಇನ್ನೊಂದಿಲ್ಲ; ದ್ರಾವಿಡರಿಗೆ, ಹಿಂದೀ ಬಾರದು, ಸಾಹೇಬರಿಗೆ ಗೀರ್ವಾಣಬಾರದು. ಎರಡೂ ಇದ್ದವರಿಗೆ ಇಂಗ್ಲಿಷು ತಿಳಿಯದು. ಇದಕ್ಕೊಂದು ಉಪಾಯಮಾಡೋಣವೆಂದು—"ಕನ್ನಡ, ಸಂಸ್ಕೃತ, ಇಂಗ್ಲಿಷು, ಹಿಂದೀ ನಾಲ್ಕೂ ಭಾಷೆಗಳ ಪರಿಚಯ ಉಳ್ಳ ಪಂಡಿತರು ಎರಡು ವರುಷಗಳ ವರೆಗೆ ಭೂಸಂಚಾರಕ್ಕೆ ಬೇಕಾಗಿರುವರು ತಿಂಗಳಿಗೆ ಯಾವತ್ತು ಖರ್ಚುವೆಚ್ಚ ಕೊಟ್ಟು ೧೦೦ ರೂಪಾಯಿಯ ವೇತನ ಕೊಡಲಾಗುವುದು."—ಎಂಬ ಜಾಹೀರಾತನ್ನು ಮದ್ರಾಸಿನ 'Standard' ಎಂಬ ಪತ್ರಿಕೆಯಲ್ಲಿ ಹಾಕಿಸಿದರು. ವೇತನಕೊಡಲು ಈ ಸ್ವರ್ಗಲೋಕದ ಫಕೀರರಲ್ಲಿ ಕಾಸೆಲ್ಲಿಂದ ಬರಬೇಕು? ಲಕ್ಷ್ಮಿಯ ಸಂಪತ್ತುಳಿಯಿತು ವೈಕುಂಠದಲ್ಲಿ. ಇನ್ನು 'ಬನಾವಟ' ನಾಣ್ಯಮಾಡಿದರೆ ಸರಕಾರದವರು ತಮ್ಮ 'ಅನ್ನಸತ್ರ' ಗಳಿಗೆ ಒಯ್ಯುವರೆಂದು ಶಿವರಾಯನು ಮೊದಲೇ ಅಂಜಿಕೆ ಹುಟ್ಟಿಸಿದ್ದನು. ಸಿದ್ಧರಸ ಉಪಯೋಗಿಸಿ ಚಿನ್ನಬೆಳ್ಳಿ ಮಾಡುವ ಎಂದರೆ— ಇವರದನ್ನು ಮಾಡುವರು ಎಂಬ ಸುದ್ದಿ ಹೊರಬಿದ್ದರೆ ಸಾಕು, ಇವರ ಹಿಂದೆ ಈ ನಾಡಿಗೆ ನಾಡೇ ಸುತ್ತಾಡಬಹುದು. ಈ ಎಲ್ಲಾ

ಗದ್ದಲಕ್ಕೆ ಅಂಜಿ ಅವರು ಸುಮ್ಮನಾದರು. ಇತ್ತ ಅವರ ಪ್ರವಾಸ, ಊಟ ಇತ್ಯಾದಿಗಳ ಖರ್ಚು ಬೇರೆ, ಈ ಚತುರ್ಭಾಷಿಗಳ ವೇತನ ಬೇರೆ. ಆದರೆ ಸಾಧು ಸದಾನಂದನಿರುವ ತನಕ ದುಡ್ಡಿನ ಕೊರತೆಯಿಲ್ಲ. ಅವನಿಷ್ಟು ಗಾಳಿಯನ್ನು ನಮ್ಮ ಧರ್ಮಪ್ರಕಾಶರಿಗೆ ಬೀಸಿದರೆ, ಹೂತಿಟ್ಟ ಹಣವೆಲ್ಲಾ ಹೊರಗೆ ಬೀಳುವುದು.

ಅಂತು ಜಾಹಿರಾತು 'ಸ್ಟೇಂಡಾಡ್ರ್' ಪತ್ರಿಕೆಯಲ್ಲಿ ಹೊರಬಿದ್ದುದೇ ತಡ, ಚಾಮುಂಡಿ ವಾರ್ಡಿನ ಅಂಚೆ ಜವಾನನಿಗೆ ಕತ್ತೆ ಕೆಲಸ ಬಂತು! ಬರೆ ಕತ್ತೆಯಲ್ಲ, ಅಗಸರ ಕತ್ತೆಯಾಗಬೇಕಾಯಿತು. ದಿನಕ್ಕೆ ಮೂಟೆ ಮೂಟೆ ಅಪ್ಲಿಕೇಶನುಗಳು! ಸಾಧುಗಳು ಬೆರಗಾದರು — ಈ ದೇಶದಲ್ಲಿ ಬೀಲತುಂಬಾ ಚತುರ್ಮುಖಿಗಳಿರುವರೆಂದು. ಸದಾನಂದನು ತನ್ನ ಮುಂದೆ ಅಂಚೆಯವನು ಕೆಡವಿಹೋದ ಈ ಮನವಿಗಳ ಹೊರೆಯನ್ನು ಬಿಡಿಸುತ್ತಾನೆ; ಬಿಡಿಸಿ ಬಿಡಿಸಿ ನೋಡುತ್ತಾನೆ; ಸಂಖ್ಯೆ ಮುಗಿಯಲೊಲ್ಲದು. ಇತ್ತ ಯೋಗ್ಯ ಅಸಾಮಿ ಪತ್ತೆಯಾದ ಹಾಗೆಯೂ ಇಲ್ಲ. ಕಾರಣ, ಮನವಿಗಳು ಅಷ್ಟೊಂದು ಬಂದಿದ್ದರೂ, ನಾಲ್ಕು ಭಾಷೆ ಬಲ್ಲವರನ್ನು ಕಾಣೆ. ಮನವಿದಾರರಲ್ಲಿ, ಮಿಡ್ಲ್‌ಸ್ಕೂಲಿನಿಂದ ಹಿಡಿದು ಬಿ.ಎ., ಎಮ್.ಎ., ಸಂಚರಿಸಿದವರೆಲ್ಲ ಇದ್ದಾರೆ. ಅವರ ಬರವಣಿಗೆಯಲ್ಲಿ ವಿಷಯಕ್ಕಿಂತ ತಮ್ಮ ಸುಖ ದುಃಖಗಳೇ ಹೆಚ್ಚು. ಕೆಲವರು ತಂತಮ್ಮ ಪುರಾಣೇತಿ

ಹಾಸಗಳನ್ನು ಅದರಲ್ಲಿ ಬರೆದುಕೊಂಡಿದ್ದರು. ಕೆಲವರು ತಮ್ಮ ಯೋಗ್ಯತೆ ಬಗ್ಗೆ ತಾವೇ ಹೇಳುವುದು ಒಳಿತಲ್ಲ ಎಂದು 'ಶಿಫಾರಸಿ' ಪತ್ರಗಳ ಹೊರೆಯನ್ನು ಜತೆಯಲ್ಲಿರಿಸಿದ್ದರು ಕೆಲವರ ಅಪ್ಲಿಕೇಶನುಗಳ ಬಳಿ ಉಪಪತ್ರಗಳು ಬೇರೆ ಇರುತ್ತಿದ್ದುವು. "ಮಹಾಶಯ, ಈ ಕೆಲಸ ನನಗೇ ಸಿಗುವಂತ ಮಾಡಿಸಬೇಕು ನಿಮ್ಮ ಪ್ರಯತ್ನದ ಬಗ್ಗೆ ಮುಂಗಡ ೧೦ ರೂಪಾಯಿಗಳ ನೋಟನ್ನಿರಿಸಿರುವೆ. ಇನ್ನು ಕೆಲಸವಾದರೆ ರೂಢಿಯಿದ್ದಂತೆ, ಎರಡು ತಿಂಗಳ ಸಂಬಳ ನಿಮಗೇ ಕೊಡುವೆ"—ಎಂದೂ ಇತ್ತು. ಹೀಗೆ ಒಟ್ಟಾದ ಹಣವೇ ಒಂದೆರಡು ಉಪಸಮಿತಿಯವರ ಖರ್ಚುವೆಚ್ಚಕ್ಕೆ ಸಾಕು ಒಕ್ಕಣೆಯ ಕೆಲವು ಮಾದರಿಗಳನ್ನು ನೋಡಿರಿ:

"ಮಹಾಶಯ, ನಾನು ತೀರಾ ಬಡವ. ಬಿ. ಎ., ಕಲಿತು ಇಂದಿಗೆ ನಾಲ್ಕು ವರುಷಗಳಾದುವು. ನೌಕರಿಯಿಲ್ಲದೆ ಅಲೆಯುತ್ತಿರುವೆ. ಮಧ್ಯ ವಿರಾಮಕಾಲದಲ್ಲಿ ಸ್ವಲ್ಪ ಹಿಂದೀ ಭಾಷಾ ಅಭ್ಯಾಸಮಾಡಿರುವೆ ನನ್ನ ನಾಡು ಕನ್ನಡದೇಶವಲ್ಲವಾದರೂ ತಿರುವಲ್ಲಿಕ್ಕೇಣಿ ಗೊಲ್ಲರ ಕನ್ನಡ ಕೇಳಿ ರೂಢಿಯಿದೆ. ಇನ್ನು ನಿಮ್ಮ ಅನುಗ್ರಹದಿಂದ ಸಂಸ್ಕೃತ ಕಲಿಯುವುದೊಂದು ದೊಡ್ಡ ಕೆಲಸವಲ್ಲ." . . . .

"ನಾನು ಬ್ರಾಹ್ಮಣೇತರ. ನನ್ನದು ನಾಯುಡು ಜಾತಿ. ನನಗೆ ಇಂಟರ ಆಗಿದೆಯೆನ್ನಬಹುದು. ಪರೀಕ್ಷೆ ಪಾಸಾಗಿಲ್ಲವಾದರೂ, ಪಾಸಾದವರಿಗಿಂತ ಚೆನ್ನಾಗಿ

ಇಂಗ್ಲಿಷು ಬರುತ್ತೆ. ನನ್ನ ತಂದೆಯುವರು ಗಿಲ್ಬರ್ಟ ಕಾಲೇಜಿನಲ್ಲಿ ಸಂಸ್ಕೃತ ಪಂಡಿತರಾಗಿದ್ದರು ನಾಲ್ಕು ಭಾಷೆ ನನಗಿಲ್ಲವಾದರೂ ತಮಿಳು ಇಂಗ್ಲಿಷು, ಸರಿಯಾಗಿ ಬರುವುದರಿಂದ ತಿಂಗಳಿಗೆ ೧೦೦ರ ಬದಲು ೫೦ ರೂಪಾಯಿಯ ವೇತನ ಕೊಡಿಸಿದರೆ ಸಾಕು."

"ನಾನು ಆದಿದ್ರಾವಿಡ. ತೀರ ಹಿಂದುಳಿದವನು. ಒಂದು ವರುಷದ ಅವಧಿಯಲ್ಲಿ ಈ ನಾಲ್ಕು ಭಾಷೆಗಳನ್ನು ಕಲಿಯುವಷ್ಟು ಧೈರ್ಯವಿದೆ. ಆದುದರಿಂದ ಆ ಕೆಲಸ ನನಗೇ ಕೊಡಿಸಿರಿ. ವೇತನ ಸ್ವಲ್ಪ ಕಡಿಮೆಯಾದರೂ ಚಿಂತೆಯಿಲ್ಲ."

"ನಾನು ಇಂಗ್ಲೆಂಡ್ ರಿಟರ್ನ್ಡ. ನನ್ನ ಮೂಲ ಊರು ಬೆಂಗಳೂರು. ನಾನು ಮೈಸೂರವನೇ ಅದ ಕಾರಣ—ಮೈಸೂರು ಫಾರ್ ಮೈಸೂರಿಯನ್ಸ್—ತತ್ವದ ಮೇರೆಗೆ ಆ ಕೆಲಸ ನನಗೇ ಕೊಡಿಸಬೇಕೆಂದು ನನ್ನ ಪ್ರಾರ್ಥನೆ."

"ಸ್ವಾಮಿ, ನನ್ನಲ್ಲಿ ವಿಶೇಷ ಯೋಗ್ಯತೆಯಿದೆಯೆಂದು ಹೇಳುವ ಹೆಮ್ಮೆ ನನಗಿರುವುದಿಲ್ಲ. ನನ್ನ ವಿಷಯ ಲಗತ್ತು ಇರಿಸಿದ ಪ್ರಶಂಸಾ ಪತ್ರಗಳಲ್ಲಿಯೇ ಕಾಣಬಹುದು. ನಾನು ತೀರ ಬಡವ. ಚಿಕ್ಕಂದಿನಲ್ಲೆ ನನ್ನ ತಂದೆತಾಯಿಗಳು ಬೇಡವೆಂದರೂ ಮದುವೆ ಮಾಡಿಸಿಬಿಟ್ಟು ಪರಲೋಕಯಾತ್ರೆ ಮಾಡಿದರು. ಈಗ ನನಗೆ ವಯಸ್ಸು ೨೨. ಹೆಂಡತಿ, ನಾಲ್ಕು ಮಂದಿ ಹೆಣ್ಣು ಹುಡುಗಿಯರಿರುವರು. ಆಸ್ತಿ ಮನೆಯಿಲ್ಲ. ಹೀಗಾಗಿ ಸಂಸಾರ-

ತಾಪತ್ರಯದಿಂದ ಆತ್ಮಹತ್ಯದ ನೆನಪು ಗಳಿಗೆಗಳಿಗೆಗೂ ಆಗುತ್ತದೆ. ಬಡವನಾದ ನನ್ನ ಮೇಲೆ ಕೃಪೆಯಿಟ್ಟು ಈ ಕೆಲಸವನ್ನು ನನಗೇ ಕೊಡಿಸುವಿರಾಗಿನಂಬಿದ್ದೇನೆ."

ಇವೇ ಎಲ್ಲ ಮನವಿಗಾರರ ವಿಶೇಷ ನೈಪುಣ್ಯತೆಗಳು. ಐದಾರು ದಿವಸಗಳಲ್ಲಿ ದೊಡ್ಡ ಗುಡ್ಡದಂತ ಮನವಿ ರಾಶಿ! ಅವರು ಆ ಊರಲ್ಲಿರುವಷ್ಟು ದಿನ ಅವರಿಗೆ ಕಟ್ಟಗೆಯ ಚಿಂತೆಯೇ ಇಲ್ಲವಾಯಿತು ಪುಣ್ಯಕ್ಕೆ ಒಂದು ಕೆಲಸವನ್ನು ನಮ್ಮ ಸಾಧುವು ಒಳಿತಾಗಿ ಮಾಡಿದ್ದನು. ತಮ್ಮ ಪತ್ತೆಯನ್ನು ಸಂಪೂರ್ಣವಾಗಿ ಕೊಡದ Mysore C/o Standard ಎಂದು ಬರೆಯಿಸಿದ್ದರಿಂದ ಅವರ ಬಳಿಯಲ್ಲೇ ಉಮೇದುವಾರರ ಸಂತೆ ಜರುಗಿ ತಿರುಗೊಂದು ಸಂತರ್ಪಣೆ ನಡೆಯಿಸಬೇಕಾದ ಪ್ರಸಂಗ ತಪ್ಪಿತು. ಆದರೂ ಕೆಲವರು, ಸ್ಟೇಂಡಾರ್ಡ ಪತ್ರಿಕೆಯ ಸಂಪಾದಕರ ಮನೆ ವರೆಗೆ ಸುತ್ತಿ, ಅಲ್ಲಿಂದ ಸಾಧುವಿನ ಪಾದಸನ್ನಿಧಿಯನ್ನು ಸೇರಿದ್ದೂ ಉಂಟು. ಅಂಥವರಲ್ಲಿ ಹಲವರು ಮೈಸೂರವರೇ ಇದ್ದರು. ಎಂಥ ಪರಿಶ್ರಮ! ಮೈಸೂರಿಂದ ಮದ್ರಾಸಿನ ಮಾರ್ಗವಾಗಿ ತಿರುಗಿ ಮೈಸೂರು ಸೇರುವುದೆಂದರೆ! ಸರಿ. ಈಗ ಉಮೇದುವಾರರ ಮಾತಾಯಿತು. ಬೇಕಾದ ವ್ಯಕ್ತಿಗಳು ಈ ಮನವಿಗಾರರಲ್ಲಿ ಸಿಕ್ಕುವರೆಂಬ ನಂಬುಗೆ ಅವರಿಗಿನ್ನೂ ಹುಟ್ಟಲಿಲ್ಲ. ಏನೋ, ಇದ್ದುದರಲ್ಲಿಯೇ ಹತ್ತಿಪ್ಪತ್ತು ಮನವಿದಾರರನ್ನು ಆರಿಸಿ ಅವರು, ತಮ್ಮೆದುರು ಹಾಜರಾಗಬೇಕೆಂದು ಪ್ರತ್ಯುತ್ತರ ಬರೆದರು. ಪತ್ರದ

ಬೆನ್ನಿಗೇ ಉಮೇದುವಾರರು ಸಿದ್ಧರಾದರು. ಅವರಿಗೂ ಮುಂದೆ ಅವರ ಪ್ರಶಂಸೆಮಾಡಲು, ಸಾಧುಗಳ ಪರಿಚಯವನ್ನು ಒಂದಲ್ಲೊಂದು ರೀತಿಯಿಂದ ಮಾಡಿಕೊಂಡ ಗುರುತಿನ ಜನರು. ಅಂತು ಅವರಲ್ಲಿ ನಾಲ್ಕು ಮಂದಿಯನ್ನು ಅತಿಕಷ್ಟದಿಂದ ಆರಿಸಿದರೆ, ಉಳಿದವರು "ನಾವು ಲಂಕ್ಕೆ ಬರುವೆವು, ಜಂಕ್ಕೆ ಬರುವೆವು."— ಎಂದು ಮಾರಾಮಾರಿಗೆ ತೊಡಗಿದರು.

ಲಕ್ಷ್ಮಿದೇವಿಯರ ಕಣ್ಣು ಅಲ್ಲೇ ತೆರೆಯಿತು. ಪರಾಕ್ರಮಿ ಪ್ರಾಪಂಚಿಕರ ಆರ್ಥಿಕವಿಚಾರ ಹೇಗಿದೆಯೆಂದು ಹೊಳೆಯಿತು. ಅವಳು ಅಲ್ಲೇ ತನ್ನ ಸಮಿತಿಯ ಕಾರ್ಯಕ್ರಮ ತೊಡಗಿದಳು ಪರರ ಚಾಕರಿ ಮಾಡಲು, ನಾಲ್ಕು ಸ್ಥಾನವಿದ್ದರೆ, ೪೦,೦೦೦ ಮಂದಿ ಮುಂದೆ ಬರುವುದೆಂದರೇನೆಂದು ಅವಳಿಗೆ ಆಶ್ಚರ್ಯವಾಯಿತು. ಅದೂ ಅಲ್ಲದೆ ಎಲ್ಲಾ ವಿದ್ಯಾವಂತರೇ! ಅವರ ಮನವಿಯನ್ನು ಓದಿದಲ್ಲಿ ಭಿಕ್ಷಾಘೋರಣೆಯೇ ವಿದ್ವಾಂಸರ ಲಕ್ಷಣವೆಂದು ತೋರಿತು.

ಅವಳು ಬಂದೊಬ್ಬ ಉಮೇದುವಾರನನ್ನು ಹಿಡಿದು ಕೆಲವು ಪ್ರಶ್ನೆಗಳನ್ನು ಕೇಳಿದಳು.

ಲಕ್ಷ್ಮಿ:—ನೀವೆಲ್ಲಾ ವಿದ್ಯಾವಂತರೇನು?

ಉಮೇದುವಾರ:— ಅಹುದು.

ಲಕ್ಷ್ಮಿ:—ಏನೇನು ವಿದ್ಯೆಯಾಗಿದೆ?

ಉ:— ನಾನು ಬಿ. ಎ., ಇವನು ಇಂಟರ್, ಇವನು ಎಮ್. ಎ. ಹೀಗೆಲ್ಲಾ ಪಾಸುಮಾಡಿರುವೆವು.

ಲಕ್ಷ್ಮಿ:—ನಿಮಗೆ ವಿದ್ಯೆ ಕೊಡಿಸಿದವರಾರು?

ಉ. ೧:—ಸರಕಾರದವರು.

ಉ. ೨:—ಸರಕಾರದವರೇನು ಮಣ್ಣು. ಅವರು ಶಾಲೆಗಳನ್ನು ತೆರೆದರು; ನಾವು ಹಣಕೊಟ್ಟು ಕುರಿಗಳಂತೆ ಅಲ್ಲಿ ನುಸುಳಿದೆವು.

ಲಕ್ಷ್ಮಿ:—ನೀವು ಹೀಗೆ ಭಿಕ್ಷಾವೃತ್ತಿಯಲ್ಲಿ ಮುಂದಾಗಲು ಕಾರಣ?

ಉ:—ನಾವೆಲ್ಲಿ ಭಿಕ್ಷೆಬೇಡಿದೆವು? ನಾವೇನು ಬೆಗ್ಗರ್ಸ್ ಅಲ್ಲ. ಹಾಗೆಂದರೆ ನಮಗೆ ಅಪಮಾನ ಮಾಡಿದಂತೆ!

ಲಕ್ಷ್ಮಿ:—ನಿಮ್ಮ ಮನವಿಯಲ್ಲೆಲ್ಲಾ ಬರೆದುದೇನು ನೋಡಿ. 'ನಿಮ್ಮ ಅತ್ಯಂತ ವಿಧೇಯ!' ಕಾಣುವ ಮೊದಲೇ ಅಷ್ಟು ವಿಧೇಯತನದ ಒಪ್ಪಿಗೆ. 'ನನಗೇ ಈ ಕೆಲಸ ಕೊಡಿಸಬೇಕೆಂದು ಬೇಡುವೆ'—ಇವೆಲ್ಲಾ ಭಿಕ್ಷಾಟನೆಯ ಲಕ್ಷಣಗಳಲ್ಲವೇನು?

ಉ:—ಅಲ್ಲಿ ಬರದಿರುವುವೆಂದು ನಾವು ಭಿಕ್ಷುಕರಲ್ಲ; ಹಾಗೆ ಬರೆಯುವುದು ಲೋಕರೂಢಿ.

ಕುಬೇರ:- ಇರಲಿ, ನಿಮ್ಮಲ್ಲಿ ವಿದ್ಯಾವಂತರೆಲ್ಲಾ ಹೀಗೆ ಪರಾಶ್ರಯಕ್ಕೆ ಬೀಳುವರೇ?

ಉ. ೧:– ವಿದ್ಯೆ ಕಲಿಯುವುದೇ ಅದಕ್ಕೆ. ದುಡ್ಡಿಗಾಗಿ ಅಲ್ಲದಿದ್ದರೆ ವಿದ್ಯೆ ಯಾರಿಗೆ ಬೇಕು?

ಕುಬೇರ:—ಹಾಗಾದರೆ ನಿಮ್ಮೆಲ್ಲರಿಗೂ, ಹಣ ಸಿಗುತ್ತಿದೆಯೇ? ಯಾವ ಅರಸನು ಕೊಡುತ್ತಿರುವನು?

ಉ. ೨:— ಅರಸನೇನು ಕೊಡುವುದು! ವಿದ್ಯೆ ಕಲಿತಿರುವೆವು, ನೂರಕ್ಕೊಬ್ಬನಿಗೆ ಅಲ್ಲಿ ಇಲ್ಲಿ ಒಂದು ಚಾಕರಿ ಸಿಗುವುದು ಉಳಿದವರ ಅವಸ್ಥೆ— ಉಪವಾಸ.

ಚಂದ್ರ:— ರಾಜಾಶ್ರಯ?

ಉ ೩:— ಖರ್ಚುಮಾಡಿಸಿ ಈ ಮೂರಕ್ಷರ ಹೇಳಿ ಕೊಟ್ಟದ್ದು.

ಚಂದ್ರ:— ಕಲಿತ ವಿದ್ಯೆಯು ಉಣ್ಣುವ ಹಾದಿ ತೋರಿಸದೇನು?

ಉ. ೨: – ಬರೇ ಓದುಬರಹದಿಂದ ಹೊಟ್ಟೆ ತುಂಬುವುದೇ?

ಚಂದ್ರ: ಹಾಗಾದರೆ ಅದನ್ನೇಕೆ ತಬ್ಬಿಕೊಂಡಿರಿ?

ಉ. ೨:— ಜೀವನಕ್ಕೆ ಬೇರೆ ಗುರಿ ಕಾಣದ್ದರಿಂದ.

ಈ ವಿಚಾರಣೆ ನಡೆಯುವಾಗ ವಿದ್ಯಾಸಮಿತಿಯ ಅಧ್ಯಕ್ಷಳಾದ ಸರಸ್ವತಿಯು ಸ್ವಸ್ಪಷ್ಟಕ್ಕೆ ನಗುತ್ತಿದ್ದಳು. "ಚಾಕರಿಗಾಗಿ ವಿದ್ಯೆ ಕಲಿಯುವವರ" ಜಾಣ್ಮೆ ನೋಡಿ ಅವಳು ಬೆರಗಾದಳು.

ಕೊನೆಗೆ ಸಮಿತಿಯವರಿಗೆ ನಾಲ್ಕು ಜನ ಭಾಷಾಂತರಕರ್ತರು ಸಿಕ್ಕಿದರು ಅವರು ಯಥಾರ್ಥ ಭಾಷಾಂತರಿಸುವರೋ, ಸ್ವಕಪಿತಗಳನ್ನುರಚಿಸುವರೋ, ಎಂಬ ಅಂಜಿಕೆ ಬೇರೆಯಿದ್ದರೂ, ಅಂತು ಕಾರ್ಯ ತೊಡಗಲು ಮಾರ್ಗವಾಯಿತೆಂದು ಸಮಿತಿಯವರು ಸಂತೋಷಪಟ್ಟರು ಇನ್ನು ಆಯಾಯ ಸಮಿತಿಯವರ ತಾಪ,

ಅನುತಾಪ, ಪ್ರತಾಪಗಳನ್ನೆಲ್ಲಾ ಬೇರೆ ಬೇರೆಯಾಗಿ ಬಣ್ಣಿಸುವೆವು. ಸಮಿತಿಯವರ ಬಾಯಿಯಿಂದ ಹೊರಟ ಪ್ರಶ್ನಾವಳಿಗಳಿಗೆ ನಮ್ಮ ಲೇಖಕರೂ ಉತ್ತರಿಸಬಾರ ದೆಂದಿಲ್ಲ ಇಷ್ಟೆ, ಅವರೇನೂ ನಿಮ್ಮ ಉತ್ತರಗಳನ್ನು ಬರೆದುಕೊಳ್ಳಲಾರರು; ಆದರಿಂದ ನಿಮಗೆ ಬಂದ ನಷ್ಟ ವೇನು? ಅವರಿಗೆ ನಿಮ್ಮ ಸಾಕ್ಷ್ಯಗಳನ್ನಿರಿಸಿಕೊಳ್ಳುವ ಯೋಗ್ಯತೆಯಿಲ್ಲವೆಂದರಾಯಿತು.

---

## ಪ್ರಕರಣ ೧೧

## ವರ್ಣಸಂಕರ.

ವಿಶ್ವಾಮಿತ್ರ, ವಸಿಷ್ಠ, ಯಮಧರ್ಮರ ಸಮಿತಿಯು ಚಾಮುಂಡಿ ನಗರದಲ್ಲಿಯೇ ತಮ್ಮ ಕಲಸವನ್ನು ತೊಡ ಗಿತು. ಸಂತರ್ಪಣೆ ನಗರದಲ್ಲಿ ಅಡುಗೆಮನೆಗಳ ಸಂಖ್ಯೆ ಯೇ ಅವರಿಗೆ ಬೆದರಿಕೆಯನ್ನುಂಟುಮಾಡಿಸಿತು. ಸ್ಮಾರ್ಥ, ವೈಷ್ಣವ, ವೀರಶೈವ, ಒಕ್ಕಲಿಗ . . . ಎಂದು ನೂರೆಂಟು ಜಾತಿಯವರಿಗೆ ನೂರಹತ್ತು ಅಡುಗೆಮನೆಗಳ ವ್ಯವಸ್ಥೆನಡೆದಿತ್ತು. ಇವೆಲ್ಲಾ ಭಿನ್ನ ಭಿನ್ನ ವಿಧದ ಪಕ್ವಾನ್ನಗಳ ಸಲುವಾಗಿ ಎಂದು ಅವರ ತಿಳುವಳಿಕೆ ಯಾಗಿತ್ತು. ಆದರೆ, ಎಲ್ಲಾ ಕಡೆಗಳಲ್ಲೂ ಅವೇ ಪಕ್ವಾ ನ್ನಗಳ ತಯಾರಿನಡೆಯುತ್ತಿರುವುದನ್ನು ಕಂಡು, ಒಬ್ಬ ಅಡುಗೆಯವನನ್ನು ಪ್ರಶ್ನಿಸತೊಡಗಿದರು.

ವಸಿಷ್ಠ:—ಇಷ್ಟೆಲ್ಲಾ ಅಡುಗೆಮನೆಗಳೇಕೆ? ಎಲ್ಲ ವನ್ನೂ ಒಂದೇಕಡೆಯಲ್ಲಿ ತಯಾರಿಸಿದರೆ ಶ್ರಮ ಉಳಿ ಯುವುದಲ್ಲ.

ಅಡುಗೆಯವ:—ಎಲ್ಲಾ ಒಂದೇ ಕಡೆಯಲ್ಲಾಗು ವುದೆಂದರೇನು ಸ್ವಾಮಿ! ಇಲ್ಲಿ ಎಷ್ಟು ಅಡುಗೆಮನೆ ಗಳಿರುವುವೋ ಅಷ್ಟೇ ಜಾತಿಗಳಿವೆ. ಒಬ್ಬರು ಇನ್ನೊ ಬ್ಬರಲ್ಲಿ ಊಟಮಾಡುತ್ತಾರೆಯೇ?

ವಿಶ್ವಾಮಿತ್ರ:—ಉಂಡರೇನು?

ಅಡುಗೆ:—ಉಂಡರೆ-ಜಾತಿಬಹಿಷ್ಕಾರ. ನೀವು ಸಾಧುಗಳು, ನಿಮಗೆ ಜಾತಿಗಳಿಲ್ಲ-ಎಲ್ಲರೂ ಸರಿಯೇ. ಪ್ರಾಪಂಚಿಕರು ಹಾಗೆ ಮಾಡಿದರೆ ವರ್ಣಸಂಕರ ವಾದೀತು.

ವಿಶ್ವಾಮಿತ್ರ:—ವರ್ಣಸಂಕರವೆಂದರೇನು?

ಅಡುಗೆಯು:-ಒಂದು ಜಾತಿಯವರು ಇನ್ನೊಂದು ಜಾತಿಯವರಲ್ಲಿ, ಊಟಮಾಡುವುದು, ಮದುವೆಗಿದುವೆ ನಡೆಯಿಸುವುದು-ಹೀಗೆಲ್ಲಾ ಮಾಡಿದರೆ ವರ್ಣಸಂಕ ರವಾಗುತ್ತದೆ.

ವಿಶ್ವಾಮಿತ್ರ:—ವರ್ಣವೆಂದರೇನು?

ಅಡುಗೆ:—ಯಾರಿಗೆ ಗೊತ್ತು ಸ್ವಾಮಿ, ನೋಡಿ ಅಲ್ಲೊಬ್ಬ ಶಾಸ್ತ್ರಿಗಳು ಬರುತ್ತಾರೆ. ಅವರನ್ನು ಕೇಳಿರಿ. (ಅಷ್ಟರಲ್ಲಿ ಶಾಸ್ತ್ರಿಗಳ ಸವಾರಿಯು ಆಗಮಿಸಿತು.)

ವಿಶ್ವಾಮಿತ್ರ:—ಶಾಸ್ತ್ರಿಗಳೇ, ವರ್ಣಸಂಕರವೆಂದ ರೇನು?

ಶಾಸ್ತ್ರಿ:—ಸ್ವಾಮಿ, ಪಂಡಿತರಾದ ನೀವೇ ಇದನ್ನು ಕೇಳಿದರೆ! ನಿಮಗಿಂತ ನನಗೆ ಹೆಚ್ಚು ತಿಳಿದಿದೆಯೇ?

ವಿಶ್ವಾಮಿತ್ರ:—ಅಲ್ಲ, ಈ ಪ್ರಾಂತದಲ್ಲಿನ ರೂಢಿಗಳ ಅರಿವು ನಮಗಿಲ್ಲ. ಅದಕ್ಕಾಗಿ ಹೇಳಿರೆಂದೆವು.

ಶಾಸ್ತ್ರಿ:—ಒಂದು ಜಾತಿಯವರು ಇನ್ನೊಂದು ಜಾತಿಯವರಲ್ಲಿ ಉಂಡರೆ, ಸಂಬಂಧ ಬೆಳೆಯಿಸಿದರೆ ವರ್ಣಸಂಕರವಾಗುವುದು. ಬಿಡಿ ಸ್ವಾಮಿ, ಈ ಕಾಲದಲ್ಲಿ ಎಲ್ಲಾ ಹೋಯಿತು—ಬ್ರಾಹ್ಮಣರು ಲಿಂಗಾಯತರಲ್ಲಿ ಕಾಫಿ ಕುಡಿಯುತ್ತಾರೆ; ಲಿಂಗಾಯತರು ಬ್ರಾಹ್ಮಣರಲ್ಲಿ ಕಾಫಿ ಕುಡಿಯುತ್ತಾರೆ. ಈಗೀಗ ಇಂಗ್ಲಿಷು ವಿದ್ಯೆ ಬಂದು ಗಂಡು ಹೆಣ್ಣು ಎರಡೇ ಜಾತಿಗಳು ಉಳಿದಿವೆ.

ವಸಿಷ್ಠ:—ಇರಲಿ, ನಿಜವಾಗಿ ಎಷ್ಟು ಜಾತಿಗಳಿರುವುವು?

ಶಾಸ್ತ್ರಿ:—ಅದರಲ್ಲಿ 'ನಿಜವಾಗಿ' ಅಂದರೇನು! ಲೆಕ್ಕ ಹಾಕಿದರೆ ನಮ್ಮ ಬ್ರಾಹ್ಮಣರಲ್ಲೇ—ಸ್ಮಾರ್ಥ, ವೈಷ್ಣವ, ಶ್ರೀವೈಷ್ಣವ ಅಂತ—ಇನ್ನು ಅದರಲ್ಲಿ ಅಯ್ಯಂಗಾರಿ, ಹೆಬ್ಬಾರಯ್ಯಂಗಾರಿ, ಹೀಗೆ ಮೈಸೂರಲ್ಲೇ ಒಂದು ನೂರು ಜಾತಿಗಳಿವೆ. ಇನ್ನು ಹಾಗೆ ಒಕ್ಕಲಿಗರು, ಕುರುಬರು, ಗೌಡರು, ಅವರು ಇವರು ಅಂತ, ಅವರೊಳಗಿನ ಒಳಪಂಗಡ ಅಂತ, ಒಟ್ಟು ಮುನ್ನೂರು ನಾನ್ನೂರು ಜಾತಿಗಳಿವೆ. ಆಯಾಯ ಜಾತಿವ್ಯವಹಾರಗಳೆಲ್ಲಾ ಬೇರೆ ಬೇರೆ. ಅದಕ್ಕೇ ಅಲ್ಲವೆ—ಇಲ್ಲಿ ಜಾತಿವಾರು ವ್ಯವಸ್ಥೆ ಮಾಡಿರೋದು.

ವಿಶ್ವಾ:—ಅದನ್ನೇ ಕಂಡು ಈ ಪ್ರಶ್ನೆ ಕೇಳಿದುದು. ಇರಲಿ ಶಾಸ್ತ್ರದಾತೆ ವರ್ಣಗಳೆಷ್ಟು?

ಶಾಸ್ತ್ರಿ: - ಮುಖ್ಯವಾಗಿ ನಾಲ್ಕು ಅದು ಜಗಜ್ಜನಿತವೇ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಂತ. ಇವರನ್ನು ಬಿಟ್ಟು—ಉಳಿದವರೆಲ್ಲಾ ಚಾಂಡಾಲರು, ಮ್ಲೇಂಚ್ಛರು, ಅಂತ.

ವಿಶ್ವಾ: ಇದೊಂದು ಐದನೇ ಜಾತಿ ಹಿಂದಿತ್ತೇನು ಸ್ವಾಮಿ?

ಶಾಸ್ತ್ರಿ:—ಶಾಸ್ತ್ರದಲ್ಲಿ ಕಾಣೋದಿಲ್ಲಾದರೂ ಇದ್ದಿರಬೇಕು ಅಂತ ಲೆಕ್ಕ

ವಸಿಷ್ಠ:—ಈಗ·ನೀವನ್ನುವಂತೆ ನಾಲ್ಕು ವರ್ಣದ ಬದಲಿಗೆ ನಾನ್ನೂರು ಜಾತಿಗಳಾದುವಲ್ಲಾ.

ಶಾಸ್ತ್ರಿ:—ಸಹಜವೇ, ಮನು ಅನ್ನುವಂತೆ ಲೋಮ, ಅನುಲೋಮ, ಪ್ರತಿಲೋಮ, ಮಹಾಲೋಮ, ವಿಲೋಮ, ಗಿಲೋಮ—ಲಗ್ನಗಳಾಗಿ ಆ ಸಂಬಂಧಗಳಿಂದ ಇಷ್ಟೆಲ್ಲಾ ಜಾತಿಗಳಾದುವು ಒಂದಾವೃತ್ತಿ ಬೇರೆ ಜಾತಿ ಆದ ಮೇಲೆ ತಿರುಗಿ ಕೂಡೋದು ಹೇಗೆ! ಪಂಜರದಿಂದ ಹಾರಿದ ಹಕ್ಕಿಗಳು ತಿರುಗಿ ಅಲ್ಲಿಗೆ ಬರೋದು ಉಂಟೇ?

ವಿಶ್ವಾ: ಈ ಲೋಮ, ಅನುಲೋಮ ವಿವಾಹಗಳು ಹಿಂದಿನಕಾಲದಲ್ಲೂ ಇದ್ದುವು ಸ್ವಾಮಿ. ಆಗಲೂ ನಾಲ್ಕು ವರ್ಣಗಳೇ ಇದ್ದುವು.

ಶಾಸ್ತ್ರಿ:—ಅದು ತ್ರೇತಾಯುಗದ ವಿಚಾರ. ಇದು ಕಲಿಯುಗವಷ್ಟೆ. ಯುಗಧರ್ಮವೊಂದು ಬೇರೆ ಇದೆಯಲ್ಲಾ.

ವಿಶ್ವಾ:—ಧರ್ಮ ಎನ್ನುವುದು ನಿಮ್ಮದೋ, ದೇವ ರಿಚ್ಛೆಯೋ?

ಶಾಸ್ತ್ರಿ:—ಛೇ, ಛೇ, ನಮ್ಮದೆಲ್ಲಿ!—ಅ ಶ್ರೀಮನ್ನಾರಾಯಣನ ಕೆಲಸ ಅದು.

ವಿಶ್ವಾ:—ಯುಗಧರ್ಮ—?

ಶಾಸ್ತ್ರಿ:—ಅದೇನು ಸ್ವಾಮಿ ಕಾಲಗತಿ ಬದಲಾದ ಹಾಗೆ ಅದೂ ಬದಲಾಗುತ್ತೆ.

ವಿಶ್ವಾ:—ನೀವೇ ಅಂದಿರಿ; ಈಗೀಗ ಒಂದು ಜಾತಿಯವರು ಇನ್ನೊಂದು ಜಾತಿಯವರಲ್ಲಿ ಬಳಕೆ ನಡೆಯಿಸುತ್ತಾ ಇದ್ದಾರೆ ಎಂತ. ಅದು ಇಂದಿನ ಯುಗಧರ್ಮವೆಂದು ತಿಳಿದುಕೊಂಡು ಏಕೆ ಸುಮ್ಮನಿರಬಾರದು?

ಶಾಸ್ತ್ರಿ:—ಅದೆಲ್ಲಿ ಆಗುತ್ತೆ ಸ್ವಾಮಿ? ಅನಾದಿಯಿಂದ ನಡೆದುಬಂದದ್ದು ಮುಖ್ಯವಾಗಿ ಅವರವರ ಧರ್ಮ ಅವರವರಿಗೆ ಕತ್ತೆಯನ್ನು ಕುದುರೆ ಮಾಡೋದಕ್ಕಾಗುತ್ತದೆಯೇ? ಕುದುರೆಯನ್ನು ಕತ್ತೆ ಮಾಡೋದಕ್ಕಾಗುತ್ತದೆಯೇ?

ವಿಶ್ವಾ:—ಕುದುರೆ ಕತ್ತೆಯೆಂದರೇನು ಸ್ವಾಮಿ?

ಶಾಸ್ತ್ರಿ:—ಬ್ರಾಹ್ಮಣ ಶೂದ್ರ ಅಂತ ತಿಳಕೊಳ್ಳಿ.

ವಿಶ್ವಾ:—ಅವರು ಕುದುರೆ ಕತ್ತೆಗಳಿಗೆ ಸಮಾನ ಹೇಗೆ? ಅವರಲ್ಲಿ ಕುದುರೆ ಕತ್ತೆಗಳಂತ ರೂಪಭೇದವಿದೆಯೇ?

ಶಾಸ್ತ್ರಿ:—ಅದಿಲ್ಲ ನಾನು ರೂಪದ ವಿಷಯ ಅನ್ನಲಿಲ್ಲ. ಜಾತಿವಿಷಯ ಅಂದೆ. ಒಂದು ಜಾತಿ

ಯಲ್ಲಿ ಹುಟ್ಟಿ ಇನ್ನೊಂದು ಜಾತಿಯುವನಾಗುವದು ಅಂದರೆ ಇನ್ನೊಂದು ಜನ್ಮದಲ್ಲಿ.

ವಿಶ್ವಾ:—ಜನ್ಮದಲ್ಲಿ! ಜಾತಿ ಜನ್ಮದ ಮೇಲೆ ಹೊಂದಿದೆಯೇ? ಹಾಗಿದ್ದರೆ ಒಂದು ಜಾತಿಯುವ ಇನ್ನೊಂದು ಜಾತಿಯುವನಲ್ಲಿ ಉಂಡರೆ, ವರ್ಣಸಂಕರ ಆಗುವುದು ಹೇಗೆ?

ಶಾಸ್ತ್ರಿ:—ಕರ್ಮ ಕೆಟ್ಟಿತು.

ವಿಶ್ವಾ:—ವರ್ಣಗಳು ಬರುವುದು ಕರ್ಮದಿಂದಲೋ, ಜನ್ಮದಿಂದಲೋ? ನಿಮ್ಮ ಶಾಸ್ತ್ರ ಏನು ಹೇಳುತ್ತದೆ.

ಶಾಸ್ತ್ರಿ:—ಅದು ಕರ್ಮದಿಂದ!

ವಿಶ್ವಾ:—ನಿಮ್ಮ ಜಾತಿ ಯಾವುದು?

ಶಾಸ್ತ್ರಿ:—ಅದು ಕೇಳುವುದೇನು ಸ್ವಾಮಿ. ಬ್ರಾಹ್ಮಣ ನಾನು?

ವಿಶ್ವಾ:—ಬ್ರಾಹ್ಮಣನ ಕರ್ಮ?

ಶಾಸ್ತ್ರಿ:—ಬ್ರಹ್ಮಕರ್ಮ.

ವಸಿಷ್ಠ:—ಬ್ರಹ್ಮಕರ್ಮ ಅಂದರೆ.

ಶಾಸ್ತ್ರಿ:—ಅಂದರಿಷ್ಟೆ: ದೇವರನ್ನು ತಿಳಿಯುವುದು ಅಂತ. ಮುಖ್ಯವಾಗಿ ಬ್ರಹ್ಮಜ್ಞಾನೇತಿ ಬ್ರಾಹ್ಮಣ:—ಆದಕ್ಕೆ ಅಲ್ಲವೆ ಬ್ರಾಹ್ಮಣನಾದವನು ಜಪತಪ, ಹೋಮಧೂಮ, ಸ್ನಾನಗೀನ, ಯಜ್ಞಗಿಜ್ಞ, ಸದಾ ಮಾಡುತ್ತ ಇರಬೇಕು ಅಂತ. ಒಟ್ಟಾರೆ ಕರ್ಮ ಶುದ್ಧವಾಗಿರಬೇಕು.

ವಸಿಷ್ಠ:—ಸರಿ, ನೀವು ಅದನ್ನು ಮಾಡುವವರು ಎಂದು ಕಾಣುವುದು. ನಿಮಗೆ ಬ್ರಹ್ಮಜ್ಞಾನವಾಗಿದೆಯೇ?

ಶಾಸ್ತ್ರಿ:–ಅದೆಲ್ಲಾ ಕಲಿಯುಗದಲ್ಲಿ ಎಲ್ಲಿ ಸಾಧ್ಯ ಸ್ವಾಮಿ. ಏನೋ ಹೊಟ್ಟೆಪಾಡಿನ ಹೋರಾಟದಲ್ಲಿ ಸಿಕ್ಕಿದಷ್ಟು ಅವಕಾಶದಲ್ಲಿ ಸ್ನಾನಗೀನ ಆಹ್ನಿಕಗಿಹ್ನಿಕ ಮಾಡುವುದಷ್ಟೆ.

ವಸಿಷ್ಠ:–ಚೇಷ್ಟೆಮಾಡುವೆವೆಂದು ತಿಳಿಯಬೇಡಿರಿ. ಏನೋ ಊರಿನ ಸಂಗತಿ ಎಲ್ಲಾ ತಿಳಿಯುವ ಎಂದು ಕುತೂಹಲವಾದುದರಿಂದ ಕೇಳಿದೆವು ನಿಮಗೆ ಬ್ರಹ್ಮನ ಯೋಚನೆ ಮನಸ್ಸಿನಲ್ಲಾದರೂ ಬಲವಾಗಿದೆಯೇ!

ಶಾಸ್ತ್ರಿ:—ಹಾಗೆ ಮನದಲ್ಲಿ ಬ್ರಹ್ಮನ ಯೋಚನೆ ಗಟ್ಟಿಯಾಗಿದ್ದರೆ, ಸಂಸಾರ ಮಾಡಿಕೊಂಡಿರೋದು ಹ್ಯಾಗೆ? ನಾವು ನಿಮ್ಮ ಹಾಗೆ ಕಾಷಾಯ ತೊಡಬೇಕಾದೀತು. ಅಲ್ಲ, ಎಲ್ಲವರೂ ಬ್ರಹ್ಮ ಎಂದು ಕೂಗಿದರೆ ಈ ಕಲಿಯುಗದಲ್ಲಿ ಅವ ಸಿಕ್ಕುತ್ತಾನೆಯೇ!

ವಿಶ್ವಾಮಿತ್ರ:–ನೀವೇ ಅನ್ನುತ್ತೀರಿ ಕರ್ಮ ಶುದ್ಧವಿರಬೇಕು; ಬ್ರಹ್ಮಜ್ಞಾನ ಬೇಕು—ಬ್ರಾಹ್ಮಣನಾಗಲು ಅಂತ. ನೀವೇ ಅನ್ನುವಿರಿ ಕಲಿಯುಗದಲ್ಲಿ ಅದೆಲ್ಲ ಎಲ್ಲಿ ಸಾಧ್ಯ–ಎಂದು. ಹೀಗಿದ್ದರೆ ನೀವು ಬ್ರಾಹ್ಮಣರೆಂದು ಹೇಳುವ ಧೈರ್ಯವೇನು ಸ್ವಾಮಿ?

ಶಾಸ್ತ್ರಿ:—ಏನು ಸ್ವಾಮಿ! ಸುಮ್ಮನೆ ಕೇಳುತ್ತಾ ಇದ್ದೆ—ಎಂದರೆ ಹಾಸ್ಯಮಾಡುವಿರಾ? ಇಷ್ಟು ಜನರ ಮುಂದೆ ನನ್ನನ್ನು–ಬ್ರಾಹ್ಮಣ–ಅಲ್ಲ ಅನ್ನುವ ಧೈರ್ಯ

ಯಾರಿಗೆ? ಈ ಯಜ್ಞೋಪವೀತ ನೋಡಿ ಮಾತನಾಡಿ ಸ್ವಾಮಿ.

ವಸಿಷ್ಠ:—ನಮಗೆ ಈ ಪ್ರಾಂತದ ವಿಚಾರ ತಿಳಿಯಲು ಕುತೂಹಲವಾಗಿ ಕೇಳಿದೆವು ನಾವು ಕಾಡಿನಲ್ಲೆ ಹುಟ್ಟಿ ಅಲ್ಲೆ ಬಳೆದು, ಅಲ್ಲೇ ನಮ್ಮ ಹಾದಿಯಲ್ಲಿದ್ದವರು. ಏನೋ ಸದಾನಂದನು ಬರ ಹೇಳಿದನು ಎಂದು ಬಂದೆವು ಬಂದ ಮೇಲೆ ಆಯಾಯ ದೇಶದ ರೂಢಿ ಹೇಗಿದೆಯೆಂದು ತಿಳಿಯು ವುದು ಬೇಡವೇ? ಎಂದು ತೋರಿತು; ಒಂದೊಂದಾಗಿ ಕೇಳಿದೆವು.

ಆದರೂ ಶಾಸ್ತ್ರಿಯ ಕೆರಳಿದ ಮೋರೆ ಶಾಂತವಾಗ ಲಿಲ್ಲ. ಅವನು ತಿರುತಿರುಗಿ—'ಸಾಕು ಸ್ವಾಮಿ ನಿಮ್ಮ ಪರಿಹಾಸ್ಯ'— ಎಂದು ಒದರುತ್ತಿದ್ದ. ಇವನ ಸ್ವರ ಕೇಳಿ ದೂರ್ವಾಸರ ರೋನು ನೆಟ್ಟಗಾಗಿ ಅವನೂ ಅಲ್ಲಿಗೆ ಬಂದನು ಸಾಧು ಸದಾನಂದನೂ ಬಂದನು. ಆಗ ಶಾಸ್ತ್ರಿಗಳ ಫಿರ್ಯಾದಿ ಸದಾನಂದನಲ್ಲಿ ಮುಟ್ಟಿತು. "ಏನು ಸ್ವಾಮಿ, ಇವರು ಇಷ್ಟು ಜನರೆದುರಿಗೆ ನೀವು ಬ್ರಾಹ್ಮಣರೆನ್ನುವ ಧೈರ್ಯ ಹೇಗೆ?" ಎಂದು ಕೇಳಿದ ರಲ್ಲಾ ಸ್ವಾಮಿ; ಎಂಥ ಬ್ರಾಹ್ಮಣಾಪಮಾನ! ಈ ಮಾತು ಒಬ್ಬ ಅಬ್ರಾಹ್ಮಣನ ಕೈಗೆ ಸಿಕ್ಕಿತು ಅಂದರೆ ನಾಳೆ "ಮೈಸೂರು ಧೂಮಕೇತು" (Comet)ವಿನಲ್ಲಿ ಬರುತ್ತೆ—'ಸಾಧುಗಳು ಶಾಸ್ತ್ರಿಗಳ ಬ್ರಾಹ್ಮಣ್ಯ ಕೊಡ ವಿದರು' ಅಂತ— ಅಗ್ರಲೇಖ."

ದೂರ್ವಾಸ:— ಅಬ್ರಾಹ್ಮಣರು ಎಂದು ಒಂದು ಜನಾಂಗವಿದೆಯೇ ಸ್ವಾಮಿ.

ಶಾಸ್ತ್ರಿ:— ನಿಮ್ಮದೇನು ಪರಿಹಾಸ್ಯ ಸ್ವಾಮಿ?

ದೂರ್ವಾಸ:— ಪರಿಹಾಸ್ಯವಲ್ಲ ಸ್ವಾಮಿ. ತಿಳಿಯದೆ ಕೇಳಿದೆ.

ಶಾಸ್ತ್ರಿ:— ಬ್ರಾಹ್ಮಣರಲ್ಲದವರೆಲ್ಲಾ ಅಬ್ರಾಹ್ಮಣರು ಅಂತ ಅವರಿಗೆ ಬ್ರಹ್ಮ ದ್ವೇಷ ಅಂದರೆ ನೀರು ಕುಡಿದಷ್ಟು ಸಸಾರ. ಮುಖ್ಯವಾಗಿ ಈಗ ನಡೆಯುತ್ತಿರುವುದೇ ಅವರ ಗ್ರಹ.

ದೂರ್ವಾಸ:— ವೇದಗಳು ಸಾರುತ್ತವೆ–ನಾಲ್ಕು ವರ್ಣಗಳು ಸಮಾಜಶರೀರದ ಮುಖ, ಕೈಕಾಲು, ತೊಡೆ, ಪಾದಗಳು ಇದ್ದಹಾಗೆ ಎಂದು! ದೇಹದ ಅಂಗಾಂಗಗಳೇ ಹೀಗೆ ಬಡಿದಾಡಿದರೆ.

ಶಾಸ್ತ್ರಿ:—ಅದೆಲ್ಲಾ ಹಿಂದಿನ ಕಾಲದ ಕಥೆ; ಇನ್ನು ಬರುವ ಹಾಗಿಲ್ಲ. ಈ ಅಬ್ರಾಹ್ಮಣರಿಗೆ, ಬ್ರಾಹ್ಮಣರು ಚಲೋ ಚಲೋ ನೌಕರಿಯಲ್ಲಿದ್ದಾರಲ್ಲ ಅಂತ ಹೊಟ್ಟೆ ಉರಿ.

ದೂರ್ವಾಸ:— ಬ್ರಾಹ್ಮಣರು ಪರರ ನೌಕರಿಗೆ ಹೋಗುವರೇ? ಅದು ಕೇವಲ ಶೂದ್ರವೃತ್ತಿಯಲ್ಲ

ಶಾಸ್ತ್ರಿ:— ಇವರು ತೆಗೆದರು ತಮ್ಮ ಪುರಾಣ ಇವರ ಕಣ್ಣಿಗೆ ಕಲಿಯುಗದ ಪ್ರಥಮಪಾದ ನಡೆಯುವುದು ಕಾಣುವುದಿಲ್ಲ. ಬರೇ ಹಿಂದಿನ ಕಥೆ ಹೇಳುತ್ತಾರೆ. ಸ್ವಾಮಿ ನನ್ನನ್ನು ಬಿಡಿ: ನಾನು ಹೋಗುತ್ತೇನೆ.

ಸದಾನಂದ:— ಹೋಗುವಿರಂತೆ; ಅದಕ್ಕೇನು ಅ ಭ್ಯಂತರ ವಿಶೇಷ ಶ್ರಮಪಟ್ಟಿರಿ— ಇದೋ ತೆಗೆದು ಕೊಳ್ಳಿ ನಿಮ್ಮ ಪರಿಶ್ರಮಕ್ಕೆ—(ಎಂದು ಸ್ವಲ್ಪ ದಕ್ಷಿಣೆ ಕೊಡುವನು )

ಶಾಸ್ತ್ರಿ:— ಏನು ಸುಟ್ಟ ಪರಿಶ್ರಮ ಸ್ವಾಮಿ. ತಮ್ಮ ಧಾರಾಳ ಹಸ್ತ ಕಂಡರೆ ನನಗೇಕೋ ಧಧೀಚಿಯ ನೆನ ಪಾಗುತ್ತೆ ನೀವು ನಾಳೆ ಬೆಳಗಿನ ವರೆಗೆ ಪ್ರಶ್ನೆ ಕೇ ಳುವುದಾದರೂ ನನ್ನಿಂದಾದ ಉತ್ತರಕೊಡಲು ಸಿದ್ಧ ನಿರುವೆ ಸ್ವಾಮಿ

ವಿಶ್ವಾ:—(ಅ) ಇವನ ಬಣ್ಣವೇ ಬದಲಾಯಿತು ಬ್ರಾಹ್ಮಣನು ಕಾಂಚನಪ್ರಿಯನು!

ವಸಿಷ್ಠ:— ಇಂದಿಗೇನು ಕೇಳುವುದಿಲ್ಲ. ಅಂತು ಕೇಳುವುದಿದ್ದರೆ ನಿಮ್ಮಲ್ಲಿಗೇ ಬರುತ್ತೇವೆ.

ಶಾಸ್ತ್ರಿ:— ನೀವು ನನ್ನಲ್ಲಿಗೆ ಬರುವುದೆಂದರೇನು ಸ್ವಾಮಿ! ನಿಮ್ಮ ಅಡಿಯಾಳು ನಾನು. ಈ ಸಾಧು ಸಂತರ ಸೇವೆಮಾಡುವ ಭಾಗ್ಯ ಅನಾಯಾಸವಾಗಿ ದೊರಕಿದ್ದೆಂದರೆ ನನ್ನ ಪೂರ್ವಪುಣ್ಯ ಹೀಗಿರುವಲ್ಲಿ— ಭಾಗೀರಥಿ ಇರುವಲ್ಲಿಗೆ ಹೋಗಿ ಸ್ನಾನಮಾಡುವುದನ್ನು ಬಿಟ್ಟು, ಭಾಗೀರಥಿ ಮನೆಗೆ ಬರಲಿ—ಅನ್ನುವವರುಂಟೇ.

ವಿಶ್ವಾಮಿತ್ರ:—ಸರಿ, ನೀವೀಗ ತತ್ಕಾಲಕ್ಕೆ ಹೋಗಿ ಬನ್ನಿ. ಅವಶ್ಯಬಿದ್ದರೆ ಹೇಳಿಕಳುಹಿಸುವುದಾದರೂ ಹೇಳಿಕಳುಹಿಸುವ. ಆದರೆ ನಾವು ಪರಿಹಾಸ್ಯಮಾ ಡುತ್ತೇವೆಂದು ಸಿಟ್ಟುಮಾಡಬಾರದು.

ಶಾಸ್ತ್ರಿ:—ಹಾಗೆ ಸಿಟ್ಟುಮಾಡಲು ನಾನು ವಿಶ್ವಾಮಿತ್ರನೇನು! ಸ್ವಾಮಿ; ಏನೋ ನಿಮ್ಮ ಉದ್ದೇಶ ತಿಳಿಯದೆ ಸ್ವಲ್ಪ ಸ್ವರ ಬದಲಾಯಿತು. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡಿ.

ವಿಶ್ವಾಮಿತ್ರ:—(ಆ) ಇವನ ತಿರುಮಂತ್ರ ನನಗೇ ಬಂತಲ್ಲಾ.

ಅಂದಿಗೆ ಅಷ್ಟೇ ಸಾಕೆಂದು ಅವರು ಶಾಸ್ತ್ರಿಗಳಿಂದ ರಜಾಪಡೆದು ತಮ್ಮ ಹಾದಿಹಿಡಿದರು. ಇಲ್ಲಿಗೆ ಧರ್ಮ ವಿಚಾರ ಕಾಂಡದ ಜಾತಿ ಧರ್ಮವಿಮರ್ಶೆ ಪ್ರಕರಣವು ಮುಗಿದುದು ಶ್ರೀ ಶುಭಮಸ್ತು.

---

## ಪ್ರಕರಣ ೧೨.

# ಗೋಕರ್ಣ ಮಹಾತ್ಮ್ಯೆ.

ಕ್ಷೇತ್ರಗಳೆಂದರೆ ಧರ್ಮದ ಮೂರ್ತಿಮಂತ ಚಿತ್ರಗಳೆಂದು ನಮ್ಮ ಧಾರ್ಮಿಕ ಸಮಿತಿಯವರ ತಿಳುವಳಿಕೆ. ಆದುದರಿಂದವರು ಇನ್ನು ಕ್ಷೇತ್ರಸಂಚಾರಮಾಡುವ ನಿರ್ಧಾರಮಾಡಿರುವರು. ಇನ್ನವರಿಗೆ ಎಲ್ಲಿ ಹೋದರೂ ಪರಿಚಯದ ಭೀತಿಯಿಲ್ಲ; ಸ್ವಾಗತಮಾಡುವವರಿಗೆ ಕೊರತೆಯಿಲ್ಲ. ಅವರ ತತ್ವಗಳಿಗೆ ನಿತ್ಯಾಚರಣೆಯಲ್ಲಿ ಸರಿವಿರೋಧವಾಗಿದ್ದರೂ, ಅವರ ಆಪ್ತಶಿಷ್ಯರೆಂದು ನಟಿಸಿ, ಅವರನ್ನು ತಮ್ಮ ಅತಿಥಿಗಳನ್ನಾಗಿ ಪೂಜಿಸುವುದರಲ್ಲಿ ನರರು ಶ್ರೇಷ್ಠರು. ಈಗಂತು ಈ ಸಾಧುಗಳ

ವಿಚಾರ ಇಡೀ ಹಿಂದುಸ್ಥಾನದಲ್ಲಿ ಹಬ್ಬಿಬಿಟ್ಟಿದೆ. ಮೈಸೂರಿನ ಸಂತರ್ಪಣೆಯ ದೆಸೆಯಿಂದ ಸಾವಿರಾರು ಮಂದಿಗಳ ಬಾಯಿಯಲ್ಲಿ ಇವರ ಕೀರ್ತಿ ಬಿತ್ತು. ಅಷ್ಟೇ ಅಲ್ಲ, ಸರಕಾರದವರೂ ಇವರ ಕೀರ್ತಿಪ್ರಚಾರಕ್ಕೆ ಬೆಂಬಲವಾದರು. ದೊಡ್ಡ ದಂಗೆಯೆಂದು ಹೆಸರಿಟ್ಟು ಇವರನ್ನು ರಾಜಕೀಯ ಪ್ರಮುಖರನ್ನಾಗಿ ಮಾಡಿದರು. ಇದು ಸ್ವಾತಂತ್ರ್ಯ ಸಂಗ್ರಾಮದ ಕಾಲ. ಸರಕಾರವು ಅನುಗ್ರಹಿಸಿತೆಂದರೆ ಒಬ್ಬನು ಮಹಾ ದೇಶಭಕ್ತನಾಗಲು ಒಂದು ಕ್ಷಣ ಸಾಕು. ಅಂಥ ಅನುಗ್ರಹವು ದೊರೆತ ಬಳಿಕ–ಮಂದಗಾಮಿ, ಮೃದುಗಾಮಿ, ತೀಕ್ಷ್ಣಗಾಮಿ, ಕಠೋರಗಾಮಿ, ಬ್ರಾಹ್ಮಣ, ಅಬ್ರಾಹ್ಮಣ, ನಿಬ್ರಾಹ್ಮಣ, ಹಿಂದೂಯವನ–ಈ ಎಲ್ಲಾ ಧಾರ್ಮಿಕ ರಾಜಕೀಯ ಪಂಗಡದ ಪತ್ರಿಕೆಗಳಲ್ಲೂ, ಅನುಕೂಲ, ಪ್ರತಿಕೂಲ, ಅನಾನುಕೂಲ ವಿಮರ್ಶೆ, ಟೀಕ, ಟಿಪ್ಪಣಿ, ತುಲನೆ, ಖಂಡನೆ, ಮಂಡನೆಗಳಿಗೆ ಅವರು ಒಳಗಾದರು. ಇವರ ಭಾವಚಿತ್ರಗಳನ್ನು ಪ್ರಕಟಿಸದ ಪತ್ರಿಕೆಗಳಿಲ್ಲ. ಹೀಗಿದ್ದ ಬಳಿಕ ಹೋದಲ್ಲಿ ಇವರ ಸ್ವಾಗತಕ್ಕೆ ಕಡಿಮೆಯೇನು!

ಗೋಕರ್ಣ ಕ್ಷೇತ್ರದ ಕಡೆಗೆ ಈ ಧಾರ್ಮಿಕ ಕಮಿಟಿಯವರು ಸಾಗುವವರಾಗಿದ್ದಾರೆ. ಜತೆಯಲ್ಲಿ ದೂರ್ವಾಸ, ಸದಾನಂದನೂ ಸೇರಿದ್ದರು ಬರುವ ಸುದ್ದಿಯನ್ನು ಯಾರಿಗೂ ತಿಳಿಸಲಿಲ್ಲ. ಉಡುಗೆಯು ಅತ್ತ ಸಾಧುಗಳದ್ದೆಂದರೆ ಸಾಧುಗಳದ್ದಲ್ಲ; ಇತ್ತ ಲೌಕಿಕರದ್ದೂ

ಅಲ್ಲ ಇಂಥ ಉಡುಗೆಗಳನ್ನು ಧರಿಸಿ ಮುಂಜಾನೆ ಕಾಲ್ನಡೆಯಿಂದ ಗೋಕರ್ಣ ಮಹಾಕ್ಷೇತ್ರವನ್ನು ನೇರಿದರು. ಇದೇ ಮುಂಜಾನೆಯೇ ನಮ್ಮ ವೈದ್ಯನಾಥಭಟ್ಟನು ಎಲ್ಲಿ ಕಾದು ಕುಳಿತಿದ್ದನೋ! ನಡುದಾರಿಯಲ್ಲೆ ಇವರಿಗೆ ಭೇಟಿಯಾಗಿ "ಸ್ವಾಮಿ, ಎಲ್ಲಾ ಅನುಕೂಲತೆಗಳನ್ನು, ನೀವು ಬರುವಿರೆಂದು ಕೇಳಿ ನಾನಾಗಲೇ ಮಾಡಿಸಿರುವೆ ನಮ್ಮಲ್ಲಿಗೇ ಬರಬೇಕು. ಯಾವತ್ತು ಕ್ಷೇತ್ರವಿಧಿಗಳನ್ನು ಪೂರೈಸಿಕೊಂಡು ಗೋಕರ್ಣೇಶ್ವರನ ಪ್ರಸಾದ ಸ್ವೀಕರಿಸಿ ಚಿತ್ತೈಸುವವರಾಗಬೇಕು, ಎಂದು ಪ್ರಸ್ತಾವನೆಗೆ ತೊಡಗಿದನು. ನಡುವೆ ಸದಾನಂದನು ಬಾಯಿಹಾಕಿ— "ಸ್ವಾಮಿ, ನಾವು ನಿಮ್ಮ ವಿಶ್ವನಾಥಭಟ್ಟರಿಗೆ ಅವರಲ್ಲಿಗೆ ಬರುವೆವೆಂದು ಮೊದಲೇ ಕಾಗದ ಬರೆದಿರುವೆವು. ಆದುದರಿಂದ . . . " ಎನ್ನುವಷ್ಟರಲ್ಲಿ ಅವರಿಗೂ ಚುರುಕಿನ ವೈದ್ಯನಾಥಭಟ್ಟನು- "ಸ್ವಾಮಿ, ಎಂದು ಅವರಿಗೆ ಪತ್ರ ಬರೆದುದು?" ಎಂದು ಕೇಳಿದನು.

ಸದಾನಂದ:— ಇಂದಿಗೆ ಹದಿನೈದು ದಿವಸಗಳ ಹಿಂದೆ. ಅವರಿಂದ ಪ್ರತ್ಯುತ್ತರವೂ ಬಂದಿತ್ತು—'ನಮ್ಮಲ್ಲಿಗೇ ಬರಬೇಕೆ'ಂದು

ವೈದ್ಯನಾಥ:— ಸ್ವಾಮಿ, ಅವನು ನನ್ನ ದೊಡ್ಡಪ್ಪನ ಮೊಮ್ಮಗನ ಅಳಿಯನಾಗಬೇಕು ಆದರೆ ದುರ್ದೈವ! ನಾಲ್ಕು ದಿವಸಗಳ ಹಿಂದೆ ಕಠಿಣ ಜ್ವರ— ಹೇಗೆ ಬಂತೋ ಕಾಣೆ— ಅಂತು ಪಾಪ, ತೀರಿಕೊಂಡ.

ಹೋಗಲಿ, ಬಿಡಿ, ಸ್ವಾಮಿ ಆದದ್ದಾಯಿತು ನಮ್ಮ
ಲ್ಲಿಗೇ ಹೋಗುವ.

ಈ ಮಾತನ್ನು ಕೇಳಿ, ಸಾಧುಗಳಿಗೆ ಸ್ವಲ್ಪ ವ್ಯಸನ
ವಾಯಿತೋ ಏನೋ, ಅವರು ಬೇರೆ ಉಪಾಯ ಕಾಣದೆ,
ವೈದ್ಯನಾಥನ ಆಮಂತ್ರಣವನ್ನು ಸ್ವೀಕರಿಸಿ, ಅವನ
ಮನೆಯ ಕಡೆಗೆ ಮುಂದರಿದರು. ನಡುವೆ ವೈದ್ಯನಾ
ಥನ ದಾರ್ಢ್ಯವ ಬಿಡಬೇಕೇ? ಏನು-೧೦೦ ಗಜ ಹಾದಿ
ದೂರ ಈ ಯಾತ್ರಿಕರನ್ನು (ಹೀಗೆಂದು ಅವನ ತಿಳುವ
ಳಿಕೆ) ಕರೆದು ಕೊಂಡು ಮುಂದರಿಸಲಿಲ್ಲ-ಅಷ್ಟರಲ್ಲಿ—
ಇವನ ಬಾಯಿಯಲ್ಲಿ ಸತ್ತುಹೋದ ವಿಶ್ವನಾಥಭಟ್ಟನು
ಕಾಣಿಸಿಕೊಂಡನು ಅದು ವೈದ್ಯನಾಥನ ಕಣ್ಣಿಗೆ
ಬಿತ್ತೇ ವಿನಹ ಉಳಿದವರಿಗೆ ತಿಳಿಯಲಿಲ್ಲ. ಅಷ್ಟರಲ್ಲಿ
ಅವನು—"ಸ್ವಾಮಿ, ಇಲ್ಲಿ ನಿಂದಿರಿ, ಸ್ವಲ್ಪ ಇಲ್ಲೇ
ಹೋಗಿ ಬರುತ್ತೇನೆ" ಎಂದಂದುಕೊಂಡು ಇವರ
ಸಮ್ಮತಿ ಸಿಗುವ ಮೊದಲೇ ಜಾರಿದನು. ಆದರೆ ಇವರು
ಕಾದು ಕಾದು ಬೇಸತ್ತರೂ ವೈದ್ಯನಾಥನು ಮರಳಿ ಬಾ
ರನು! ಅಷ್ಟರಲ್ಲಿಯೇ ವಿಶ್ವನಾಥನ ಸಂದರ್ಶನವಾ
ಯಿತು. ಸದಾನಂದನು-"ಏನು ಸ್ವಾಮಿ, ಈಗ ತಾನೆ
ಇನ್ನೊಬ್ಬರು ಭಟ್ಟರು ನಮಗೆ ಸಿಕ್ಕಿ, ನಿಮ್ಮ ಮನೆಗೆ
ಹೋಗುವೆವು ಎಂದುದಕ್ಕೆ—'ವಿಶ್ವನಾಥಭಟ್ಟರು ತೀರಿ
ಕೊಂಡರು' ಎಂದನು. ಎಂಥ ಅನ್ಯಾಯ!"—ಎಂದನು.

ವಿಶ್ವನಾಥ:—ಅನ್ಯಾಯವೆಂದರೇನು? ಸ್ವಾಮಿ,
ಬಂದ ಯಾತ್ರಿಕರನ್ನು ತಮ್ಮ ಮನೆಗೇ ಒಯ್ಯಲು ಕೆಲ

ವರು ಇತ್ತೀಚೆಗೆ ಈ ಉಪಾಯವನ್ನು ತೊಡಗಿರುವರು. ಇರಲಿ, ನಿಮಗೆ ಆಮಂತ್ರಣವಿತ್ತ ಆ ಪ್ರಾಣಿಯ ಹೆಸರೇನು?

ಸದಾ:— ಹೆಸರನ್ನು ನಾವು ಕೇಳಲಿಲ್ಲ. ನೀವು ಅವನ ದೊಡ್ಡಪ್ಪನ ಮೊಮ್ಮಗನ ಅಳಿಯನಂತ!

ಪಶ್ವ:— ಎಲ್ಲಿನ ಸಂಬಂಧವೋ, ಏನು ಕಥೆಯೋ. ಹೂಂ, ಹಾಳಾಗಿಹೋಗಲಿ ಬನ್ನಿ ಸ್ವಾಮಿ. ನೀವು ಕಾಲುನಡೆಯಿಂದ ಬರುವಿರೆಂದು ತಿಳಿದಿರಲಿಲ್ಲ ಮೋಟಾರುಗೀಟಾರು ಇದಿಯಲ್ಲ—ಎಂದು ತಿಳಿದ ಸರಿ— ಬನ್ನಿ, ಬನ್ನಿ.

ಹೀಗಂದು ಅವರ್‍ಯಾರನ್ನು ತುಟಿಪೊದಲಿಲ್ಲದೆ ಬಾಯ ಬಿನ್ನಾಣಗಳಿಂದ ಬರಗುಮಾಡಿ ತನ್ನ ಮನೆಗೆ ಕರೆದುಕೊಂಡುಹೋಗಿ ಚಾಪೆ ಹಾಕಿ ಕುಳ್ಳಿರಿಸಿದರು ಅವರು ಮುಖಪ್ರಕ್ಷಾಲನಾದಿಗಳನ್ನು ಮುಗಿಸುವುದರೊಳಗೆ ಉಪ್ಪಿಟ್ಟು ಕಾಫಿಗಳು ಅವರ ಸಮ್ಮುಖದಲ್ಲಿ ಕುಳಿತುಬಿಟ್ಟುವು ಸಂತರ್ಪಣೆ ನಗರದಲ್ಲಿ ಫಲಾಹಾರದಿಂದಿದ್ದ ದೂರ್ವಾಸರಿಗ ಕಾಫಿ ಗುಟುಕು ಕುಡಿದೊಡನೆಯೇ ತಲ ಗಿರ್ರನೆ ಸುತ್ತಿಬಿಟ್ಟಿತು. ಆದರೂ ಆತಿಥ್ಯಕ್ಕೆ ಭಂಗಬರಬಾರದೆಂದು ಕಣ್ಮುಚ್ಚಿ ಕುಡಿದರು. ಇವರಿಗಾಸೇನ್ಸರ ಸ್ಪೆಶಲ್ ತಯಾರಿಯ ಉಪ್ಪಿಟ್ಟಿನಲ್ಲಿ ರವೆಗಿಂತ ಅಧಿಕವಾದ ಮೆಣಸನ್ನು ಕಂಡು ಅಂಜಿದರು ಅಂತೂ ಭಟ್ಟರ ಮನನೋಯಿಸಬಾರದೆಂದು ಕೆಕರಿಸಿ, ಕಣ್ಣೀರು ಕರೆದು, ಅದನ್ನೂ

ಧ್ವಂಸಮಾಡಿ ಬೇಗಬೇಗನೆ ಎದ್ದು ಹೊರಬಿದ್ದರು. ಸಾಧು ಸದಾನಂದನು ಸ್ವಲ್ಪರೂಢಿಯಾದವನಾದಕಾರಣ ಅನಸಿಗೆ ಇದು ಹೆಚ್ಚೆನಿಸಲಿಲ್ಲ ಆದರೆ ಉಳಿದವರಿ ಗೆಲ್ಲಾ ಸಾಕುಸಾಕಾಯಿತು. ಯಮರಾಯನಿಗಿಷ್ಟು ಅನಿಸಿತು – "ತಾನು ರಾಜಧಾನಿಗೆ ಮರಳಿದ ಬಳಿಕ – ಇಂಥ ಖಾರದ ಉಪ್ಪಿಟ್ಟು ತಿನ್ನಿಸುವುದನ್ನು ಸಹ ನರಕ ಶಿಕ್ಷೆಗಳ ಖಾತೆಯಲ್ಲಿ ಸೇರಿಸುವುದೊಳಿತು" ಎಂದು.

ಆ ದಿನ ವಿಶ್ವನಾಥನು ಅವರಿಗೆ ಪವಿತ್ರ ಗೋಕರ್ಣ ಕ್ಷೇತ್ರದ ಒಳಹೊರಗುಗಳನ್ನೆಲ್ಲಾ ತೋರಿಸಿದನು. ಅಲ್ಲಿ, ಇಲ್ಲಿ ನೀರು ಬಿದ್ದಲ್ಲಿ—ಎಲ್ಲಾ ತೀರ್ಥಗಳೇ! ಈ ಅನುಭವವು ಅವರಿಗೆ ಆಗ ಹೊಸತಾಗಿ ಕಂಡರೂ, ಮುಂದೆ ಕಾಶಿ ರಾಮೇಶ್ವರ ಯಾತ್ರೆಗಳ ಅನುಭವ ದಿಂದ ನೀರು ಕುಡಿದಷ್ಟು ಸುಲಭವಾಯಿತು ಏನಿಲ್ಲ, ಎಮ್ಮೆಗಳು ಸ್ನಾನಮಾಡುವ ಕೆಸರಿನ ಕುಂಡಗಳಲ್ಲೆಲ್ಲಾ ಇವರನ್ನು ಮುಣುಗಿಸಿ – 'ಇದು ಅಘನಾಶಿನಿ,' 'ಇದು ಪಾಪನಾಶಿನಿ'— ಎಂದು ಮಂತ್ರಪರನೆ ಮಾಡುತ್ತಿದ್ದನು ಅಂತು ಅವರಿಗೆ ಅದು ಏನೋ 'ನಾಶಿನಿ' ಯಾಗಿ ಕಂಡುಬಂದುದು ನಿಜ.

ಮರುದಿನ ಅವರೈವರು ವೈದ್ಯನಾಥನ ಜತೆಯಲ್ಲಿ ಸಮುದ್ರತೀರವನ್ನು ಸೇರಿದರು. ಅಲ್ಲಿ ಊರ ಹುಡು ಗರೆಲ್ಲಾ ಆಟಕ್ಕೆ ಬರುವ ಸಮಯ. ಮಕ್ಕಳಾಟವನ್ನು ಕಾಣುವ ಎಂದು ಕುತೂಹಲದಿಂದ ಅವರ ಮಾತು ಕಥೆಗಳ ಕಡೆಗೆ ಕಿವಿಗೊಡತೊಡಗಿದರು. ಆಗ ಇವರ

ಭಾಷಾಂತರಕರ್ತನು ಇನ್ನೂ ಬಂದಿರಲಿಲ್ಲ. ಅವನು ಆ ದಿನ ಮೋಟಾರಿನಮೇಲೆ ಬರಲಿರುವನಂತೆ. ಆದರೆ, ಶಿವರಾಯನು ಬಳಿಯಲ್ಲಿದ್ದುದರಿಂದ ಅವನಿವರಿಗೆ ಅವರ ಮಾತುಕಥೆಗಳನ್ನೆಲ್ಲಾ ಒಂದೊಂದಾಗಿ ವಿವರಿಸತೊಡಗಿದನು ಮಕ್ಕಳಲ್ಲಿ ಆರು ವರುಷದವರಿಂದ ಹಿಡಿದು ೧೬ ವರುಷದ ವರೆಗೂ ಇದ್ದರು. ಸ್ವಲ್ಪ ಸಮಯ 'ನೋಡಿ' ಆಟ ಆಡಿದರು. ಆಟದಲ್ಲಿ ಆರಂಭದಿಂದ ಅಂತ್ಯದವರೆಗೂ ಪ್ರತಿಯೊಬ್ಬರೂ ತಾವು ಗೆಲ್ಲಬೇಕೆಂದು ಯತ್ನಿಸುತ್ತಿದ್ದರೇ ವಿನಹ ಹೇಗೆ ಗೆಲ್ಲಬೇಕೆಂಬುದರ ಗೋಜಿಗೆ ಹೋಗುತ್ತಿರಲಿಲ್ಲ. ಮುಟ್ಟಿದ್ದರೆ 'ಮುಟ್ಟಲೇ ಇಲ್ಲ' ಎನ್ನುವುದು ಅವರ ರೂಢಿ. ಹೀಗೆ ಉಭಯ ಪಕ್ಷಗಳೂ ಒಬ್ಬರನ್ನೊಬ್ಬರು ಸುಳ್ಳಿನಲ್ಲಿ ಸೋಲಿಸಲು ಯತ್ನಿಸುತ್ತಿದ್ದರು ಅಷ್ಟರಲ್ಲಿ ಒಬ್ಬನು ತನ್ನ ಮಾತಿನಿಂದಲೇ ತನ್ನ ಸುಳ್ಳನ್ನು ಒಪ್ಪಿಕೊಳ್ಳಬೇಕಾದ ಪ್ರಸಂಗ ಬಂದಿತು. ಆದರೆ ಅವನ ಸ್ವಾಭಿಮಾನವು ಬಿಡಬೇಕಲ್ಲ! ಅದಕ್ಕಾಗಿ ಕೋಪದಿಂದ ತನ್ನ ಇದಿರಾಳಿಯನ್ನು ಮನಬಂದಂತೆ ಬೈಯ್ಯತೊಡಗಿದನು. ಸರಿ, ಇಬ್ಬರ ಜಗಳ ತಂಡಕ್ಕೇ ಹಿಡಿಯಿತು. ಎಲ್ಲರಲ್ಲಿಯೂ ನೆಮ್ಮದಿಯ ಒಂದು ಲಕ್ಷಣವಿತ್ತು. ಅದೇ-ಕೈಗಿಂತ ಬಾಯಿ ಮುಂದೆ ಅವರ ಮಾತುಗಳ ಸ್ವಾರಸ್ಯವೇನೆಂದು ಹೇಳಲಿ! ಕೊನೆಕೊನೆಗೆ ಶಿವರಾಯನಿಗೆ ಭಾಷಾಂತರಿಸುವುದಕ್ಕೂ ನಾಚುಗೆಯಾಯಿತು. ಕೆಲವನ್ನು ಭಾಷಾಂತರಿಸಲು ಆ ಗೀರ್ವಾಣಭಾಷೆಯಲ್ಲಿ ಶಬ್ದಗಳೇ

ಇಲ್ಲದಾದುವು. ಅಂತು ಆ ಮಾತುಗಳಿಂದ ಅವರಲ್ಲಿ ಜ್ಞಾನವು ಅಪಾರವಾಗಿ ಹೆಚ್ಚಿತು. ಅಲ್ಲಿದ್ದ ಬಾಲಕರು ಕ್ಷೇತ್ರಪುರೋಹಿತರ ಮಕ್ಕಳು. ಎಲ್ಲರೂ ಬ್ರಾಹಣ್ಮರ ಮಕ್ಕಳೇ. ಮಕ್ಕಳು, ಜಗಳವಾಡುವಾಗ ಕೋಪ ವೇರಿದರೆ ಸಂತತಿನಕ್ಷೆ ಬರೆಯುವುದು ಇಲ್ಲಿನ ರೂಢಿ. ಆ ನಕ್ಷೆಯಲ್ಲಿ ಬ್ರಾಹ್ಮಣರಿಂದ ಹಿಡಿದು ವೇಶ್ಯೆಯರನ್ನು ಹಾದು, ಕನಿಷ್ಠ ಗರತಿಸೂಳೆಯುವರೆಗೂ ಕಾಣಿ ಸಿಕೊಂಡರು. ಶಿವನ ಪಾಲಿಗೆ ಈ ಅನುಭವವು ಹೊಸ ತಲ್ಲ. ಹುಟ್ಟುವಾಗಲೇ ಅವನದನ್ನು ಬಲ್ಲವನಾಗಿ ದ್ದನು. ಆದರೆ, ಧಾರ್ಮಿಕ ಸಮಿತಿಯವರ ರಿಕಾರ್ಡಿ ನಲ್ಲಿ ಅದು ಬಲವಾಗಿ ಬೇರೂರಿತು.

ಸಾಲದುದಕ್ಕೆ ಅದೇ ರಾತ್ರಿ ಇನ್ನೊಂದು ಘಟನೆ ನಡೆಯಿತು. ನಮ್ಮ ವೈದ್ಯನಾಥಭಟ್ಟನಲ್ಲಿ ಜನಸಂಖ್ಯೆ ಯೆಂದರೆ—ಅವನ ಎಂಟು ವರುಷದ ತಾಯಿ ಯಿಲ್ಲದ ಮಗು, ಅವನ ಮುದಿತಾಯಿ. ಇದಲ್ಲದೆ ಮನೆಯ ಯಜಮಾನಿ. ಮನೆ ಕೆಲಸದಲ್ಲಿ ಅತಿ ಹೆಚ್ಚಿನ ಮೇಳವಿತ್ತು. ರಾತ್ರಿ ಊಟವಾದಬಳಿಕ ವೈದ್ಯನಾಥನು ಊರ ನವನಾಯಕರೊಡನೆ ಮಾತಾನಾಡಿಕೊಂಡು ಬರಲು ಹೊರಹೋಗಿದ್ದನು. ಘಂಟೆ ಒಂಭತ್ತುಬಾರಿಸಿರ ಬಹುದು. ವೈದ್ಯನಾಥನ ಮಗ 'ಏಕಪುತ್ರ ಪರಂ ಜ್ಯೋತಿ' ಯು ಮನೆಮುಂದಿನ ಬೀದಿಯಲ್ಲಿ ಬೇರೆ ಒಂದೆ ರಡು ಮಕ್ಕಳೊಡನೆ ಆಟವಾಡುತ್ತಿದ್ದನು. ಯಜ ಮಾನಿಯು ಹೊರಬಂದು ಬಾಲಕನನ್ನು 'ಮಲಗುವ

ವೇಳೆಯಾಯಿತು, ಬಾ' ಎಂದು ಕರೆದಳು. ಹುಡು ಗನು ಆಟ ಬಿಟ್ಟೇಳಲಿಲ್ಲ. ಇವಳು ಕರೆದಷ್ಟಕ್ಕೆ ಅವ ನು ಹಟವಾರಿಯಾಗಿ ಅಲ್ಲೇ ನಿಂತುಬಿಟ್ಟನು. ಕೊನೆಗೆ ಯಜಮಾನಿಯು ತಾಳ್ಮೆ ತಪ್ಪಿ, ಹುಡು ಗನಿದ್ದಲ್ಲಿಗೆ ಹೋಗಿ ನಾಲ್ಕೇಟುಗಳನ್ನು ಬಲವಾಗಿ ಕಾಯಿಸಿದಳು ಹುಡುಗನಿಗೆ ಆವೇಶಬಂದಿತು. ಅವನು ಸಿಟ್ಟು ಅಳುಗಳನ್ನು ಬೆರೆಸಿ, ಹಾಗೂ ಹೀಗೂ ಇವಳ ಕೃಗಳಿಂದ ತಪ್ಪಿಸಿಕೊಂಡು—"ಮನೆಗೆ ಬಂದ ಸೂಳೆಯುರಲ್ಲ ನನ್ನನ್ನು ಹೊಡೆದು ತಿನ್ನುವುದಾಯಿತು. ನನ್ನಮ್ಮ ಇದ್ದಿದ್ದರೆ"—ಎಂದು ಕೂಗತೊಡಗಿದನು. ಈ ನಾಟಕವನ್ನು ಜಗುಲಿಯ ಮೇಲಿಂದ ಸಮಿತಿಯವರು ನಿರೀಕ್ಷಿಸುತ್ತಿದ್ದರು. ಅವರಿಗೆ ಈ ಯಜಮಾನಿಯು ಯಾರೆಂದು ಕೇಳಿ–ಎದೆ ಜುಮ್ಮೆಂದಿತು! ಒಟ್ಟಾರೆ ಮೇಲೆ ಅಂದಿನ ಯುಗಧರ್ಮದಂತ ಕ್ಷೇತ್ರವಾಸಿಗಳಿಗೆ 'ಉಪಪತ್ನಿ' ಯಿಲ್ಲದೆ ದಿನ ಸಾಗದು ಎಂಬ ನಿರ್ಧಾರ ಮಾಡಿದರು.

ಇದನ್ನೆಲ್ಲಾ ಕಂಡು ದೂರ್ವಾಸನು ಕಿಡಿಕಿಡಿಯಾಗಿ "ಸಾಕೀಕ್ಷೇತ್ರ ಶಿವರಾಯ, ನಿನ್ನ ಹೆಸರನ್ನು ಈ ಭಟ್ಟರು ಅಜರಾಮರವಾಗಿ ಮಾಡಿಬಿಟ್ಟರು"—ಎಂದು ಬಿಟ್ಟನು. ಮರುಗಳಿಗೆಗೆ—"ನಾವಿಲ್ಲಿಂದ ನಾಳೆಯೇ ಹೊರಡಬೇಕು"—ಎಂದಪ್ಪಣೆಯಾಯಿತು.

ನಾಥು:—ರಾಯರೇ, ನೀವು ಇಷ್ಟರಲ್ಲಿಯೇ ಬೇಸರಪಟ್ಟರೆ ನಿಮ್ಮ ಕಲಸ ಆಗುವುದೆಂತು? ನಾನು

ಆರಂಭದಲ್ಲಿ ಹೀಗೆ ತಾಳ್ಮೆ ಕಳೆದುಕೊಂಡಿದ್ದೆ. ಆದರೆ ಈಗೀಗ ಅದು ರೂಢಿಯಾಗಿದೆ. ಇಂಥ ಕ್ಷೇತ್ರಗಳಲ್ಲೇ ಮುಖ್ಯವಾಗಿ ನಿಮಗೆ ಧಾರ್ಮಿಕವಿಚಾರ ತಿಳಿಯ ಬೇಕು. ನಾನು ನಿಮ್ಮನ್ನಿಲ್ಲಿಗೆ ಕರತಂದುದು–ಮುಖ್ಯ ವಾಗಿ ಇದು ಯಾಜಿಗಳ ಸ್ಥಳವೆಂದು.

ದೂರ್ವಾ:—ಏನು ಇಲ್ಲ ಯಾಗಗಳು ನಡೆಯು ವುವೇ?

ಸಾಧು:—ಇದೀ ಭಾರತವರ್ಷದಲ್ಲಿ ಯಜ್ಞಯಾ ಗಾದಿಗಳು ನಡೆಯುವ ಸ್ಥಳಗಳು ತೀರ ಕಲವು. ಏನು, ಬೆರಳಿಂದೆಣಿಸುವಷ್ಟೂ ಇಲ್ಲ. ಅವುಗಳಲ್ಲಿ ಇದು ಒಂದು. ಇಂದಿಗೆ ನಾಲ್ಕೇ ನಾಲ್ಕು ದಿವಸಗಳಲ್ಲಿ ಇಲ್ಲೊಂದು ಅಜ ಯಾಗ ನಡೆಯುವುದಿದೆ. ಅದಕ್ಕಾಗಿ ನಿಮ್ಮನ್ನು ಕರತಂದ.

ದೂರ್ವಾಸ:–ಹಾಗಾದರೆ, ಅಲ್ಲಿಯತನಕ ಅವಶ್ಯ ಇದ್ದೇ ತೀರಬೇಕು

ಹೀಗೆ ನಿರ್ಧಾರಮಾಡಿ ವೈದ್ಯನಾಥನ ಮನೆಯ ರಾಣೆಯನ್ನು ಗಟ್ಟಮಾಡಿದರು. ವೈದ್ಯನಾಥಗೆ ತಾವಾ ರೆಂಬುದನ್ನು ಇತರರಿಗೆ ತಿಳಿಸಬಾರದೆಂದು ಕಟ್ಟಪ್ಪಣೆ ಮಾಡಿದ್ದರು. ಅವನೂ ಅದಕ್ಕೆ ಒಡಂಬಟ್ಟನು ಅದಕ್ಕೂ ಕಾರಣವಿದೆ 'ದೇವರಿನಲ್ಲಿ ಕೀರ್ತಿಗೆಗುಂಡವರಿವರೆ'ಂದು ಹೊರಬಿದ್ದರೆ, ಮನೆಗೆ ಬಂದು ಹೋಗುವವರ ಸಂಖ್ಯೆ ಬೆಳೆದು — ಉಪ್ಪಿಟ್ಟು ಕಾಫಿ–ಒದಗಿಸಲು ಅಷ್ಟಿಷ್ಟು ಪ್ರಯಾಸವೇ?

ಯಾಗದ ದಿನ ಬಂದಿತು. ಯಾಜಿಗಳ ದರುಶನ

ವನ್ನು ವೈದ್ಯನಾಥನು ತಮ್ಮ ಅತಿಥಿಗಳಿಗೆ ಮಾಡಿಸಿದರು. ಆದರೆ ಅವರಿಗೆ ವಿರಾಮವೆಲ್ಲಿ? ಆದರೂ ತೀರ ಮಡಿ ಮಡಿಯಾದ ಅವರು ತುದಿಕಾಲಿನಲ್ಲಿ ಮಾರುದ್ದ ದೂರ ನಿಂತು-"ಬಹಳ ಸಂತೋಷ. ಬಲುದೂರದಿಂದ ಬಂದ ವರು ಎಂದಮೇಲೆ ತೀರಾ ಸಂತೋಷ. ತಮ್ಮ ಕೃಪೆ ಯಿಂದ ಯಾಗ ಮುಗಿಯಬೇಕು." ಎಂದು ನುಡಿದು ಮುಂದೆ ನಾಗಿದರು

ಯಾಗದ ಜನಸಂದಣಿಯೆಂದರೇನು! ಮಕ್ಕಳು ಮರಿ, ಚಿಳ್ಳೆಪಿಳ್ಳೆಗಳೆಂದು ಸಾವಿರಾರು ಮಂದಿ ನೆರ ತೊಡಗಿದರು ಆಗ ಗೋಕರ್ಣದ 'ಸ್ಯಾನಿಟರಿ ಅರೇಂಜು ಮೆಂಟು' ಅತಿ ಅದ್ಭುತವಾಗಿತ್ತು. ಇವರು ಧಾರ್ಮಿಕ ಕಮಿಟಿಯವರಾದುದರಿಂದ "ಆರೋಗ್ಯಸಮಿತಿ"ಯವ ರಷ್ಟು ಗಮನಕೊಡಲು ಹೋಗಲಿಲ್ಲ ಅಂತು— ಆಧುನಿಕ ಬ್ರಾಹ್ಮಣ್ಯಕ್ಕೆ ಶುಚಿತ್ವದ ಆವಶ್ಯಕತೆಯಿಲ್ಲ- ಎಂದಿಷ್ಟೆ ಟಿಪ್ಪಣಿಮಾಡಿಕೊಂಡರು ಈಗ ಯಾಗದ ವಿಚಾರ ಸಾಧುಗಳು ವಿಶ್ವನಾಥನನ್ನು ಕಂಡು,— "ಇದೇನು ಯಾಗ?" ಎಂದು ಕೇಳಿದರು

ವಿಶ್ವನಾಥ:— ಅಜಯಾಗ.

ಯಮ:-ಅಜಯಾಗಕ್ಕೆ ಏನೇನು ಮಾಡುತ್ತಾರೆ?

ವಿಶ್ವನಾಥ:— ಆಡನ್ನು ಹಿಡಿದು ತಂದು ಅದರ 'ವಪೆ'ಯನ್ನು ಹುಡುಕಿತೆಗೆದು ಕರಿಯುವರು ಒಂದು ಚೂರನ್ನು ಪರಮಾನ್ನದಲ್ಲಿ ಹಾಕಿ ಬಡಿಸುವರು. ಅಂತು ಯಾವತ್ತು ಕ್ರಿಯೆಗಳನ್ನು ವಿಧಿವತ್ತಾಗಿ ಮಾಡು

ವರು. ನಮ್ಮ ಶ್ರೀಕಂಠ ಯಾಜಿಗಳು ಒಂದಲ್ಲ, ಎರಡಲ್ಲ, ಏಳೆಂಟು ಯಾಗಗಳನ್ನು ಮಾಡಿಸಿರುವರು.

ವಸಿಷ್ಠ:— ಪಶುವನ್ನು ತೆಗೆಯಬೇಕಾದರೆ ಅದರ ಪ್ರಾಣತೆಗೆಯಬೇಕು.

ವಿಶ್ವನಾಥ:— ಅದೇನು ದೊಡ್ಡ ಕೆಲಸ!

ವಶಿಷ್ಠ:- ದೊಡ್ಡ ಕೆಲಸವೇನೋ ಅಲ್ಲ. ಆದರೆ ಹಿಂಸೆಯಾಗುತ್ತದೆಯಲ್ಲಾ ಎಂದು. ಅಹಿಂಸಾ ಪರಮೋಧರ್ಮವಲ್ಲವೇ?

ವಿಶ್ವ:—ಸ್ವಾಮಿ, ಅದು ಬುದ್ಧತತ್ವ ಇದರಿಂದ ಆಡಿಗಾದರೂ ಸ್ವರ್ಗಪ್ರಾಪ್ತಿಯಿದೆ ಹಿಂದಿನ ಕಾಲದಲ್ಲಿ ಅದಕ್ಕೆ ಪುನರ್ಜನ್ಮಕೊಡುತ್ತಿದ್ದರಂತೆ. ಈಗ ಅದೇನು ಸಾಧ್ಯವಿಲ್ಲ. ಆದರೂ ನಷ್ಟವೇನು! ಅದರ ಪಾಲಿಗೆ ಸ್ವರ್ಗವಿದೆಯಲ್ಲಾ!

ವಸಿಷ್ಠ:— ಆದರೂ ಆ ಪ್ರಾಣಿಗೆ ವೇದನೆಯಾಗುವುದಿಲ್ಲವೇ!

ವಿಶ್ವನಾಥ:— ವೇದನೆಯಾಗುವುದು ಕಾಣಿಸುವುದಿಲ್ಲ ಮಾರಿಗುಡಿಯಲ್ಲಿ ಕಡಿಯುವಂತೆ ಇಲ್ಲಿ ನಿಷ್ಕರುಣೆಯಿಂದ ಕಡಿದು ರಕ್ತಪಾತಮಾಡುವುದಿಲ್ಲ.

ವಸಿಷ್ಠ:— ರಕ್ತಪಾತ ಇಲ್ಲದೆ . . . . ?

ವಿಶ್ವ:— ಅದರ ಆರಬಾಯಿ ಒತ್ತಿಹಿಡಿದು, ಅದನ್ನು ಕೂಗದಂತೆ ಮಾಡಿ ಉಸಿರನ್ನ ಕಟ್ಟಿ, ಗುದ್ದಿಯೇ ಕೊಲ್ಲುವೆವಾದುದರಿಂದ ಅಷ್ಟು ಕಷ್ಟವಿಲ್ಲ.

ವಿಶ್ವಾಮಿತ್ರ: - ಸ್ವಾಮಿ, ಈ ರೀತಿ ನಮ್ಮ ಶ್ರೀ ಕಂಠ ಯಾಜಿಗಳನ್ನೇ ಯಾರಾದರೂ ಗುದ್ದಿ ಕೊಂದರೆ!

ವಿಶ್ವ: — ಯಾಗದಲ್ಲಿ ಕೊಲ್ಲುವುದೆಂದರೇನು ಸ್ವಾಮಿ! ಇದು ಕೊಲೆಯೇ?

ವಿಶ್ವಾಮಿತ್ರ: – ಕೊಲೆಯಲ್ಲ; ಪ್ರಾಣಹರಣ. ಇರಲಿ, ನಿಮ್ಮ ಶ್ರೀಕಂಠಯಾಜಿಗಳಿಗೆ ಆಸ್ತಿ, ಮನೆಯೆಲ್ಲಾ ಚೆನ್ನಾಗಿದೆಯೇ?

ವಿಶ್ವ: – ತುಂಬಾ ಶ್ರೀಮಂತರು ಸ್ವಾಮಿ. ಅಲ್ಲದಿದ್ದರೆ ಇಷ್ಟು ಹಣ ವ್ಯಯಿಸಲು ಯಾರಿಗೆ ಸಾಧ್ಯ? ಆಸ್ತಿಯಿದೆ, ಮನೆಯಿದೆ, ಸಂಸಾರವಿದೆ, ನಾಲ್ಕು ಗಂಡು, ಒಂದು ಹೆಣ್ಣು. ಕೊನೆಯ ಮಗುವಿಗೆ ಒಂದು ವರುಷ ಪೂರ್ಣ ಆಗಲಿಲ್ಲ

ವಿಶ್ವಾ:–ಒಮ್ಮೆ ಅವರಿಗೆ ಮೋಕ್ಷ ಸಿಗುವುದಾದರೆ, ಇಷ್ಟನ್ನೆಲ್ಲಾ ಬಿಟ್ಟು ಅವರು ಪ್ರಯಾಣಕ್ಕ ಸಿದ್ಧರಿರುವರೇ ಸ್ವಾಮಿ!

ವಿಶ್ವನಾಥ: — ಪ್ರಯಾಣಕ್ಕೆ ಯಾರು ಸಿದ್ಧರಿರುತ್ತಾರೆ? ಸ್ವಾಮಿ - ನೀವು ಸಾಧುಗಳು; ನಿಮಗೆ ಯಾವಾಗ ಮರಣಬಂದರೂ ನೀವು ಸಿದ್ಧರೇ. ನಮ್ಮಂಥ ಸಂಸಾರಿಗಳಿಗ ಅದೆಲ್ಲ ಎಲ್ಲಿ ಸಾಧ್ಯ? ಅದಕ್ಕಾಗಿಯೇ ಅಲ್ಲವೇ ಈ ಯಜ್ಞ, ಹೋಮಧೂಮ ನಡೆಯಿಸುವುದು.

ವಿಶ್ವಾಮಿತ್ರ: – ನಿಜ, ನಿಜ. ತಮ್ಮ ತಮ್ಮ ಪ್ರಾಣ ಕೊಡಲು ಆಗದಿದ್ದರೂ ಪಾಪದ ಪ್ರಾಣಿಗಳ ಪ್ರಾಣ ತೆಗೆಯಬಹುದಲ್ಲ.

ಸರಿ, ಮಾತುಕಥೆ ಮುಗಿಸಿ, ಅವರು ಯಾಗಮಂಟಪದ ಸುತ್ತ ನಡೆದರು. ಆ ಯಜ್ಞವೇದಿಕೆ, ನೆರೆದಿರುವ ಬ್ರಾಹ್ಮಣಸಮೂಹ, ವೇದಘೋಷ, ಧೂಮಕಾಟ— ಎಲ್ಲಾ ಕಂಡು ಕಂಡು ಒಂದು ಕಡೆಯಲ್ಲಿ ಕುಳಿತರು. ಮೆಲ್ಲಗೆ ವಸಿಷ್ಠನು-ವೈದ್ಯನಾಥನನ್ನು ಬಳಿಗೆ ಕರೆದು- 'ಸ್ವಾಮಿ, ಇಷ್ಟು ಚಿಕ್ಕ ಹುಡುಗರೆಲ್ಲಾ ವೇದಘೋಷ ಮಾಡುತ್ತಾರಲ್ಲ. ಬಹಳ ಸಂತೋಷ. ಪ್ರಾಚೀನ ಪದ್ಧತಿಯನ್ನು ಇಂದಿನ ವರೆಗೆ ಉಳಿಸಿಕೊಂಡು ಬಂದಿರುವರು'—ಎಂದರು. ವೈದ್ಯನಾಥನು ಹಿಗ್ಗಿನಿಂದ-ಅಲ್ಲೆ ಸಮೀಪದಲ್ಲಿ ನಿಂತಿದ್ದ ತಮ್ಮ ಚಿಕ್ಕಪ್ಪನ ಮಗನನ್ನು ತೋರಿಸಿ-"ಸ್ವಾಮೀ, ಆ ಹುಡುಗನಿಗೆ ೧೨ ವರುಷ ಕ್ರಮ, ಜಟೆಗಿರೆ ಎಲ್ಲಾ ಆಗಿದೆ"- ಎಂದನು. ವಸಿಷ್ಠನ ಕುತೂಹಲ ಪೂರೈಸಲು ಅವನನ್ನು ಕರೆದು, ಅವನಿಂದ ವೇದಮಂತ್ರಗಳನ್ನು ತಿರುಗಾಮುರುಗಾ, ಮೇಲಿಂದಮೇಲೆ, ಇತ್ತಿಂದ ಅತ್ತ, ಅತ್ತಿಂದ ಇತ್ತ-ಹಾಡಿಸಿದನು. ಹುಡುಗನ ಪ್ರಾವೀಣ್ಯ ಕಂಡು ವಿಶ್ವಾಮಿತ್ರನಿಗೂ ಸಂತೋಷವಾಯಿತು. ಅವನು ಆನಂದದಿಂದ ಸಂಸ್ಕೃತದಲ್ಲಿ ಹುಡುಗನೊಡನೆ ಸಂಭಾಷಿಸತೊಡಗಿದನು. ಆದರೆ ಹುಡುಗನು ಪಿಳಿಪಿಳಿ ನೋಡುತ್ತ ಸುಮ್ಮನಾದನು.

ವಿಶ್ವಾಮಿತ್ರ:—ಏನು, ಇಷ್ಟೆಲ್ಲಾ ಕಲಿತ ಹುಡುಗನಿಗೆ ನಮ್ಮೊಡನೆ ಮಾತನಾಡಲು ನಾಚಿಕೆಯೆಂದರೇನು ಸ್ವಾಮಿ?

ವಿಶ್ವನಾಥ:—ನಾಚಿಗೆಯಲ್ಲ, ಅವನಿಗೆ ನೀವು ಸಂಸ್ಕೃತದಲ್ಲಿ ಆಡಿದ್ದು ತಿಳಿಯಲಿಲ್ಲ

ವಿಶ್ವಾಮಿತ್ರ:—ಸಂಸ್ಕೃತದಿಂದ ಆಡಿದ್ದು ತಿಳಿಯಲಿಲ್ಲ ಎಂದರೆ? ಇಷ್ಟೆಲ್ಲಾ ವೇದಮಂತ್ರ ಕಲಿತವನಿಗೆ—

ವಿಶ್ವನಾಥ:—ಆದರೂ ಅವನಿಗೆ ಭಾಷಾಪರಿಚಯವಿಲ್ಲ; ವೇದಮಂತ್ರವಾದರೆ ಕಂಠೋಕ್ತ ಕಲಿತರಾಯಿತು

ವಿಶ್ವಾಮಿತ್ರ:—ವೇದಕಲಿತವರೆಲ್ಲಾ ಹೀಗೆಯೇ!

ವಿಶ್ವನಾಥ:—ಎಲ್ಲಾ ಎಂದಲ್ಲ; ನೂರಕ್ಕೆ ಒಬ್ಬಿಬ್ಬರು ಆಕ್ಷೇಪರಿರುವರು ಅಂತು ಹೆಚ್ಚಿನ ಜನರಿಗೆ ಮಂತ್ರ ಬಂದರೂ, ಅರ್ಥ ತಿಳಿಯದು. ಅದೂ ಅಲ್ಲದೆ ಈ ಕಲಿಯುಗದಲ್ಲಿ ವೇದಕ್ಕೆ ಅರ್ಥಮಾಡುವುದೆಂದರೇನು ಸ್ವಾಮಿ!

ವಿಶ್ವಾಮಿತ್ರನಿಗೆ ಈಕಂಠಪಾಠ ಪಂಡಿತರ ಜಾಣತನ ನೋಡಿ ದಿಗಿಲುಬಿತ್ತು ಅದರಿಂದ ಬೇಸರಗೊಂಡವನು "ಸ್ವಾಮಿ, ಯೂಪಸ್ತಂಭವೆಲ್ಲಿದೆ" ಎಂದು ಕೇಳಿದನು. ಸವಾರಿಯು ಅಲ್ಲಿಯವರೆಗೆ ಅವರನ್ನು ಕರೆದೊಯ್ದಿತು. ಅದೊಂದು ಮರೆಯಾದ ಸ್ಥಳ. ಇವರು ಹೋಗುವ ವೇಳೆಗೆ ಅಲ್ಲಿ ಗಜವನ್ನು ಮರ್ದಿಸಲು ತೊಡಗಿದ್ದರಷ್ಟೆ. ಒಬ್ಬಿಬ್ಬರ ಹೊರತು ಯಾರೂ ಬಳಿಯಲ್ಲಿರಲಿಲ್ಲ. ಯಾರಿಗೂ ಆ ಸ್ಥಳವನ್ನು ಕಾಣಲು ಯಾಜಗಳ ಅಪ್ಪಣೆಯೂ ಇರಲಿಲ್ಲ. ಆದರೆ ವಿಶ್ವನಾಥಭಟ್ಟನು ಕರೆದುತಂದ ಮೇಲೆ ತಡೆಯುವುದಕ್ಕಾಗುತ್ತದೆಯೇ? ಎಂದು ಸಾಧುಗಳಿಗೆ ಪ್ರವೇಶಕೊಟ್ಟರು.

ಆಡೆಂದರೆ ಸಾಮಾನ್ಯ ಚಿಕ್ಕ ಕುದುರೆಯಂತಿತ್ತು. ಅದನ್ನು ಹಿಂದೆಮುಂದೆ ಕಟ್ಟಿಹಾಕಿ ಬಾಯಿಯನ್ನು ಬಲವಾಗಿ ಹಿಡಿದು ಮುಷ್ಟಿಪ್ರಹಾರಮಾಡುತ್ತಿದ್ದರು. ಪಾಪದ ಪ್ರಾಣಿಯು ಒದ್ದಾಟ ಹೇಳತೀರದು. ವಿಶ್ವಾಮಿತ್ರನು ಆಗ ವಿಶ್ವನಾಥನ ಹೆಗಲಮೇಲೆ ಕೈಹಾಕಿ ನಿಂತಿದ್ದನು ಆಡಿನ ಬಾಯಿಯನ್ನು ಹಿಡಿದ ಚಿತ್ರವನ್ನು ಕಂಡು,ಅದೇ ಸ್ಫುರಣವು ಅವನಕೈಗಳಿಗೆ ಬಂದು, ಅವನು ಅವನ್ನು ಬಲಪಡಿಸಲು, ವಿಶ್ವನಾಥನ ಉಸಿರುಕಟ್ಟಿ-- "ಅಯ್ಯೋ" ಎಂದು ಚೀರಿಬಿಟ್ಟನು. ಇತ್ತ ದೂರ್ವಾಸನಿಗೆ ಈ ಅನರ್ಥವನ್ನು ಕಂಡು ಸಾಕಾಗಿ, ಮುಷ್ಟಿಪ್ರಹಾರಮಾಡುತ್ತಿದ್ದ ಆಸಾಮಿಯನ್ನು ಈಚೆಗೆ ಎಳೆದು ಅವನ ಬಾಯಿಯನ್ನು ಒತ್ತಿಹಿಡಿದು, ಎರಡೇಟು ಕೊಟ್ಟನು. ಏಟು ಕೊಡುವುದಕ್ಕೆ ಆ ಆಸಾಮಿ ಗಟ್ಟಿಯಾಗಿತ್ತೇ ವಿನಹ ತೆಗೆದುಕೊಳ್ಳುವುದಕ್ಕಲ್ಲ ದೂರ್ವಾಸನ ಏಟಿನ ಬಲದಿಂದ ಮೂಗಿನಿಂದ ಸ್ವಲ್ಪ ಕೆನ್ನೀರು ಹರಿದು, ಅವನು "ಗೋಕರ್ಣೇಶ್ವರಾ" ಎಂದು ಮಲಗಿಬಿಟ್ಟನು. ಇದನ್ನು ಕಂಡು ಬಳಿಯಲ್ಲಿದ್ದ ಇನ್ನೊಂದು ಪ್ರಾಣಿಯೂ ಪರಾರಿ! ದೂರ್ವಾಸನು ಆಡನ್ನು ಕಟ್ಟಿದ ಹಗ್ಗವನ್ನು ಬಿಡಿಸಿದನು ಅದು 'ಮ್ಯೆ' ಎಂದು ನಾಗಾಲೋಟಮಾಡಿತು. ತಿರುಗಿ ಗೋಕರ್ಣದವರ ಕೈಗೆ ಅದು ಸಿಗಲಿಲ್ಲವಂತೆ. . . . .

ಈ ಸುದ್ದಿಯಾಜಿಗಳಿಗೆ ಯಾಗಮಗ್ನರಾದಾಗಲೇ ದೊರೆಯಿತು. ಓಡಿಬಂದ ಪ್ರಾಣಿಯು ಅವರ ಕಿವಿಯಲ್ಲಿ

ಅದನ್ನು ಉಸುರಿತು. ಅವನಿಗೆ ಏಳುವುದಕ್ಕಿಲ್ಲ; ಬಿಡುವುದಕ್ಕಿಲ್ಲ. ಇತ್ತ ಆಡು ಕೈತಪ್ಪಿದೆ. ಅದರ ವಪೆಯು ಬೇಕಾದ ಮುಹೂರ್ತವು ಬಂದಿದೆ. ಏನು ಮಾಡಲಿ! "ಎಲ್ಲಾ ಕೆಲಸ ಕೆಟ್ಟಿತು. ಆ ಮುಂಡೇ ಮಕ್ಕಳ ಮನೆ ಹಾಳಾಗಲಿ. ಅಂತು ಗುಟ್ಟು ಹೊರ ಬೀಳಬಾರದು. ನಿನ್ನ ಮೊದಲನೆ ಕೆಲಸ ಎಂದರೆ— ವಪೆಯಂತೆ ಕಾಣುವ ಏನನ್ನಾದರೂ ತೆಗೆದುಕೊಂಡು ಬಾ. ಇಲ್ಲವಾದರೆ ಮಾನಹೋಗುತ್ತದೆ. ಇತ್ತ, ಆಡು ಪರಾರಿಯಾದ ವಿಷಯದಲ್ಲಿ ಪಿಟ್ಟೆಂದು ಸುದ್ದಿ ಬೇಡ."— ಎಂದಾಜ್ಞೆಯಾಯಿತು.

ಸರಿ ಅದೇ ರೀತಿ ಆ ದಿನದ ವಿಧಿಗಳು ಮುಗಿದುವು. ಬಂದಿದ್ದ ಬ್ರಾಹ್ಮಣರು ಒಂದೊಂದು ಮಣ ತೂಕವೇರಿ ಗೃಹಾಭಿಮುಖವಾಗಿ ತೆರಳಿದರು. ಅಜಪ್ರ ತಾರಿಯು ತಿರುಗಿ ಅಂಧ ಜನ್ಮದಲ್ಲಿ ಆ ಕಲಸವಮಾಡಲಿಲ್ಲ ಇತ್ತ ಶ್ರೀಕಂಠ ಯಾಜಿಗಳ ಅಂತರಂಗದ ಪಿಟ್ಟು ದೇವರಿಗೇ ಗೊತ್ತು ವಿಧಿಗಳೆಲ್ಲಾ ಮುಗಿದಾದ ಮೇಲೆ 'ಮುದ್ದಾಂ' ವಿಶ್ವನಾಥಭಟ್ಟನ ಮನೆಗೆ ಬಂದು, ನಾಥು ಗಳಿಗೆ ಮಂಗಳಾರತಿ ಮಾಡಿ ನಡೆದರು. ತಮ್ಮ ಕೆಲಸ ವಾಯಿತೆಂದು ಸಮಿತಿಯವರು ಗೋಕರ್ಣದಿಂದ ಕಾಲು ಕಿತ್ತು ಮುಂದರಿದರು ಆ ಸಮಯಕ್ಕೆ ಸರಿಯಾಗಿ ಅವರ ಚತುರ್ಮುಖಿಯೂ ಅವರನ್ನು ಸೇರಿದನು. ಈಗ ಅವರ ಸಂಖ್ಯೆ ಅರ್ಧ ಡಜನಿಗೆ ಭರತಿಯಾಯಿತು ಹೀಗವರು ಗೋಕರ್ಣ ಬಿಟ್ಟರೂ ಗೋಕರ್ಣದ ಸ್ಮರಣೆ

ಅವರನ್ನು ಬಿಡಲಿಲ್ಲ. ಅವರು ನಾಸಿಕದಲ್ಲಿರುವಾಗ– 'ಮಹಾರಾಷ್ಟ್ರವರ್ತಮಾನ' ಎಂಬ ಪತ್ರಿಕೆಯಲ್ಲಿ ಗೋಕರ್ಣದ ವಿಷಯದಲ್ಲಿ ಒಂದು ಹೊಸ ಸುದ್ದಿಯನ್ನು ಕೇಳಿದರು. ಅದು ಹೀಗಿತ್ತು:

## "ಗೋಕರ್ಣದ ಭಯಂಕರ ಕೊಲೆ."

"ತಾ. ೨೬ ಶನಿವಾರ ದಿನ ರಾತ್ರಿ, ಗೋಕರ್ಣ ಕ್ಷೇತ್ರಕ್ಕೆ ಯಾತ್ರಾರ್ಥಿಗಳಾಗಿ ಬಂದ ಇಬ್ಬರು ಶ್ರೀಮಂತರನ್ನು ಕೊಲೆಮಾಡಿರುವರು. ಅವರ ಬಳಿ ಯಾವ ವಸ್ತುಗಳೂ ಉಳಿದಿಲ್ಲ. ಶವಗಳೆರಡು, ಗೋಕರ್ಣದ ದೊಡ್ಡ ಕೆರೆಯಲ್ಲಿ ಮರುದಿನ ತೇಲುತ್ತಿದ್ದುವು. ಅನುಮಾನದ ಮೇಲೆ ಶ್ರೀಕಂಠಶಾಸ್ತ್ರಿ, ವಿಶ್ವನಾಥಭಟ್ಟ ಎಂಬಿಬ್ಬರನ್ನು ಕೈದುಮಾಡಿರುವರು."

'ಅಬ್ಬಾ ಕ್ಷೇತ್ರಮಹಿಮೆಯೇ'—ಎಂದು ವಸಿಷ್ಠನ ಉದ್ಗಾರ ಹೊರಟಿತು.

'ಸ್ವಾಮಿ ದೂರ್ವಾಸರೇ, ನಾವು ಇನ್ನೂ ನಾಲ್ಕು ದಿನ ಆ ಊರಲ್ಲಿ ಇರುತ್ತಿದ್ದರೆ, ನಮಗೂ ಈ ತಪ್ಪೋತ್ಸವವಾಗುತ್ತಿತ್ತು"—ಎಂದು ವಿಶ್ವಾಮಿತ್ರನು ನುಡಿದನು.

"ನಿಜ ವಿಶ್ವಾಮಿತ್ರ, ಇದನ್ನು ಮಾಡಿದ ಆಸಾಮಿಗಳೂ ನಮ್ಮವರೇ. ಒಂದು ವಿಶ್ವನಾಥನಂತೆ, ಇನ್ನೊಂದು ಶ್ರೀಕಂಠನಂತೆ"—ಎಂದು ದೂರ್ವಾಸನ ಟೀಕೆಯಾಯಿತು

"ಶಿವಭಕ್ತರ ಮಹಿಮೆಯಿಷ್ಟು" — ಎಂದು ಶಿವನೇ ಅಂದುಬಿಟ್ಟ.

ಇಲ್ಲಿಗೆ ಧರ್ಮವಿಚಾರ ಪ್ರಕರಣದ ಶ್ರೀ ಗೋಕರ್ಣ ಕ್ಷೇತ್ರ ಮಹಾತ್ಮ್ಯೆಯೆಂಬ ಕಾಂಡವು ಸಮಾಪ್ತವು

---

## ಪ್ರಕರಣ ೧೩

## "ಸ್ವರ್ಗದ ಪಾಸುಪೋರ್ಟು."

ನಾಸಿಕದಿಂದ ಸವಾರಿ ಮುಂದೆ ಉತ್ತರ ಹಿಂದುಸ್ಥಾನಕ್ಕೆ ತೆರಳಿತು ಆಗವರಿಗೆ ಸಾಮಾನ್ಯ ಯಾತ್ರಿಕರಂತೆಯೇ ಸಂಚರಿಸುವುದು ಒಳ್ಳೆತೆಂದೂ ತಮ್ಮ ಕೀರ್ತಿ ಬಯಲಾಗದಂತೆ ನೋಡಿಕೊಳ್ಳಬೇಕೆಂದೂ ಆಸೆಯಾಯಿತು ಆದಕ್ಕಾಗಿ ಅವರು ಸಾಮಾನ್ಯ ಯಾತ್ರಿಕರ ಉಡುಗೆ ಧರಿಸಿ, ಮೊದಲು ಅಲಹಾಬಾದಿಗೆ ಪ್ರಯಾಣ ಬೆಳೆಯಿಸಿದರು ಪ್ರಯಾಗದ ಸ್ಟೇಶನಕ್ಕೆ ಬರುವುದರೊಳಗಾಗಿ ಪಂಡರ ಹಿಂಡೊಂದು ಗಂಟು ಬಿದ್ದಿತು. ಅಂತು ಇವರನ್ನು ಒಬ್ಬ ಪಂಡನು ತನ್ನ ಬಲೆಯೊಳಗೆ ಕೆಡವಿ ತನ್ನ ಮನೆಗೆ ಕರೆದೊಯ್ದನು. 'ತ್ರಿವೇಣಿ ಸಂಗಮವಾಗುವ ಮಹಾ ಕ್ಷೇತ್ರವಿದು. ಇಲ್ಲಿ ಮುಣುಗಿದವನು ತಿರುಗಿ ಜನ್ಮವಿಲ್ಲದಾಗುವನು ಇಲ್ಲಿ ಪಿತೃಗಳಿಗೆ ತರ್ಪಣ ಕೊಟ್ಟರೆ ಅವರಿಗೆ ಮುಕ್ತಿ ನಿಶ್ಚಯ ಎಂದನು. ಒಟ್ಟಾರೆ ಎಲ್ಲಾ ವಿಧಿಗಳನ್ನು ಮಾಡಿಸಲು ಕಡಿಮೆ

ಕಡಿಮೆ ಒಂದೊಂದು ಆಸಾಮಿಗೆ ೫೦೦ ರೂಪಾಯಿ ಗಳು ಬೇಕೆಂದು ನಿಶ್ಚಯವಾಯಿತು. ನಮ್ಮ ಭೂಪತಿ ಗಳಿಗೆ ಕಾಸು ಬಿಚ್ಚುವ ಮನಸಿಲ್ಲದುದನ್ನು ಕಂಡು ಬೆಲೆ ತಗ್ಗಿ ತಗ್ಗಿ ಕೊನೆಗೆ ೫ ರೂಪಾಯಿಗೆ ಬಂದಿತು. (ಬೆಲೆ ಯಿಲ್ಲದ ಸೊನ್ನೆಗಳು ಬೇಡೆಂದು) ದೂರ್ವಾಸನು ಅದಕ್ಕೂ ಕಿಡಿಕಿಡಿಯಾದನು. ಅನುಭವ ಹೊಂದುವು ದರ ಸಲುವಾಗಿ ಅಷ್ಟಕ್ಕೆ ಒಪ್ಪಿಕೊಂಡರು ಒಪ್ಪಿ ಕಾಸು ಕೈಗೆ ಕೊಟ್ಟದ್ದೇ ತಡ, ಪಂಡರ ಸವಾರಿ ಬೇರೆ ಗಿರಾಕಿಗಳನ್ನು ಹುಡುಕಲು ಹೊರಟಿತು. ಮರುದಿನ ಬೆಳಿಗ್ಗೆ ಇವರಿಗೆಲ್ಲಾ ನದಿಸ್ನಾನಮಾಡಿಸಿ, (ತಾನು ಮಾತ್ರ ಮಾಡದೆ) ಪಾದರಕ್ಷೆ ಸಹ ತೆಗೆಯದೆ ಬಂದ ಯಾತ್ರಿಕರಿಂದೆಲ್ಲ "ಹೋಲ್ಸೇಲ್" (ಯಾವತ್ತು) ವಿಧಿಗ ಳನ್ನು ಮುಗಿಯಿಸಿದನು ಆ ಮೇಲೆ ತ್ರಿವೇಣಿಸ್ನಾನಕ್ಕೆ ಕರೆದೊಯ್ದನು. ಸಮಿತಿಯವರು ನೀರಲ್ಲಿ ಮುಣುಗಿ ದರೆ? ಮೇಲೆ ಬರಲು ಬಿಡುವವರು ಯಾರು! ಆಶೀ ರ್ವಾದ ಮಾಡಿ ಹೂಹಾಕುವವರ ಕೈಗಳ ಸಂಖ್ಯೆಯು ಹೆಚ್ಚಾಗಿ ಉಸಿರುಕಟ್ಟುವಂತಾಯಿತು. ದೂರ್ವಾಸ ನಿಗೂ, ವಿಶ್ವಾಮಿತ್ರನಿಗೂ ಸಿಟ್ಟುಬಂದು ನೀರೊಳ ಗಿಂದಲೇ ಒಬ್ಬಿಬ್ಬರ ಕಾಲೆಳೆದು ಅವರಿಗೂ ಸ್ನಾನ ಮಾಡಿಸಿ, ಬಲುಕಷ್ಟದಿಂದ ತಲೆಯೆತ್ತಿದರು ಸರಿ, ತಲೆತುಂಬಾ ಹೂವುಗಳು ಬಿದ್ದುವು. ಮೈ ಉಜ್ಜಿ ಕೊಳ್ಳಲು ಅವಕಾಶವಿಲ್ಲ–ಆಶೀರ್ವಾದವನ್ನು ಮುಂಗಡ ವಾಗಿ ಕೊಟ್ಟ ಪಂಡರು ದಕ್ಷಿಣೆಗಾಗಿ ಕೈಮುಂದೆ

ಮಾಡಿದರು. ಒಬ್ಬರೇ! ಇಬ್ಬರೇ! ಹೂಹಾಕಿದವರು ಹಾಕದಿದ್ದವರೆಲ್ಲ ನೇರಿ ಹತ್ತಿಪ್ಪತ್ತು ಮಂದಿ ಕೂಗಿದರು. ಶಿವನು ತನ್ನ ಮತ್ತು ತನ್ನ ಗೆಳೆಯರ ಮೈಮೇಲೆ ಕಡವಲ್ಪಟ್ಟ ಹೂಗಳನ್ನು ಒಟ್ಟುಮಾಡಿ—'ನಿಮ್ಮದು ನಿಮಗೆ' ಎಂದು ಅವರ ಮೇಲೆ ಚೆಲ್ಲಿ ಹೊರಟುಬಿಟ್ಟನು. ಉಳಿದವರೂ ಅನುಸರಿಸಿದರು. ಅಂತು ಕಾಸು ಹೊರಬಾರದುದನ್ನು ಕಂಡು—ಕ್ಷೇತ್ರದ ಆಶೀರ್ವಾದಕರು ಇವರಿಗೆ ಸಹಸ್ರನಾಮಮಾಡಿದರು.

ನಾಥುಗಳು, ೫ ರೂಪಾಯಿ ದಂಡತೆತ್ತುದು ಮನೆಬಾಡಿಗೆಂದು ತಿಳಿದು, ಮುಂದಿನ ಕ್ಷೇತ್ರದ ಯೋಚನೆ ಮಾಡಿದರು. ಅವರಿಗೆ ಪ್ರಯಾಗದ ಶುಚಿತ್ವ ಕಂಡು ಬಲು ಸಂತೋಷವಾಯಿತು. ಅದನ್ನು ಮೆಚ್ಚಿ ಸಿಖಿಲ ಜಗದ ಅರ್ಧಾಂಶ ನೊಣಗಳು ಅಲ್ಲೇ ಮನೆಮಾಡಿದ್ದುವು. ಒಬ್ಬನು ಒಂದು ಕ್ಷಣ ಕಣ್ಮುಚ್ಚಿದನೆಂದರೆ, ಮೈಮೇಲೆ ಕಂಬಳಿಮುಚ್ಚಿದಂತ ಕಾಣುತ್ತಿತ್ತು.

ಸರಿ, ಎರಡನೇ ಕ್ಷೇತ್ರ—ಶ್ರೀ ಕಾಶಿ. ಶಿವರಾಮನ ಲೀಲಾಭೂಮಿ. ಎಲ್ಲಿಲ್ಲದ ಉಮೇದು ಅವನಿಗೆ. ಮೊಗಲ ಸಾರಾಯಿಯಲ್ಲೇ, ಪಂಡರು ಗಂಟುಬಿದ್ದಿದ್ದರು. ಸರಿ, ಅಲ್ಲೂ ಯಾವನೋ ಒಬ್ಬನ ಗ್ರಹಚಾರಕ್ಕೆ ಗಂಟುಬಿದ್ದರು. "ವಿಧಿಗಿಧಿ ನಾವು ಮಾಡಿಸುವವರಲ್ಲ ಬರೇ ತೀರ್ಥಕ್ಷೇತ್ರ ದರ್ಶನಮಾಡಿಸಿದರೆ ಸಾಕು"—ಎಂದವರಂದರು. ಪಂಡನ ಆಗ್ರಹವೆಲ್ಲಾ ವ್ಯರ್ಥವಾಯಿತು. ಕೊನೆಗೆ ಅಷ್ಟಕ್ಕೇ ಒಪ್ಪಿ ಹತ್ತೆಂಟು ರೂಪಾಯಿಗಳ

ಕಾಣಿಕೆ ನಿಶ್ಚಯಿಸಿ ಅವನ ಮನೆಯಲ್ಲಿ ಉಳಿದು ಕೊಂಡರು. ಶ್ರಾದ್ಧಗೀದ್ಧ ಮಾಡಿಸದಿದ್ದರೂ ಗುಡಿ ದೇವಾಲಯಗಳ ಸ್ಥಿತಿ ಕಂಡುಬರಬೇಕಲ್ಲ; ಹೀಗೆಂದು ಅವರು ವಿಶ್ವನಾಥನ ಗುಡಿ, ಸ್ನಾನಘಟ್ಟ, ಅನ್ನಪೂರ್ಣ ದೇವಾಲಯ ಮೊದಲಾದುವುಗಳನ್ನು ಕಾಣಲುಹೋದರು. ದಾರಿಯಲ್ಲಿ ಯಾತ್ರಿಕರ ಸಂಖ್ಯೆಗಿಂತ ಭಿಕ್ಷುಕರ ಸಂಖ್ಯೆ ಅಧಿಕವೆಂದು ಕಂಡಿತು ಇನ್ನು ದೇವರೂ, ಪೂಜಾರಿಗಳೂ, ಮಿತಿಯಿಲ್ಲದಷ್ಟು ದಾರಿಯ ಸಂದುಗೊಂದಿನಲ್ಲೆಲ್ಲಾ ಒಂದೊಂದು ಕಲ್ಲನ್ನಿರಿಸಿ, ಅದಕ್ಕೊಂದು ನಾಮಕರಣಮಾಡಿ, ಇಷ್ಟು ಹೂವನ್ನು ಹಾಕಿ, ಬಳಿಯಲ್ಲೊಬ್ಬ ಪೂಜಾರ್ಯನ ಪ್ರತಿಷ್ಠೆಯಾಗಿತ್ತು. ಬಂದವರಿಗೆ ತನ್ನ ವಿಗ್ರಹದ ಮಹಾತ್ಮೆಯನ್ನು ಹೇಳುವುದು, ಅವರಿಂದ ಕಾಸುಕೀಳುವುದು — ಅವನ ಕೆಲಸ. ಈ ಎಲ್ಲಾ ವಿಗ್ರಹಗಳ ಮುಂದೆ ಒಂದೊಂದು ಕಾಸಿನ ಕಾಣಿಕೆಯಿತ್ತರೂ ಯಾತ್ರಿಕನು, ಊರಿಗೆ ಮರಳಲು, ಸಾಲಮಾಡುವ ಪ್ರಸಂಗ ಬರಬಹುದು. ಈ ರಾಜ್ಯದಲ್ಲಿ ನಮ್ಮ ಮಹಾನುಭಾವರು ತಿಂದ ಬೈಗುಳಕ್ಕೆ ಎಣೆಯಿಲ್ಲ. ಇವರಿಗೆ ಕಾಸುಕೊಡುವ ಮನವಿಲ್ಲ, ಕೊಡದೆ ಪೂಜಾರಿಗಳು ಬಿಡುವಂತಿಲ್ಲ. ದಾರಿಯ ಮೇಲೆ ಹೋಗುವಾಗ ದೃಷ್ಟಿಯು ತಪ್ಪಿ ಅವನ ವಿಗ್ರಹದ ಮೇಲೆ ಬಿದ್ದರೆ ಅವನು ಕಿಂಚಿತ್ ಕಾಣಿಕೆಗಾದರೂ ಹಕ್ಕುದಾರನು. ಇನ್ನು ಕಾಸು ಮಗ್ಗಾಣಿ ಕೊಟ್ಟರೆ, (ಪೂಜಾರಿಯ ಶಾಪಕ್ಕೆ ಶಕ್ತಿಯಿದರೆ) ಕೊಟ್ಟವನ ಕುಲ

ನಾಶವಾಗಬೇಕು ಅವನ ಮೋರೆಗೇ ಆ ಕಾಸು ಎಸೆಯಲ್ಪಡುವುದು. ಅದಕ್ಕೂ ಹೆಚ್ಚಿಗೆ ಹೊರಡುವುದಿಲ್ಲ ವಾದರೆ, ಎಸೆದುದನ್ನು ತಿರುಗಿ ಸ್ವೀಕರಿಸುವುದರಲ್ಲಿ ದಾಕ್ಷಿಣ್ಯವಿಲ್ಲ

ಇನ್ನು ಬ್ರಹ್ಮಚರ್ಯ, ದೈವಭಕ್ತಿ, ನಡೆನುಡಿಗಳಲ್ಲಿ—ಇಲ್ಲಿಯವರು ಪ್ರಯಾಗಕ್ಕೆ ಬಿಟ್ಟುಕೊಡರು. ಆ ವಿಷಯದಲ್ಲಿ ಅನಂತಕೃಷ್ಣನ ಜನ್ಮಭೂಮಿಯೂ ಸಾಕಷ್ಟು ಕೀರ್ತಿವಂತ ಕ್ಷೇತ್ರವೇ. ಹೆಚ್ಚೇನು, ಇವು ಯೋಗ್ಯ ಕ್ಷೇತ್ರದಲ್ಲಿರಲೇಬೇಕಾದ ಲಕ್ಷಣಗಳು.

ನಮ್ಮ ಮಂಡಳದವರ ಮುಂದಿನ ಪಯಣ 'ಗಯೆ'ಗೆ. ಅದು ಹೋದರೂ 'ಗಯಾ'; ಹೋಗದಿದ್ದರೂ 'ಗಯಾ'. ಎಂಥೆಂತಹರಿಂದಲೂ ಅಲ್ಲಿ ಕಾಣಿಕೆ ಹೊರಬೀಳುವುದು ನಮ್ಮ ಪಿತೃಗಳನ್ನೂ ಸ್ವರ್ಗಕ್ಕೆ ಕಳುಹಿಸಬೇಕಾದರೆ, ಸ್ವರ್ಗದ ಬೀಗವಿರುವುದು ಅವರಲ್ಲಿ ನಾಳೆ ನಾವು ಸ್ವರ್ಗವನ್ನು ಏರಬೇಕಾದರೂ, ನಮ್ಮ ಮಕ್ಕಳು ಅಲ್ಲೇ ಹೋಗಿ ಅವರಿಂದ ಸ್ವರ್ಗದ ಪಾಸುಪೋರ್ಟು ಪಡೆಯ ಬೇಕು.

ನಮ್ಮ ಮಂಡಳಿಯವರಿಗೆ ಮೊದಲಾಗಿ ಫಲ್ಗುಣಿ ಸ್ನಾನಮಾಡಬೇಕೆಂದು ಗಯಾಳಿಯ ಅಪ್ಪಣೆಯಾಯಿತು. ಪಾಪ, ರೈಲಿನ ಸೆಕೆಯಲ್ಲಿ ಬಂದವರಿಗೆ ಸ್ನಾನ ಬೇಡವೇ! ಅದಕ್ಕಾಗಿ ಹೊರಟರು. ಗಯಾಳಿಯು ಸ್ನಾನಕ್ಕೆ ಮೊದಲು ಒಬ್ಬೊಬ್ಬರು ೧। ರೂಪಾಯಿಯಂತೆ ಸ್ನಾನದ ಟೀಕ್ಸು ಕೊಡಬೇಕೆಂದು ಹೇಳಿದನು

ವಿಶ್ವಾ:– ನದಿ ನೀರಿಗೆ ನಿಮ್ಮ ಸುಂಕವೇ?

ಗಯಾಳಿ:—ಹಾಗಲ್ಲ, ಈ ನದಿಯು ನಮ್ಮ ಹಕ್ಕಿನದು. ಇಲ್ಲಿ ಸ್ನಾನಮಾಡಿದವರು ಅಷ್ಟು ಕೊಟ್ಟೇ ಕೊಡುತ್ತಾರೆ.

ವಿಶ್ವಾ:—ಎಲ್ಲರೂ.

ಗಯಾಳಿ:—ಹಿಂದುಗಳಾದವರೆಲ್ಲ ಕೊಡುವರು.

ವಿಶ್ವಾ:—ಮುಸಲ್ಮಾನರು?

ಗಯಾಳಿ:—ಅವರಿಗಿಲ್ಲ.

ವಿಶ್ವಾ:–ಅವರ ಮೇಲೆ ನಿಮ್ಮಸುಂಕ ವಸೂಲಿಲ್ಲವೇ?

ಗಯಾಳಿ:—ಅವರು ಭಿನ್ನ ಜಾತಿಯವರು. ನಮ್ಮ ಮಾತು ಕೇಳುತ್ತಾರೆಯೇ?

ವಿಶ್ವಾ:—ನಿಮ್ಮ ಮಾತು ಕೇಳದವರಿಗೆ ನಿಮ್ಮ ಸುಂಕವಿಲ್ಲ. ಹಾಗಾದರೆ ಬಿಡಿ. ನಾವೂ ನಿಮ್ಮ ಮಾತು ಕೇಳುವವರಲ್ಲ.

ಹೀಗೆಂದು ಸ್ನಾನಮಾಡಿದರು. ಮಾಡಿ, ಕಾಣಿಕೆ ಕೊಡಲಿಲ್ಲ. ಗಯಾಳಿಗೆ ಸಿಟ್ಟುಬಂದು ಒಂದು ಸಹಸ್ರ ನಾಮಮಾಲಿಕೆಯನ್ನು ಇವರ ಕೊರಳಿಗೆ ತೊಡಿಸಿ ನಡೆದನು. ಸರಿ, ಸ್ನಾನಮುಗಿಯುವುದರಲ್ಲಿ ಎರಡನೇ ಗಯಾಳಿಯು ಸಿದ್ಧ. ಅವನು ಒಳ್ಳೇ ನಮ್ರತೆಯಿಂದ ಇವರನ್ನು ತನ್ನ ಮನೆಗೆ ಒಯ್ದು ಚೆನ್ನಾಗಿ ಉಪಚರಿಸಿ— "ನಿಮ್ಮ ಪಿತೃಗಳಿಗೆ ನೀವು ಸ್ವರ್ಗಕ್ಕೆ ಕಳುಹಿಸಲೇ ಬೇಕು"— ಎಂದನು.

ವಿಶ್ವಾ:—ಅವರು ಮೊದಲೇ ಹೋಗಿರುವರು.

ಗಯಾಳಿ:—ಹಾಗೆಂದರೇನು ಸ್ವಾಮಿ! ಇಂಥಾ ಭಾರಿ ಕ್ಷೇತ್ರದಲ್ಲಿ ಸುಳ್ಳು ಹೇಳಬಾರದು.

ವಿಶ್ವಾ: – ಅವರು ಸ್ವರ್ಗಸೇರಲ್ಲವೆಂದು ನೀನು ನೋಡಿರುವೆಯಾ?

ಗಯಾಳಿ: – ಹೀಗೆ ಪ್ರಶ್ನೆಮಾಡಿದರೆ ಹೇಗೆ? ಇಲ್ಲಿ ಶ್ರಾದ್ಧಮಾಡಿಸದಿದ್ದರೆ ಸ್ವರ್ಗಕ್ಕೆ ಹೋಗಲು ಬರುವುದಿಲ್ಲ ಎಂಬುದು ಶಾಸ್ತ್ರ.

ಸದಾನಂದ:–ಇಲ್ಲವಪ್ಪಾ, ಅವರು ಸುಮ್ಮನೆ ಚೇಷ್ಟೆ ಮಾಡಿದರು ಶ್ರಾದ್ಧಮಾಡುವವರು ನೀವಿರುವಾಗ, ನಮಗೆ ಮಾಡಿಸಲು ಏನು ಕಸಪಿಸಿ. ಅದರ ರಹಸ್ಯವಿಷ್ಟೆ.-- ನಮ್ಮಲ್ಲಿ ಹೆಚ್ಚು ಹಣವಿಲ್ಲ. ಅದಕ್ಕಾಗಿ— . . . .

ಗಯಾಳಿ: – ಅದು ಬಿಡಿ ಸ್ವಾಮಿ,

ಹೀಗೆಂದು ಅವರಲ್ಲಿ ರಾಜಿಯಾಯಿತು. ಮರು ದಿನ ಸ್ನಾನಮಾಡಿ ವಿಷ್ಣುಪಾದದಲ್ಲಿ ಶ್ರಾದ್ಧ ವಿಧಿಗಳೆಲ್ಲಾ ನಡೆದುವು. ಇದೂ 'ರಖಮು' ರೀತಿಯಲ್ಲೇ ಕೊನೆಗೆ ಗಯಾಳಿಯು ಇವರ ಕೈಗಳನ್ನು ಹೂಮಾಲೆ ಗಳಿಂದ ಕಟ್ಟಿ ಇದನ್ನು ತಾನು ಕಡಿಯುವ ತನಕ ಸ್ವರ್ಗದ ಬಾಗಿಲು ನಿಮ್ಮ ಪಿತೃಗಳಿಗೆ ತರೆಯಲ್ಪಡು ವಂತಿಲ್ಲ. ಅವರಿಷ್ಟು ದಿನ ಪ್ರೇತಲೋಕದಲ್ಲಿ ನರಳು ತ್ತಿದ್ದರು. ಸತ್ಪುತ್ರರಾದ ನೀವು ಅವರಿಗೆ ಸ್ವರ್ಗಪ್ರಾಪ್ತಿ ಮಾಡಿಸಿರಿ "— ಎಂದನು.

ವಿಶ್ವಾಮಿತ್ರ:—ಸ್ವಾಮಿಾ ಗಯಾಳಿಗಳೇ, ಸ್ವಲ್ಪ ನೀರು ತಂದುಕೊಡಿರಿ.

ಗಯಾಳಿ:— ಈ ವಿಧಿ ಮುಗಿಯಲಿ.

ವಿಶ್ವಾಮಿತ್ರ:—ಅಯ್ಯೋ, ಹಾಗೆಂದರಾಗದು ನೀರೀಗ ಬೇಕೇ ಬೇಕು.

ಗಯಾಳಿ:—ಏಕೆ ಅಷ್ಟು ಅವಸರ?

ವಿಶ್ವಾ:— ಊರಲ್ಲಿ ನನ್ನ ಸಂಬಂಧಿಯೊಬ್ಬನಿಗೆ ತೀರಾ ಬಾಯಾರಿಕೆಯಾಗಿದೆ, ಅದಕ್ಕಾಗಿ ನಾನು ಸ್ವಲ್ಪ ನೀರು ಕುಡಿದು ಅವನ ತೃಷೆಯನ್ನು ಹೋಗಲಾಡಿಸದೆ ಮಾರ್ಗವಿಲ್ಲ. ಹೂಂ; ಹೂಂ ಸ್ವಲ್ಪ ನೀರು ತಂದು ನನ್ನ ಬಾಯಿಗೆ ಹಾಕಿರಿ.

ಗಯಾಳಿ:—ನಿಮಗೆ ಹುಚ್ಚೇನು ಸ್ವಾಮಿ? ನೀವು ನೀರು ಕುಡಿದರೆ ನಿಮ್ಮ ಸಂಬಂಧಿಯ ಬಾಯಾರಿಕೆ ಹೋಗುವುದೇ?

ವಿಶ್ವಾ:—ನಿಮ್ಮ ಶಾಸ್ತ್ರದಂತೆ ಏಕಾಗಬಾರದು? ನಾನು ಶ್ರಾದ್ಧಮಾಡಿದ್ದರಿಂದ ನನ್ನ ಪಿತೃಗಳಿಗೆ ಸ್ವರ್ಗ ಪ್ರಾಪ್ತಿಯಾಗುವುದಾದರೆ . . . .

ಗಯಾಳಿ:—ಏನು ಸ್ವಾಮಿ, ಇಂಥಾ ಕ್ಷೇತ್ರದಲ್ಲಿ ಶಾಸ್ತ್ರಗಳನ್ನು ಪರಿಹಾಸ್ಯ ಮಾಡುವಿರಾ

ವಶಿಷ್ಠ:—ನೀವು ಸುಮ್ಮನಿರಿ, ಅವರ ಹವ್ಯಾಸವೇ ಅಂಥದು ಈಗ ನಮ್ಮ ಪಿತೃಗಳು ಸ್ವರ್ಗಕ್ಕೆ ಹೋಗಲು ಏನಾಗಬೇಕು?

ದೂರ್ವಾಸ:—ಅವರು ನರಕಕ್ಕೆ ಹೋಗದೆ ಸ್ವರ್ಗಕ್ಕೆ ಹೋದರೆಂದು ನಮಗೆ ಹೇಗೆ ತಿಳಿಯಬೇಕು

ಗಯಾಳಿ:—ಅದರಲ್ಲಿ ಸಂಶಯವೇನು ಸ್ವಾಮಿ?

ಅವರು ಸ್ವರ್ಗಕ್ಕೆ ಹೋಗುತ್ತಾರೆ ಸ್ಥಳಪುರಾಣ ನೋಡ ಬಾರದೆ? ಆದರೆ ನಮ್ಮ ಕಾಣಿಕೆ ಯಥಾಯೋಗ್ಯವಾಗಿ ಬಂದರೆ . .

ದೂರ್ವಾಸ:— ಅಂದರೆ, ಈ ಹೂಸರಗಳನ್ನು ಬಿಡಿಸಿದರೆ ಸ್ವರ್ಗದ ಬಾಗಿಲು ತೆರೆಯುವದು

ಗಯಾಳಿ: —ಹಾಗೆ ಬಿಡಿಸಬೇಕಾದರೆ ನಮ್ಮ ಕಾಣಿಕೆ ಸಲ್ಲಬೇಕು. ಏನಿಲ್ಲ— ಒಬ್ಬೊಬ್ಬರು ಒಂದು ನೂರು ರೂಪಾಯಿ ಕೊಟ್ಟರೆ ಮಾತ್ರ ಬಿಡಿಸುವೆ.

ವಿಶ್ವಾ:—ಇಲ್ಲವಾದರೆ?

ದೂರ್ವಾಸ:— ಪಿತೃಗಳಿಗೆ ಅಧೋಗತಿಯು ಮಕ್ಕಳಾದ ನಿಮ್ಮಿಂದ ಬಂತೆಂದಾದೀತು.

ವಿಶ್ವಾ:—ಸ್ವಾಮಿ ಸ್ವರ್ಗದಲ್ಲಿ ಬ್ರಿಟಿಷರೂಪಾಯಿಗಳು ಚಲಾವಣೆಯಾಗುತ್ತವೆಯೇನು?

ದೂರ್ವಾಸ: -ಈ ಟೋಲುಗೇಟು ಸ್ಥಾಪನೆಯಾಗಿ, ಅದಕ್ಕೆ ನಿಮ್ಮನ್ನು ಅಧಿಕಾರಿಯಾಗಿ ಮಾಡಿ, ಎಷ್ಟು ದಿವಸಗಳಾದುವು?

ಗಯಾಳಿಯು ಈ ಪ್ರಶ್ನೆಗಳನ್ನು ಕೇಳಿ ಬೆಂಕಿಯಾದನು ದೂರ್ವಾಸ, ವಿಶ್ವಾಮಿತ್ರರ ಸಿಟ್ಟು ಅದಕ್ಕೊಂದು ಕಡಿಮೆಯೇ? ವಸಿಷ್ಠ ಯಮಧರ್ಮರನ್ನು ತಡೆಯುವಷ್ಟರಲ್ಲಿ ಅವರಾಗಿ, ಕಟ್ಟಿದ ಕೈಗಳನ್ನು ಗಯಾಳಿಯ ತಲೆಯ ಮೇಲೇರಿಸಿ ಬಿಡಿಸಿಕೊಂಡರು. ಸರಿ! ಮತ್ತೇನು, ಕ್ಷೇತ್ರವಾಸಿಯ ಪುರಾಣ ಆರಂಭವಾಯಿತು! ಯಮಧರ್ಮನಿಗಂತೂ, ತನ್ನ ಸ್ವರ್ಗದ ಪಾರುಪತ್ಯ

ವನ್ನು ವಹಿಸಿಕೊಂಡ ಗಯಾಳಿಗಳನ್ನು ಕಂಡು ಬಲು ಹರುಷವಾಯಿತು ಅವರಿಗೆ ಮರುಳಾಗಿ ಬರುವ ಯಾತ್ರಿಕರಿಗೆ ಅಂಥ ಸ್ವರ್ಗವೇ ತಕ್ಕುದೆಂದು ಅವನೂ ನಿರ್ಧರಿಸಿದನು ಅವರು ಹಿಂದಿನ ದಿನ ಬರುವಾಗ ಯಾತ್ರಿಕರ ಮನೋವೃತ್ತಿಯನ್ನು ಅಲ್ಪಸ್ವಲ್ಪ ತಿಳಿದಿದ್ದನು. ಅಂಥವರಲ್ಲಿ ಒಂದು ವಂಗಡದವರು, ವಿಷ್ಣುಪಾದದಲ್ಲಿ— ಇವರ ಕಣ್ಮುಂದೆ ಪಿತೃಗಳಿಗೆ ಸ್ವರ್ಗದ ಟೀಕೆಟನ್ನು ತಗಿಸಿಕೊಡಲು ೫೦೦ ರೂಪಾಯಿಗಳನ್ನು 'ತೆತ್ತಿದ್ದರು. ಆದರೆ ಅದೇ ಅವರು — ಹಾದಿಯಲ್ಲಿ ಹೊಟ್ಟೆಗಿಲ್ಲದ ಒಬ್ಬ ಅಂಗವಿಹೀನನು ಒಂದು ಕಾಸನ್ನು ಕೇಳಿದಾಗ ಅವನನ್ನೂ ಚೆನ್ನಾಗಿ ಬೈದೂ ಬಿಟ್ಟಿದ್ದರು.

ಎರಡೂ ಗಯಾಳಿಗಳು ಇವರ ಕೈಯಲ್ಲಿ ಪರಾಜಿತರಾಗಿ ಇವರಿಗೆ 'ವಾಕ್ಕಪ್ಪ'ವನ್ನು ಕೊಟ್ಟ ಬಳಿಕ ಮೂರನೆಯ ಮಹಾನುಭಾವನೊಬ್ಬನು ಗಂಟುಬಿದ್ದನು. ಅವನು ಎರಡನೆಯವನಿಗಾದ ಸಂಭಾವನೆ ಕಂಡರೂ, ಕೈತಪ್ಪಬಾರದೆಂದು ಇವರಿಂದ ಪುಕ್ಕಟೆ ಶ್ರಾದ್ಧಮಾಡಿಸಿಬಿಟ್ಟು, ಈ ಕ್ಷೇತ್ರಕ್ಕೆ ಬಂದುದಕ್ಕಾಗಿ ಏನಾದರೊಂದು ಪ್ರೀತಿಕರ ವಸ್ತುವನ್ನು ತ್ಯಜಿಸಬೇಕೆಂದು ಕೇಳಿದನು. ಇವರ ಬಳಿ ನಿಂತಿದ್ದ ಒಬ್ಬಿಬ್ಬರು— ಹುಣಿಸೇ ಹಣ್ಣು, ಹಾಗಲಕಾಯಿ, ಪಡವಲಕಾಯಿ, ಬಿಟ್ಟಿದ್ದರು (ತಮಗೆ ಆಗದ್ದರಿಂದ) ಕಾಮಿನಿ, ಕಾಂಚನ, ಅರಿಷಡ್ವರ್ಗಗಳನ್ನು ಬಿಟ್ಟವನೊಬ್ಬನೂ ಇಲ್ಲ.

ಅದನ್ನು ಬಿಡಬೇಕೆಂದಾಗಿದ್ದರೆ ಅಲ್ಲಿಗೆ ಬರುವವರೇ ಇದ್ದಿಲ್ಲ. ಅಂತು ಈಗ ಸರದಿ ಸಮಿತಿಯುವರದ್ದಷ್ಟೆ. 'ಏನಾದರೂ ಬಿಡಿರಿ, ಏನಾದರೂ ಬಿಡಿರಿ' ಎಂಬ ಗಯೂಳಿಯ ಆಗ್ರಹಕ್ಕೆ ವಿಶ್ವಾಮಿತ್ರನು-ಭಾರಿ ಪ್ರತಿಜ್ಞೆ ಮಾಡುವವನಂತೆ-"ನಾನು ಇನ್ನು ಮುಂದೆ ಈ ರಕ್ಕರು ತುಂಬಿರುವ ಕ್ಷೇತ್ರಗಳಿಗೆ ಬರುವುದನ್ನು ಬಿಡುತ್ತೇನೆ ಒಮ್ಮೆ ಅದು ಸಾಧ್ಯವಾಗದಿದ್ದರೆ, ಇಲ್ಲಿನ ಪಂಡರಿಗೆ ಕಾಸು ಕೂಡುವುದನ್ನಾದರೂ ಬಿಡುತ್ತೇನೆ"— ಎಂದು ಬಿಟ್ಟನು

ಉಳಿದವರು ಗೊಳ್ಳೆಂದು ನಕ್ಕರು. ಗಯೂಳಿಯ ನಾಸಾಗ್ರದಲ್ಲಿ ಕಂಪೇರಿತು ಅವನು ವಿಶ್ವಾಮಿತ್ರನ ತಲೆಯ ಮೇಲೊಂದು ಏಟನ್ನು ಕೊಡಲು ಹೋದನು ವಿಶ್ವಾಮಿತ್ರನು ಮೆಲ್ಲಗೆ ಅವನ ಕಿವಿಹಿಡಿದು ಬಾಗಿಲಿನಿಂದ ಹೊರಕ್ಕೆ ಎಳೆದು ಹಾಕಿಬಿಟ್ಟನು ತಮ್ಮ ವ್ಯವಸಾಯ ಬಂಧುಗಳಿಬ್ಬರಿಗೂ ಆದ ಅಪಮಾನವನ್ನು ಇದುವರೆಗೆ ಕಂಡು ನಕ್ಕ ಉಳಿದ ಗಯೂಳಿಗಳು, ಈ ವಿಚಾರವು ಪ್ರಬಲವಾದರೆ ತಮ್ಮ ವರಮಾನಕ್ಕೆ ಸಂಚುಗಾರವಿದೆಯೆಂದು ತಿಳಿದು, ಕಾಗೆಯ ಹಿಂಡಿನಂತೆ ಈ ಐವರ ಮೇಲೆ ಬಿದ್ದರು. ಗಯೂಳಿಗಳ ತಲೆಯ ರಾಶಿಯೊಳಗೆ ಸಮಿತಿಯುವರ ತಲೆಗಳು ಕಾಣದೆಹೋದುವು. ಸಮಿತಿಯುವರು ತಮ್ಮ ದೈವೀಶಕ್ತಿಯಿಂದ ಅಲ್ಲಿಂದ ಅದೃಶ್ಯರಾದರು. ಗಯೂಳಿಗಳು ಹುಡುಕಲು ಅವರ ಮುಂದೆ ಅಂಗಲಾಚಿ, 'ಪ್ರಾಣವುಳಿಸಿ,' ಎಂದು ಬೇಡುವ ಚತುರ್ಮುಖಿಯೊಬ್ಬನಲ್ಲದೆ ಬೇರೆ ಯಾರೂ ಕಾಣಿಸಲಿಲ್ಲ.

ಆಶ್ಚರ್ಯದಿಂದ ಅವರು ಬೆಚ್ಚಿಬಿದ್ದರು. ತಮ್ಮ ಸಿಟ್ಟನ್ನು ಈ ಚತುರ್ಭಾಷಿಯ ಮೇಲೆ ತೋರಿಸಲು ಅವನಿಗೆ ಒಂದೇಟು ಕೊಟ್ಟೇ ಕೊಟ್ಟರು. ಏಟಿನ ಮಳೆಯೇ ಆರಂಭವಾಯಿತು ಚತುರ್ಭಾಷಿಯ ಕಿರುಚಾಟ ದೂರದಲ್ಲಿ ಅಶರೀರಿಯಾಗಿ ನಿಂತ ವಿಶ್ವಾಮಿತ್ರನಿಗೆ ಕೇಳಿಸಿತು. ಅವನು ತೀರ ಪ್ರಮಾದವಾಯಿತೆಂದು ಅಲ್ಲಿಗೋಡಿ ಬಂದು ತಾನು ಅದೃಶ್ಯನಾಗಿದ್ದು ದಪ್ಪ ನಾದೊಬ್ಬ ಗಯಾಳಿಯನ್ನು ಡಾಲನ್ನಾಗಿ ಹಿಡಿದು ಆ ರಾಶಿಯನ್ನು ನುಗ್ಗಿ, ಪಾಪದ ಭಾಷಾಂತರಕರ್ತನನ್ನು ಹಾಗೂ ಹೀಗೂ ಉಳಿಸಿ ತಂದನು.

ಆ ಏಟುತಿಂದ ಪುಣ್ಯಾತ್ಮನು ಸುಮ್ಮನಿರಬೇಕೇ? ಇವರೊಡನಿದ್ದರೆ ತನಗೆ ಪ್ರಾಣಾಪಾಯವೇ ಬರುವು ದೆಂದು ತಿಳಿದು, ಆ ದಿನರಾತ್ರಿ ಅವರೆಲ್ಲರೂ ಗಯೆ ಯಿಂದ ಕಲ್ಕತ್ತೆಗೆ ಪ್ರಯಾಣ ಬೆಳೆಯಿಸುತ್ತಿರುವಾಗ ತನ್ನೂರಾದ ಮೈಸೂರಿನ ಹಾದಿ ಹಿಡಿದನು. ಬೆಳಿಗ್ಗೆ ಕಲ್ಕತ್ತೆಯ 'ಪ್ಲಾಟುಫಾರ್ಮಿ'ನಲ್ಲಿ ನೋಡುವಾಗ ಷಷ್ಠರಾದವರು ಬರೇ 'ಪಂಚಮ'ರಾಗಿದ್ದರು

ಅಷ್ಟಕ್ಕೇ ಅವನ ಸೇಡುಮುಗಿಯಲಿಲ್ಲ ತನ್ನ ಮುಂದೆ ಈ ಸಮಿತಿಯವರು ನಡೆಯಿಸಿದ ಕೃತಿಗಳಿಗೆ, ತನ್ನ ಕೈಲಾದಷ್ಟು ಬಣ್ಣ ಸವರಿ, ಮೈಸೂರಿನ ಧೂಮಕೇತು ವಿನಲ್ಲಿ ಪ್ರಕಟಿಸಿದನು. ಸರಿ. ಮೈಸೂರು ದಂಗೆ, ಜತೆಯಲ್ಲಿ ಈ ಪಿಕಲಾಟ— ಇವುಗಳ ವರದಿಗಳು ಒಟ್ಟು ಸೇರಿದ ಬಳಿಕ ಕೇಳಬೇಕೆ? ಅದೂ 'ಧೂಮಕೇತು' ವಿನ ಬಾಯಿ

ಯಲ್ಲಿ! ಪತ್ರಿಕೆಯ ಸಂಪಾದಕನು ಪುಟ ಪುಟಗಳನ್ನು ಇವರ ಚರಿತ್ರೆಯಿಂದ ತುಂಬಿಸಿ ಇವರು ಹಿಂದೂ ಧರ್ಮ ನಾಶಮಾಡಲು ಹೊರಟ"ವಿಕ್ರಾಂತಿ"ಗಳು ಎಂದುಬಿಟ್ಟು, ["ವಿಕ್ರಾಂತಿ" ಎಂಬ ಶಬ್ದವನ್ನು 'ಇದಕ್ಕಾಗಿಯೇ ತಯಾರು ಮಾಡಿದುದು. ಸಂಪಾದಕರಿಗೆ Revolutionary ಎಂಬುದಕ್ಕೆ 'ಕ್ರಾಂತಿಕಾರ' ಎಂಬ ಅರ್ಥದಲ್ಲಿ ಅಷ್ಟು ಬಿರುಸಾಗಿ ಕಾಣದ್ದರಿಂದ 'ವಿಕ್ರಾಂತಿ'ಯೆಂಬ ನವ ಶಬ್ದದ ತಯಾರಿಮಾಡಿ—) ಇವರ ಮೇಲೆ ಬೈಗಳ ಸುರಿಮಳೆಯನ್ನು ಕರೆ–ಲೇಖದ ಅಂತ್ಯಕ್ಕೆ "ಬ್ರಾಹ್ಮಣರನ್ನು ನಂಬಬೇಡಿರಿ"—ಎಂದು ಠರಾಯಿಸಿಬಿಟ್ಟನು.

## ಪ್ರಕರಣ ೧೪.

## ಪತ್ರಿಕಾ ನಿರೀಕ್ಷಣೆ.

ನಮ್ಮ ಯಾವತ್ತು ಸಮಿತಿಯವರು ಪತ್ರಿಕೆಗಳನ್ನು ನಿರೀಕ್ಷಿಸುವುದರಲ್ಲಿ ಪ್ರವೀಣರು. ಅದರಿಂದವರಿಗೆ ಜಗತ್ತು ಅವರನ್ನು ಯಾವ ದೃಷ್ಟಿಯಿಂದ ನೋಡುತ್ತದೆಂದೂ, ತಾವು ತಾವು ಕೈಕೊಂಡ ವಿಷಯಗಳ ಮೇಲೆ ಅಲ್ಲಲ್ಲಾಗುವ ಘಟನೆಗಳು ಹೇಗೆ ಪ್ರತಿಬಿಂಬಿಸುವುವೆಂದೂ ತಿಳಿಯುವ ಆವಶ್ಯಕತೆಯಿಲ್ಲವೆ? ಪತ್ರಿಕೆಗಳನ್ನೋದುವಾಗ ಯುಕ್ತ ಕುಶಿವಾಸಿ ಬಿಟ್ಟೇ ಅವರು ಓದುತ್ತಿದ್ದರಾದರೂ, ಪತ್ರಿಕೆಗಳಲ್ಲಿ ಬರುವುದೆಲ್ಲಾ ಸುಳ್ಳಲ್ಲವಷ್ಟೆ! ಅಂತು ವಾಚಕರಿಗಾಗಿ ಅವರು ಸಂಗ್ರ

ಹಿಸಿಟ್ಟ ವರ್ತಮಾನ ಪತ್ರಗಳ ಉದ್ಧೃತ ಉದಾಹರ ಣೆಗಳನ್ನು-ಕದು ಕೊಡುವವು

* * * * *

## ಮೈಸೂರು ಧೂಮಕೇತು.

ಕಳೆದ ರಾಮನವಮಿ ಸಮಯದಲ್ಲಿ ಮೈಸೂರಿಗೆ ಆಗ ಮಿಸಿದ ಸಾಧುಗಳ ಸೋಗಿನಲ್ಲಿದ್ದವರೂ, ಮೈಸೂರನ್ನು ಮಂಕುಗೊಳಿಸಿದ ಸಾಧು ಸದಾನಂದನೂ, "ವಿಕ್ರಾಂತಿ" ಗಳೆಂದು ಈಗ ಹೊರಬಿದ್ದಿರುತ್ತದೆ ಮೊನ್ನೆ ಮೊನ್ನೆ ಸಾಧು ಸದಾನಂದನೂ ಅವನ ಗೆಳೆಯರು ಕೆಲವರೂ ಕಾಶಿ, ಅಲಹಾಬಾದ, ಗಯಾ ಪ್ರಾಂತಗಳಿಗೆ ಹೋಗಿ ದ್ದರಂತೆ ಅಲಹಾಬಾದಿನಲ್ಲಿ ಅವರು ಒಬ್ಬ ಪುಂಡ ನನ್ನು ಹೊಡೆದು ಕೃತಪ್ಪಿಸಿಕೊಂಡು, ಕಾಶಿಗೆ ಬಂದ ರಂತೆ ಕಾಶಿಯಲ್ಲಿ ಹಲವು ದೇವಾಲಯಗಳ ಪೂಜಾ ರ್ಯರನ್ನು ಮನಬಂದಂತೆ ನಿಂದಿಸಿದರಂತೆ. ಕೆಲವು ಕಡೆ ಗಳಲ್ಲಿ ತಾವು ಹಿಂದೂ ಸಾಧುಗಳೆಂದು ತೋರಿಸಿ ಕೊಂಡರೂ, ಪೂಜೆ, ದಕ್ಷಿಣೆಗಳ ಸುದ್ದಿಯಿಲ್ಲವಂತೆ. ಒಂದು ವಾರದ ಹಿಂದೆ ಗಯೆಗೆ ಹೋಗಿ, ಅಲ್ಲಿನ ಜನ ರಿಗೆ ಶ್ರಾದ್ಧವನ್ನು ಮಾಡುವುದು ನಿರರ್ಥಕವೆಂದರಂತೆ. ವಿಷ್ಣುಪಾದದಲ್ಲಿ ದೇವರ ಸೇವೆ ಮಾಡಿದುದರಿಂದ ಪಾಪ ಬರುತ್ತದೆಂದರಂತೆ. ಇದರಿಂದ ಅಲ್ಲಿನ ಗಯಾಳಿಗಳಿಗೆ ಮನಃಕ್ಲೇಶವುಂಟಾಗಿ, ಈ ಕಪಟಸನ್ಯಾಸಿಗಳಿಗೆ ಚೆನ್ನಾಗಿ ಏಟು ಕೊಟ್ಟುದರಿಂದ ಅವರು, ತಮ್ಮ ಮೈಸೂರಿನ ಭಾ

ಷಾಂತರಕರ್ತರಿಗೆ ವೇತನ ಸಹ ಕೊಡದೆ ಓಡಿಹೋದ ರೆಂದು ಸ್ವತಃ ಆ ಭಾಷಾಂತರಕರ್ತರೇ ತಿಳಿಸುತ್ತಾರೆ.

* * * * *

## ದೇದೀಪ್ಯಮಾನ. ಗಯಾ.

ಈ ದಿನ ಇಲ್ಲಿ ಯಾರೋ ಕೆಲವರು ಯಾತ್ರಿಕರ ವೇಷದಿಂದ ವಿಷ್ಣುಪಾದಕ್ಕೆ ಬಂದು, ಅಲ್ಲಿನ ಗಯಾಳಿಗಳನ್ನು ಮನಬಂದಂತೆ ನಿಂದಿಸಿ, ಕೆಲವರಿಗೆ ಬಲವಾದ ಏಟು ಹೊಡೆದು ಕಾಣೆಯಾಗಿರುವರೆಂದು ವದಂತಿ. ಹಿಂದೂಧರ್ಮವನ್ನು ಇವರು ಬಲವಾಗಿ ನಿಂದಿಸಿದರಂತೆ. ಪ್ರಾಯಶಃ ಹಿಂದೂ ದೇವಾಲಯಗಳನ್ನು ಕೆಡಿಸಲು ಬಂದ ವೇಷಧಾರಿ ಮುಸಲ್ಮಾನರೆಂದು ಊಹೆ. ದೇವಾಲಯದ ಪೂಜಾರ್ಯರು ಎಚ್ಚರವಾಗಿರಲಿ.

* * * *

## ಆರ್ಯಸುಧಾರಕ. ಅಲಹಾಬಾದ.

ಕಲವು ಪ್ರಸಿದ್ಧ ಪುರುಷರು ಗಯೆಗೆ ಬಂದು, ಅಲ್ಲಿನ ವಿಷ್ಣುಪಾದ ಗುಡಿಯಲ್ಲಿ ಹಣ ಸೆಳೆಯುವ ಗಯಾಳಿಗೆ ಅವರ ಶ್ರಾದ್ಧದಿಂದ ಪಿತೃಗಳಿಗೆ ಮೋಕ್ಷ ಸಲಿಸುವುದು ಎಷ್ಟು ಅರ್ಥಶೂನ್ಯವೆಂದು ಅವರಲ್ಲಿ ವಾದಿಸಿ ಅವರನ್ನೂ ತರ್ಕದಲ್ಲಿ ಸೋಲಿಸಿದರಂತೆ. ಇದು ಗಯಾಳಿಗಳಿಗೆ ಸಹನವಾಗದೆ ಅವರನ್ನು ಓಡಿಸಿಕೊಂಡು ಬಂದರೆಂಬುದೂ, ಆದರೆ ಅವರು ಸ್ವಶಕ್ತಿಯಿಂದ ಸೊಪ್ಪು ಹಾಕದಿದ್ದುದರಿಂದ ಗಯಾಳಿಗಳು ಪರಾರಿಯಾದ

ರೆಂದೂ ವದಂತಿ. ಹಿಂದೂ ಧರ್ಮದ ಅಂಧ ಶ್ರದ್ಧೆಯು ಹೋಗಲೇಬೇಕು. ಅರ್ಥಶೂನ್ಯ ಕ್ಷೇತ್ರವಿಧಿಗಳೂ ಹೋಗುವುದಲ್ಲದೆ ಮೂರ್ತಿಪೂಜೆಯು ನಿರ್ನಾಮವಾದ ಹೊರತು ಹಿಂದೂ ಧರ್ಮವು ಉದ್ಧಾರವಾಗಲಾರದೆಂಬ ಅವರ ಉಪದೇಶದೊಡನೆ ನಮ್ಮ ಸಹಾನುಭೂತಿಯಿದೆ. ಸುಧಾರಣೆಗೆ ಜಯವಾಗಲಿ."

* * * * *

## ದೈನಿಕ ಪ್ರಕಾಶ. ಕಾಶಿ.

ಗಯೆಯಲ್ಲಿ ಊಟ ಎಬ್ಬಿಸಿದವರು ಮಾಯಾಶಾಸ್ತ್ರ ಬಲ್ಲವರೆಂದೂ, ಅಲ್ಲಿ ಅವರು ಮಾಯವಾಗಿ ೫-೬ ನಿಮಿಷಗಳ ಬಳಿಕ ಅಂತರಿಕ್ಷದಲ್ಲಿ ಕಾಣಿಸಿಕೊಂಡರೆಂದು ವದಂತಿ

* * * * *

## ದೇಶಭಕ್ತ. ಮದ್ರಾಸು.

### ಪ್ರ ಕ ಟ ಣೆ ಗ ಳು

**ಬೇಕು.** ವರುಷಕ್ಕೆ ೧೫೦೦೦ಕ್ಕೆ ಮಿಕ್ಕಿ ವರಮಾನವಿರುವ ಸ್ಮಾರ್ಥ ಬ್ರಾಹ್ಮಣ ಶ್ರೀಮಂತನಿಗೆ, ಮಕ್ಕಳ ಆರೈಕೆ, ಮನೆಕೆಲಸ, ಶೈತ್ಯೋಪಚಾರಗಳನ್ನು ಬಲ್ಲ, ಅದೇ ಜಾತಿಯ ತರುಣ ಪತ್ನಿಯು ಬೇಕು. ಇಂಥ ಸಂಬಂಧವನ್ನು ದೊರಕಿಸಿಕೊಡಲು ಸಹಾಯರಾದವರಿಗೆ ಯಥಾಯೋಗ್ಯ ಪುರಸ್ಕಾರವಿದೆ.

20. A. C/D ದೇಶಭಕ್ತ.

## ಸ್ತ್ರೀ ವಿಕ್ರಯಗಾರರು ಬೇಕು.

ಹೊಸತಾಗಿ ಬೆಂಗಳೂರು ಚಿಕ್ಕಪೇಟೆಯಲ್ಲಿ ತೆರೆಯ ಲಿರುವ-- ಫ್ಯಾಶನೆಬಲ್ ಡ್ರೆಸ್ ಅಂಡ್ ಟ್ಯಾಲೆಟ್ ಶಾಪಿನಲ್ಲಿ ವಿಕ್ರಯಗಾರರಾಗಿ ನಿಲ್ಲಲು ಸಿದ್ಧರಿರುವ ಅವಿವಾಹಿತ, ರೂಪವತಿ, ವಿದ್ಯಾವತಿಯರಾದ ತರುಣ ಸ್ತ್ರೀಯರು ಬೇಕು ಮಾಸಿಕ ವೇತನ ೧೦೦-೫-೧೫೦.

Charms C/o **ದೇಶಭಕ್ತ.**

## ಏಕೆ ಅಳುವಿರಿ?

ವಯಸ್ಸು ಮೀರಿತೆಂದು ಯಾರೂ ಅಳುವ ಕಾರಣವಿಲ್ಲ. ಎಂಟೇ ಎಂಟು ದಿವಸಗಳ ವರೆಗೆ ನಮ್ಮ "ವಜ್ರದೇಹಿ" ರಸಾಯನವನ್ನು ಸ್ವೀಕರಿಸಿದ್ದಾದರೆ— **೮೧** ವಯಸ್ಸಿನವರು **೧೮** ವಯಸ್ಸಿನವರಾಗಬಲ್ಲರು

**ಪ್ರಶಂಸಾ ಪತ್ರಗಳನ್ನು ನೋಡಿರಿ.**

ಕೊಡುವವರ ಮಾತುಗಳಿಗಿಂತ ಕೊಳ್ಳುವವರ ಮಾತಿಗೆ ಬೆಲ.

ಮಹಾಶಯ,

ನಿಮ್ಮ ವಜ್ರದೇಹಿ ರಸಾಯನವನ್ನು ಸೇವಿಸುತ್ತಾ ಬಂದು ಇಂದಿಗೆ ೮ ದಿವಸಗಳೂ ಪೂರ್ಣ ಕಳೆಯಲಿಲ್ಲ. ನನ್ನ ಶಾರೀರಿಕ ಉತ್ಸಾಹ ಹೇಳಿ ತೀರದು. ಎಷ್ಟೆಷ್ಟು ಡಾಕ್ಟರರು ಕೊಡಲಾರದ ಗುಣವನ್ನು ಇದೀಗ ನನಗೆ ಕೊಟ್ಟದೆ. ನಿಮ್ಮ ಔಷಧದ ದೆಸೆ

ಯಿಂದ ನನ್ನ ೭೦ನೇ ವಯುಸ್ಸಿನಲ್ಲಿ ನನ್ನ ಚತುರ್ಥ ಪತ್ನಿಯ ಯೌವನವು ಸಾರ್ಥಕವಾಯಿತು . . ಇತಿ ನಿಮ್ಮ ತೃಪ್ತಿಗೊಂಡ ಗಿರಾಕಿ

ಇದಕ್ಕೆ ಹೆಚ್ಚಿನ ಶಿಫಾರಸು ಏನುಬೇಕು?

ಕ್ರಯ ಶೀಸೆ ೧ಕ್ಕೆ ೫ ರೂಪಾಯಿ

ವಿಳಾಸ:—

**ದಿ ವಜ್ರದೇಹಿ ಮೆನ್ಯುಫ್ಯಾಕ್ಚರಿ.**

P. B. 1''0907. ಮದರಾಸು.

## ತರುಣರು ಓದಲೇ ಬೇಕಾದ ಪುಸ್ತಕ.

ಜೀವನವು ವಿಷಯಾದಿ ಭೋಗಗಳ ಸಲುವಾಗಿದೆ ಅದನ್ನು ಹೇಗೆ ಸಾರ್ಥಕಗೊಳಿಸಿಕೊಳ್ಳಬಹುದೆಂದು ತಿಳಿಯಲು ನಮ್ಮ ನವನವೀನ **"ದಾಂಪತ್ಯ ಪ್ರಕಾಶ"** ಎಂಬ ಗ್ರಂಥವನ್ನೋದಿರಿ ಈ ಗ್ರಂಥವು ಪ್ಯಾರಿಸಿನ ನವತರುಣ ತರುಣಿಯರ ಶರೀರ ಚಿತ್ರಗಳಿಂದಲಂಕೃತ ವಾದುದು. ವಿಷಯುಗಳಂತೂ ಅನುಭವಶಾಲಿ ತರುಣ ತರುಣಿಯರ ಲೇಖನದಿಂದಲೇ ಸಂಗ್ರಹಿತವಾದುವು.

ಈ ಅದ್ಭುತ ಗ್ರಂಥದ ಬೆಲೆ ಕೇವಲ ಮೂರು ರೂಪಾಯಿ.

**ತಾರುಣ್ಯ ಪ್ರಕಟನಾಲಯ.**

ಪಾಂಡುಚೆರಿ.

ಒಂದು ವಾರದಲ್ಲಿ ೫೦೦೦ ಪ್ರತಿಗಳು ವಿಕ್ರಯವಾಗಿವೆ.

ಅಂಥ ಗ್ರಂಥವು ನಮ್ಮ

## "ವಿವಾಹದ ಮುಂಕನ್ನು ಬಿಡಿರಿ."

ಎಂಬುದು.

ಭಾರೀ ಭಾರೀ ಪಾಶ್ಚಾತ್ಯ ವೈಜ್ಞಾನಿಕರ ಮತವನ್ನೊಳಗೊಂಡ, ವಿವಾಹದ ಮೂಢ ಕಲ್ಪನೆಯ ಜನರನ್ನು ಬೆರಗುಮಾಡಿದ ಗ್ರಂಥವಿದು. ಓದಿರಿ-ಅಂದರೆ ಸ್ವಾರಸ್ಯ ತಿಳಿಯುವುದು.

ಬೆಲೆ ೧ ರೂಪಾಯಿ

**ಪ್ರೇಮ ಮಂಡಲ.**

ನಾಗಪುರ.

**ವಾರ್ತಾಶೇಜ** **ಧಾರವಾಡ.**

## ಬಿಸಿ ಬಿಸಿ ಸುದ್ದಿಗಳ ಸುಗ್ಗಿ.

**ಮುಪ್ಪಿನಲ್ಲೂ ತಾರುಣ್ಯ** ವಿಜಾಪುರದ ಶ್ರೀಮಂತ ನಾರಾಯಣ ಜಯವಂತರಾವ್ ನಾಯಕ್ ಇವರು ತಮ್ಮ ೬೧ನೇ ವಯಸ್ಸಿನಲ್ಲಿಯೂ ತಾರುಣ್ಯದ ಹುರುಪನ್ನೇ ತೋರಿಸುತ್ತಿರುವರು. ಅವರಿಗೆ ಮೊನ್ನೆ ದಿನ ಶೋಲಾಪುರ ಶ್ರೀಮಂತ ಬಂಡೇರಾವ್ ಮಹದೇವರಾಯರ ಕನ್ನೆಯನ್ನು ಕೊಟ್ಟು ಲಗ್ನವಾಯಿತು ಕೂದಲು ನೆರೆತರೂ ಮನಸ್ಸು ನೆರೆಯಲಿಲ್ಲ

## ತಂದೆಯಿಂದ ಮಗಳ ಕೊಲೆ.

ರಾಮಪುರದ ಕೇಶವಾಚಾರ್ಯರ ಮಗಳಿಗೆ ೧೨ನೇ ವಯಸ್ಸಿನಲ್ಲೇ ವೈಧವ್ಯ ಪ್ರಾಪ್ತಿಸಿತು. ಅವಳು ಅಂದಿನಿಂದ ತವರುಮನೆಯಲ್ಲೆ ಇದ್ದಳು. ಅಲ್ಲಿ ಅವಳಿಗೆ ನೆರಮನೆಯ ಸ್ವಜಾತಿ ತರುಣನೊಬ್ಬನೊಡನೆ ಅನುರಾಗ ಉಂಟಾಗಿ ಅವಳು ಅವನನ್ನು ಪುನರ್ವಿವಾಹವಾಗುವೆನೆಂದಳಂತ ಇದರಿಂದ ಕುಲಾಚಾರಕ್ಕೆ ಹಾನಿಯೆಂದು ತಂದೆಯು ಅವಳ ಸೂಚನೆಯನ್ನು ಖಂಡಿಸಿ, ಇದುವರೆಗೆ ಮಗಳ ತಲೆಯಮೇಲೆ ನೆರೆಯ ಬಿಟ್ಟ ಕೂದಲನ್ನು, ಇನ್ನು ಬಿಡಬಾರದೆಂದು ಕತ್ತರಿಸಿದನಂತೆ ಬಾಲಕಿಯು ಅದೇ ದಿನ ರಾತ್ರಿ ವ್ಯಥೆಯಿಂದ ಆತ್ಮಹತ್ಯೆಯನ್ನು ಮಾಡಿಕೊಂಡಳಂತೆ

## ಪಂಚಮರ ಸೊಕ್ಕು.

ಮಂಗಳೂರು ಜಿಲ್ಲೆಯಲ್ಲಿ ಒಂದು ಹಳ್ಳಿಯಲ್ಲೀಗ ಕೆಲವು ಮಂದಿ ಪಂಚಮರು ಅಲ್ಲಿನ ದೇವಾಲಯ ಪ್ರವೇಶವನ್ನು ಮಾಡುವೆವೆಂದು ಆಗ್ರಹ ಹಿಡಿದಿರುವರಂತೆ! ಸಲಿಗೆಯ ಪ್ರತಿಫಲ!

**ಕ್ರೈಸ್ತ ವಿಜಯ.** ಮಂಗಳೂರು.

ತಾ ೧೮ನೇ ಬುಧವಾರದ ದಿನ ನಮ್ಮ ಮಿಶಿಸಿನ ರೆವರೆಂಡ್ ಶ್ರೀ ನಿಕಾಲಸ ಸೋಜರವರು ಕಿಟ್ಟೂರು

ಇಗರ್ಜಿಯಲ್ಲಿ ಗಂಲ ಮಂದಿ ಅಸ್ಪೃಶ್ಯರಿಗೆ ಕ್ರಿಸ್ತ ದೀಕ್ಷೆಯನ್ನು ಕೊಟ್ಟು, ಹಿಂದೂ ಧರ್ಮದಿಂದ ಉದ್ಧರಿಸಿ ಸ್ವರ್ಗದ ಹಾದಿಯುನ್ನು ತೋರಿಸಿರುವರೆಂಬುದು ಸಂತೋಷ ನಮ್ಮ ಜಿಲ್ಲೆಯಲ್ಲಿ ಇನ್ನೂ ಸಾವಿರಾರು ಅಸ್ಪೃಶ್ಯರಿರುವರು ಅವರೆಲ್ಲರನ್ನೂ ಪುನೀತರನ್ನಾಗಿ ಮಾಡುವುದು ನಮ್ಮ ಧರ್ಮವು.

**ಪುರಾಣಾಮೃತ.**

ಸನಾತನ ಧರ್ಮದ ನಿಜವಾದ ರಹಸ್ಯವನ್ನು ಹೊರಗೆಡುಹುವ ಮಾಸಿಕ

## (ಟೀಕೆಗಳು.)

ಮುದ್ದಾಪಿನ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಬ್ರಹ್ಮವಿದ್ಯಾರಣ್ಯ ಭಾರತಿಗಳವರು ದಿಗ್ವಿಜಯಾರ್ಥವಾಗಿ ಹೊರಟಿರುವರು. ಶ್ರೀಪಾದಂಗಳವರು ತಮ್ಮ ಗ೨ನೇ ವಯಸ್ಸಿನಲ್ಲೂ ಶಿಷ್ಯಮಂಡಳಿಯು ಉದ್ಧಾರಕ್ಕಾಗಿ ಸಂಚಾರವನ್ನು ಕೈಕೊಂಡುದುದು ಪ್ರಶಂಸನೀಯುವೇ. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು

## ಮಹಾತ್ಮಾಗಾಂಧಿಯವರಿಗೆ ಯೋಗ್ಯ ಸನ್ಮಾನ.

ಸುಧಾರಣೆಯ ನೋಗಿನಿಂದ ಮಹಾತ್ಮರು ಅಲ್ಲಲ್ಲಿ ತಿರುಗುತ್ತಿರುವರಷ್ಟೆ. ತಾವು ಹಿಂದೂ ಧರ್ಮದ ನಿಷ್ಠಾವಂತ ಭಕ್ತರೆಂದೂ, ಆದರಲ್ಲಿ ತುಂಬಿರುವ ಕಲಂಕ

ಗಳನ್ನು ದೂರಮಾಡಬೇಕೆಂದೂ ಅವರ ದೀಕ್ಷೆಯಂತೆ. ಜಾತಿಭೇದ ನಿವಾರಣೆ, ಅಸ್ಪೃಶ್ಯರ ಉದ್ಧಾರ ಇವೇ ಅವರ ಉಪದೇಶದ ಗುರಿಗಳು. ಮೊನ್ನೆ ಅವರು ಧಾರಾಪುರಕ್ಕೆ ಹೋದಾಗ, ಹಲವು ವೇದಜ್ಞ ಬ್ರಾಹ್ಮಣರು ಅವರ ಸಭೆ, ಮೆರವಣಿಗೆಗಳನ್ನು ಬಹಿಷ್ಕರಿಸಿದರಂತೆ! ಹಿಂದೊಮ್ಮೆ ಈ ರಕ್ಕರಿಗೆ ಇದೇ ರೀತಿಯ ಸನ್ಮಾನವು ಶಿವೊಗ್ಗೆಯ ಹಲವು ವಿದ್ವಜ್ಜನರಿಂದ ದೊರೆತಿತ್ತು.

* * * * *

**ಕಥಾನಾಯಕ.** ವಾರಪತ್ರಿಕೆ, ಪುಣೆ.

**ಮುಂದಿನ ಸಂಚಿಕೆಯಲ್ಲಿ ಬರುವ ಕಥೆಗಳು.**

೧. ಮದುವೆಯ ರಾತ್ರಿ— ಶ್ರೀ। ಕಥಾಸಾಗರ.

೨ ಅವಳೇಕೆ ಬರಲಿಲ್ಲ?— ಶ್ರೀ। ವಿದ್ವಾನ್ ಕಿಶೋರ

೩. ಖೂನಿಯ ಮೇಲೆ ಖೂನಿ— ಶ್ರೀ। ಕರ್ನಾಟಕ ಕಾನಂಡ್ಯಾಲ್.

**ವಿಕಟ ವಿಲಾಸಿನೀ.**

ಹಾಸ್ಯಕ್ಕಾಗಿ ಹೆಣಗಾಡುವ ಪಕ್ಷ ಪತ್ರಿಕೆ.

ಸಂಪುಟ ೪೩—— ಸಂಚಿಕೆ ೭.

**ಚುಟುಕಿನ ಚಿಟಕಿ.**

ಮಗೂ:—ಅಪ್ಪಾ, ಸ್ತ್ರೀಯರಿಗೆ ಗಂಡ ಸತ್ತರೆ ಏನನ್ನುತ್ತಾರೆ.

ತಂದೆ:—ಮುಂಡೆಯೆಂದು.

ಮಗೂ:—ಹಾಗಾದರೆ ಪುರುಷರ ಹೆಂಡಿರು ಹೋದರೆ ಅವರಿಗೆ 'ಗಂಡೆ', ಎನ್ನಬೇಕು

* * * * *

ವಿಕಟಪುರದಲ್ಲಾದ ಮೂರನೇ ಸೋಶಿಯಲ್ ಕಾನ್ಫರೆನ್ಸಿನಲ್ಲಿ—ಚಿಕ್ಕವರಿಗೆ ನಿದ್ರೆ ಹೆಚ್ಚು, ದೊಡ್ಡವರಿಗೆ, ನಿದ್ರೆ ಕಡಿಮೆ—ಎಂಬುದರಿಂದ ಚಿಕ್ಕವರು ದೊಡ್ಡ ಹೆಂಡಿರನ್ನೂ, ದೊಡ್ಡವರು ಚಿಕ್ಕ ಹೆಂಡಿರನ್ನೂ ವಿವಾಹವಾಗಬೇಕು ಎಂದು ನಿರ್ಣಯವಾಯಿತು

## ಹೊಸ ಬೆಳಕು. ಮಂಗಳೂರು.

### ಸಮಾಜಕ್ಕೊಂದು ಆಶೀರ್ವಾದ. (ಅಗ್ರಲೇಖ.)

ನಾವು ನಮ್ಮ ಪತ್ರಿಕೆಯಲ್ಲಿ ಎಂದಿನಿಂದಲೂ, ಮಿತ ಸಂತತಿಯ ವಿಚಾರವಾಗಿ ಬರೆಯುತಿದ್ದೆವು. ಮಾನವನ ಜೀವನವೇ ಸುಖಕ್ಕಾಗಿ; ಶರೀರವೇ ಸುಖಭೋಗ ಸಾಧನ. ವಿಷಯಸುಖವೇ ಮನುಷ್ಯನ ಲಾಲಸೆಗಳಲ್ಲೊಂದು ಅದನ್ನು ಮೀರುವುದು ಅನೈಸರ್ಗಿಕ. ಮಾನವನು ಮನೋತೃಪ್ತಿಗಾಗಿ ಮಾಡುವ ಭೋಗಕ್ರಿಯೆಯಲ್ಲಿ ಪಾಪವಿದೆಯೆಂಬುದು ಗೊಡ್ಡು ಜನರ ತಿಳುವಳಿಕೆ. ಆದರೆ ಮಿತವಿಲ್ಲದ ಭೋಗವು ಅಮಿತ ಸಂತತಿಯನ್ನು ಕೊಡಬಹುದಾದುದರಿಂದ ಸಂತತಿಯನ್ನು ಮಿತಪಡಿಸುವ ವಿಚಾರವು ತೀರ ಅವಶ್ಯವು. ಇಂದ್ರಿಯ

ನಿಗ್ರಹವು ಅದಕ್ಕೆ ತಕ್ಕಮಾರ್ಗವೆಂದು ಗಾಂಧಿಯವರು ಹೇಳಿದರೂ ಅವರ ಮಾತು ಕಾರ್ಯಕ್ಕೆ ಬರತಕ್ಕುದಲ್ಲ ವೆಂದು ಅನುಭವಿಗಳು ಬಲ್ಲರು. ಆ ಮಾತು ಇರಲಿ. ಮಿತಸಂತತಿಗೆ ಕೃತ್ರಿಮ ವಿಧಾನಗಳು ಎಷ್ಟು ಉಪ ಯೋಗಕರವೆಂದು ಈ ಪುಟಗಳಲ್ಲಿ ನೂರಾರು ಬಾರಿ ಒತ್ತಿ ಹೇಳಿರುವೆವು. ಇವುಗಳ ಉಪಯೋಗವನ್ನು ದಂಪತಿಗಳು ನಿತ್ಯಜೀವನದಲ್ಲಿ ಹಾನಿಯಿಲ್ಲದೆ ಮಾಡ ಬಹುದು. ಇದು ಚರ್ವಿತಚರ್ವಣವಾಯಿತು.

ಆದರೆ ಇಂದು ಮುಂಬಯಿಯ ನವ ಸುಧಾರಕ ಮಂಡಲದ ವಿಖ್ಯಾತ— ಜಸ್ಟಿಸ್–ಕಾವರ್ಜಿಯವರು, ನಮ್ಮ ಸ್ವಂತ ಬಾತಮಿದಾರರೊಡನ ಆದ ಭೇಟಿಯಲ್ಲಿ ಈ ಹೆಚ್ಚಿನ ಸೂಚನೆಯನ್ನು ಕೊಟ್ಟಿರುವರು ಹಿಂದೂ ಸಮಾಜದ ಮೂಢ ಬಂಧನಗಳನ್ನು ಮುರಿಯುವುದು ಎಷ್ಟು ಅವಶ್ಯವೆಂದು ತಿಳಿದವರು ಅವರ ಈ ಸೂಚನೆ ಗಳನ್ನು ಸ್ವಾಗತಮಾಡದಿರಲಾರರು ಅವರ ವಿಚಾರ ಶೀಲ ಮಾತುಗಳನ್ನು ಕೇಳಿರಿ

"ಈ ನಮ್ಮ ಸಮಾಜದಲ್ಲಿ ಎಷ್ಟೋ ಜನ ವಿಧವೆ ಯರು ಪುನರ್ವಿವಾಹ ಮಾಡಕೊಳ್ಳಲಾರದೆ ನರಳು ತ್ತಿರುವರು. ಇತ್ತ ಅವರಿಗೆ ನೈಸರ್ಗಿಕ ಕಾಮಲಾಲಸ ಯನ್ನು ತಡೆಯಲು ಸಾಧ್ಯವಿಲ್ಲದುದರಿಂದ ಅವರು ವೇಶ್ಯೆಯರಾಗಿ, ಪಿತೃಗಳಿಂದ ದೂರಾಗುವರು. ಇಂಥ ಪರಿಸ್ಥಿತಿಯನ್ನು— ಆ ವಿಧವೆಯರು ಕೃತ್ರಿಮ ಗರ್ಭ ನಿರೋಧ ವಿಧಾನಗಳಿಂದ ನಿವಾರಿಸಬಾರದೇಕೆ? ಇನ್ನು

ಎರಡಸಯುದಾಗಿ, ಇದು ಸನ್ಯಾಸಿ ಸನ್ಯಾಸಿನಿಯುರಿಗೂ ಶಾಲಾ ಕಾಲೇಜುಗಳಲ್ಲಿರುವ ವಿದ್ಯಾರ್ಥಿಜನರಿಗೂ ಉಪಯುಕ್ತವು. ಈ ವಿಷಯದಲ್ಲಿ ಹೆಚ್ಚಿನ ಜ್ಞಾನವಡೆಯುಲವೇಕ್ಷಿಸುವವರಿಗೆ ನಮ್ಮ ಮಂದಲವು ವಿನಾಮೂಲ್ಯವಾಗಿ ತತ್ಸಂಬಂಧದ ಸೌಕರ್ಯಗಳನ್ನು ಒದಗಿಸಿಕೊಡಲು ನಿಶ್ಚಯಿಸಿದೆ ” ಶ್ರೀ। ಕಾವರ್ಡೆಯುವರ ವಿಚಾರಶೀಲ ನುಡಿಗಳ ಬೆಲೆ ಅದರಲ್ಲೇ ಇದೆಯಾದುದರಿಂದ ನಾವು ಅದನ್ನು ಬಣ್ಣಿಸುವ ಅವಶ್ಯವಿಲ್ಲ. ಹಿಂದೂಸಮಾಜದ ಗೋಳನ್ನು ನಿವಾರಿಸಲು ಇದು ನಿಜವಾಗಿಯೂ ಯೋಗ್ಯ ಮಾರ್ಗ ನವಸುಧಾರಕ ಮಂಡಲದವರ ಈ ಸೂಚನೆಯು ಸಮಾಜಕ್ಕೊಂದು ಆಶೀರ್ವಾದವೇ ಸರಿ.

## ಮನುಷ್ಯನ ಅತಿ ವಿಚಿತ್ರ ಶೋಧೆ.

ನ್ಯೂಯೋರ್ಕಿನ ಡಾ। ಹೂಪರ್‌ರ ಖ್ಯಾತಿ ಕೇಳದವರಿಲ್ಲ ಅವರಿಂದು ಹತ್ತುವರುಷಗಳ ಅವಿಶ್ರಾಂತ ಪರಿಶೋಧನೆಯಿಂದ–ಮಿತಸಂತತಿಯ ಬೆನ್ನಿಗೆ ಬೇಕಾದ ಇನ್ನೊಂದು ವಿಚಿತ್ರ ಶೋಧೆಯು ನಡೆಯಿಸಿರುವರು. ಮಿತಸಂತತಿಯ ವಿಧಾನವರಿತರಿಗೆ, ಅದರಲ್ಲೂ ಎಷ್ಟೋ ಬಾರಿ ತಪ್ಪಿ ಸಂತತಿಯಾಗುವ ಭೀತಿಯಿದೆಯೆಂದು ತಿಳಿದಿರುವುದಷ್ಟೆ. ಇಲ್ಲವೇ ಈಗಾಗಲೇ ಹುಟ್ಟಿದ ಮಕ್ಕಳ ಪೋಷಣೆಯನ್ನು ಮಾಡದೆ ನಿರ್ವಾಹವಿಲ್ಲವಷ್ಟೆ. ಆದರೆ ಧನಾಭಾವದ ಈ ದಿನಗಳಲ್ಲಿ ಸಂಸಾರ

ಪೋಷಣೆಯು ಹೇಗೆ ಸಾಧ್ಯ? ಪ್ರತಿ ದಂಪತಿಗಳಿಗೆ ಹೆಚ್ಚೆಂದರೆ ಒಂದು ಮಗುವುಗಿಂತ ಪೋಷಣೆಯು ಕಷ್ಟವೇ ಸರಿ. ಹೆಚ್ಚಾದವರ ಬಾಯುತುತ್ತೆಲ್ಲಿಂದ ತರಲಿ? ತರುವುದಾದರೆ ತನ್ನ ಸುಖವನ್ನೇ ಮರೆಯು ಬೇಕು. ಹೀಗೆ ಮಾಡುವುದಾದರೆ ಮನುಷ್ಯನೇತಕ್ಕೆ ಬದುಕಬೇಕು? ಆದುದರಿಂದ ಡಾಕ್ಟರವರು ಇದರ ನಿವಾರಣೆಯ ಯೋಚನೆಯನ್ನು ಎಂದಿನಿಂದ ಮಾಡು ತ್ತಿದ್ದರು. ಇಂದೀಗ ಅವರು "ದಿ ಹಂಗರ್ ಕಿಲ್ಲರ್" ಎಂಬ ನವೀನ ಮಾತ್ರೆಗಳನ್ನು ಕಂಡುಹಿಡಿದಿರುವರು. ನಿನ್ನೆ ನಿನ್ನೆ ಕಂಡುಹಿಡಿದ ಈ ಗುಳಿಗೆಗಳ ಗುಣವು ಅಪಾರವಾದುದು ದಿನ ಒಂದರ ಒಂದು ಗುಳಿಗೆ ಯಂತೆ ತಿನ್ನುತ್ತ ಬಂದಲ್ಲಿ ಹಸಿವು ಅರ್ಧಕ್ಕರ್ಧ ಕಡಿಮೆ ಯಾಗುವುದಂತೆ. ಅವರೀಗ ಸಂಪೂರ್ಣವಾಗಿ ಹಸಿವನ್ನು ಕೊಲ್ಲುವ ಔಷಧಿಯನ್ನು ಶೋಧಿಸುತ್ತಿರು ವರು. ವಿಜ್ಞಾನವು ಅವರಿಗೆ ಯಶಸ್ಸನ್ನು ಕೊಡಲಿ.

(ಈ ಎರಡು ಲೇಖಗಳು, ತುಳು, ಕೊಂಕಣಿ, ತೆಲುಗು, ತಮಿಳು, ಮರಾಠಿ, ಹಿಂದಿ, ಇಂಗ್ಲಿಷ್ ಮೊದಲಾದ ಭಾಷೆಗಳಲ್ಲೆಲ್ಲಾ ಭಾಷಾಂತರಿಸಲ್ಪಟ್ಟ ನೂರಾರು ಪತ್ರಿಕೆಗಳಲ್ಲಿ ಉದ್ಧರಿಸಲ್ಪಟ್ಟುವು.)

**ದಿ ಹೆಲ್ತ್ ಆಫ್ ಇಂಡಿಯ.** ಮುಂಬಾಯಿ.

ಆದೀಗ ಹಿಂದೀಯರು ಮಾಂಸಾಹಾರವನ್ನು ಕೊ ಳ್ಳುತ್ತಿ ಬರುವುದು ಶುಭಲಕ್ಷಣವೇ ಸರಿ. ಡಾ। ಮುಂಜೆ

ಯುವರನ್ನುವಂತೆಮಾಂಸಾಹಾರವಿಲ್ಲದೆ ಶಕ್ತಿಯುಂಟಾಗ ಲಾರದು ಆದರೆ ಅಲ್ಲಲ್ಲಿನ ಮಾಂಸಾಹಾರ ಪ್ರಚಾರಕ ಸಭೆಗಳು ಈ ಕೆಲಸವನ್ನು ಕೈಕೊಂಡುದರಿಂದ ಯಶಸ್ಸು ವಿಶೇಷವಾಗಿ ಕಂಡುಬರುತ್ತದೆ. ಅಭಿವೃದ್ಧಿಸೂಚಕ ಕೆಲವು ಸಂಖ್ಯೆಗಳನ್ನು ನೋಡಿರಿ

. . . . . ನಗರದ ಕಸಾಯಿಖಾನೆಗಳಲ್ಲಿ
(ಸಂಖ್ಯೆಗಳು ಸಾವಿರಗಳಲ್ಲಿವೆ.)

| ಪ್ರಾಣಿ. | ಗತ ವರುಷ | ಈ ವರುಷದ ಗತ ತಿಂಗಳಲ್ಲಿ |
|---|---|---|
| ಆಡು, ಕುರಿ. | 4,03,231. | 30,48,092. |
| ದನ, ಎತ್ತು. | 1-37,291. | 11-62,921. |

. . . . ಯ ಜನಸಂಖ್ಯೆಯು ೧೫ ಲಕ್ಷವೆಂದು ಹಿಡಿದರೆ ಈ ವರ್ಷದ, ಸರಾಸರಿಯನ್ನು ತೆಗೆದಲ್ಲಿ, ಪ್ರತಿಯೊಬ್ಬನು ತಿಂಗಳೊಂದಕ್ಕೆ ೨॥ ಕುರಿ, ೧ ದನ ತಿನ್ನುತ್ತಿರುವನೆಂದಾಯಿತು. ಇಷ್ಟು ಮಾಂಸಾಹಾರ ಮಾಡಿದ್ದರಿಂದ ತಿಂಗಳೊಂದಕ್ಕೆ ಒಬ್ಬನು ಒಂದೇ ಒಂದು ರಾತ್ಲ ಹೆಚ್ಚಿದರೂ ವರುಷಕ್ಕೆ ೧೨ ರಾತ್ಲಗಳಂತೆ ಹೆಚ್ಚಿ ೪-೬ ವರುಷದಲ್ಲಿ ಆವನು ಎಂಥ ಪಠಾಣನಿಗೂ ಸರಿಯಾಗಬಹುದು ಪ್ರಾಚೀನ ಕ್ಷಾತ್ರಯುಗವು ತಿರುಗಿ ಬಂದೀತೆಂಬುದರಲ್ಲಿ ಸಂಶಯವಿಲ್ಲ. ಹಿಂದೀಯನ ಸರಾಸರಿ ಶರೀರ ತೂಕವು ೨೦೦ ರಾತ್ಲಿಗೆ ಮುಟ್ಟಿದ ದಿನವೇ ಸ್ವರಾಜ್ಯವು ಸಿಕ್ಕಿತೆಂದು ತಿಳಿಯಿರಿ

ಆದರೆ ಈ ಪ್ರಶ್ನೆಯಿಂದ ಹಲವು ಅರ್ಥಶಾಸ್ತ್ರಗಾರರು ನಮ್ಮನ್ನು ಅಂಜಿಸುತ್ತಿರುವರು. ಉಳುವುದಕ್ಕೂ ಹಾಲಿಗೂ ದನಕರುಗಳ ಸಂಪತ್ತು ಕಡಿಮೆಯಾಗುತ್ತದಲ್ಲಾ ಎಂದು. ಇವರು ಗೊಡ್ಡು ಸಾಂಪ್ರದಾಯಿಕರು. ಅವರ ಧರ್ಮಶಾಸ್ತ್ರದ ಮಾತುಗಳಿಗೆ ಜನರು ಕಿವಿಗೊಡುವ ಕಾಲವಿದಲ್ಲವೆಂದು, ಅವರೀಗ ಅರ್ಥಶಾಸ್ತ್ರಕ್ಕೆ ಕೈಹಾಕಿರುವರು. ಅಂಥವರಿಗೆ ನಮ್ಮ ಉತ್ತರವಿಷ್ಟೆ. "ಇನ್ನು ಹಿಂದುಸ್ಥಾನದ ಕೃಷಿಯು ಯಂತ್ರಗಳಿಂದಲೇ ಆಗಬೇಕು" ಅದಿಲ್ಲದೆ ಕೃಷಿಯು ಅಭಿವೃದ್ಧಿಯಿಲ್ಲ. ಅದರಿಂದ ಹೆಚ್ಚಿಸಿದ ಮುನಾಫೆಯ ಅರ್ಧಾಂಶ ಹಣವನ್ನುಪಯೋಗಿಸಿದರೆ ವಿದೇಶದಿಂದ ಕಂಡೆನ್ಸ್ಡ ಮಿಲ್ಕನ್ನು ತರಿಸಿಕೊಳ್ಳಬಹುದು

---

## ಪ್ರಕರಣ ೧೫.

## ಭೇಟಿಗಳು.

ವೃತ್ತಪತ್ರಿಕಾ ಪರಿಶೀಲನೆಯಿಂದ ನಮ್ಮ ಸಮಿತಿಯವರ ಜ್ಞಾನವು ಅಪಾರವಾಗಿ ಹೆಚ್ಚಿತು ತಮ್ಮ ಕಲಸವು ಅವುಗಳ ಪರಿಶೀಲನೆಯಿಂದಲೇ ಆಗುತ್ತಿತ್ತೆಂದು ಅವರಿಗೆ ತಿಳಿಯಿತು. ಸಾಧ್ಯವಾದರೆ ಮುಂದೆ ತಮ್ಮ ದಿವ್ಯಲೋಕಕ್ಕೂ, ಇಲ್ಲಿನ ವಾರ್ತಾಪತ್ರಗಳನ್ನು ತರಿಸಿಕೊಳ್ಳುವ ವ್ಯವಸ್ಥೆಯನ್ನು ಮಾಡುವುದವಶ್ಯವೆಂದು ಅವರಿಗೆ ತೋರಿತು. ಆದರೆ ಬಂದ ಕಲಸವನ್ನು

ಕಾಗದಗಳನ್ನು ಕಂಡೇ ಪ್ರೊರೈಸಿದರೆಂಬ ಅಪವಾದವು ತಮ್ಮ ಮುಂದೆ ಬರಬಾರದೆಂದು ಅವರು ಕೈಕೊಂಡ ಸಂಚಾರವು ಪೂರ್ಣಮುಗಿಸುವ ನಿಶ್ಚಯುವನ್ನು ಮಾಡಿದರು. ಈಗಿನ ಕಾಲದಲ್ಲಿ ಅಭಿಪ್ರಾಯುಸಂಗ್ರಹಗಳಿಗೆ ಭೇಟಗಳು (Interviews) ಅವಶ್ಯವಷ್ಟೆ. ಇವರಲ್ಲಿಗೆ ಬಂದ ನೂರಾರು ಪತ್ರಿಕಾ ವ್ಯವಸಾಯಿಗಳೊಡನೆ ಇವರು ಮೌನತಾಳಿದ್ದರು ಅವರಾದರೂ ಹತಾಶರಾಗುತ್ತಿದ್ದಿಲ್ಲ. ಇವರು ಮಾತನಾಡದಿದ್ದುದನ್ನೆಲ್ಲ ಮಾತನಾಡಿದರೆಂದು ಇವರ ಭೇಟಯ ಪ್ರತಿಫಲವೆಂದು ತಮ್ಮ ಪತ್ರಿಕಗಳಲ್ಲಿ ಪ್ರಕಟಮಾಡುತ್ತಿದ್ದರು. ಹೀಗಿರಲು, ಇವರಾದರೂ ದೇಶದ ಕೆಲವು ದೊಡ್ಡ ಮನುಷ್ಯರೊಡನೆ ಸಂಭಾಷಣೆಮಾಡಿ ತಿಳಿದುಕೊಳ್ಳುವುದು ಅವಶ್ಯವಲ್ಲವೇ. ಇವರದು ಧಾರ್ಮಿಕ ಪರೀಕ್ಷೆ ಎಂದಾದ ಬಳಿಕ ಇವರು ಧಾರ್ಮಿಕ ಮುಖಂಡರನ್ನು ಕಾಣುವುದವಶ್ಯವಷ್ಟೆ.

ಜನರು ಲೌಕಿಕವು ಅತೀವ ಬೆಳೆಯುತ್ತಿದೆಯೆಂದರೂ ಜನರಲ್ಲಿ ಧರ್ಮಶ್ರದ್ಧೆ ಹೋಗಲಿಲ್ಲ. ಮತಾಚಾರ್ಯರ ಮೆರವಣಿಗೆ, ಮತಮತಗಳ ಬಡಿದಾಟ, ಧಾರ್ಮಿಕೋಪನ್ಯಾಸಗಳು, ಸನ್ಯಾಸಿಗಳು, ಉಪದೇಶಿಗಳು, ಆಚಾರ್ಯರು, ಭಿಕ್ಷುಗಳು, ಪಾದ್ರಿಗಳು, ಮುಲ್ಲಾರು, ಮೌಲಾನರು, ಕಾಜಿಗಳು, ಮಠಗಳು, ಇಗರ್ಜಿಗಳು, ದೇವಾಲಯುಗಳು, ಬ್ರಹ್ಮಮಂದಿರಗಳು, ಚೈತ್ಯಾಲಯುಗಳು, ಬಸ್ತಿಗಳು, ಪ್ರಾರ್ಥನಾಲಯುಗಳು, ಮಜೀದಿಗಳು ಕಡಿಮೆಯಾಗಿರಲಿಲ್ಲ.

ನಮ್ಮ ಸಮಿತಿಯವರೀಗ ಆರ್ಯಾವರ್ತದ ಧಾರ್ಮಿಕ ಮೂರ್ತಿಗಳನ್ನು ಸಂದರ್ಶಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸತೊಡಗಿದರು. ಅವುಗಳನ್ನು ಅಸ್ತ್ಯವ್ಯಸ್ತವಾಗಿ, ಸಂಗ್ರಹಿಸಿ ಕೆಳಗೆ ಕೊಟ್ಟಿರುವೆವು.

* * * * *

ಬ್ರಹ್ಮನ್ಮಠಾಧೀಶ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ, ಸಕಲ ವೇದಶಾಸ್ತ್ರ ಪಾರಂಗತ, ಪಂಡಿತವರೇಣ್ಯ ನಿತ್ಯಾಯೋಗಾರೂಢ ವೇದಾಂತ ವಿಜ್ಞಾನವಿಶಾರದ ಚತುರಾನಂದ ಸರಸ್ವತಿಗಳವರಿಗೂ ಸಮಿತಿಯವರಿಗೂ ನಡೆದ ಸಂಭಾಷಣೆ.

ವಿಶ್ವಾಮಿತ್ರ:—ಜಗದ್ಗುರು, ಜಾತಿಧರ್ಮದ ವಿಚಾರ ತಮ್ಮ ಅಭಿಪ್ರಾಯ ಹೇಗೆ? ನಮಗೆ ವರ್ಣಧರ್ಮವೇ ಲೇಸಲ್ಲವೇ?

ಜಗದ್ಗುರು: ನಿಮ್ಮ ಮಾತೇ ನಮಗೆ ತಿಳಿಯದು ಜಾತಿಧರ್ಮಕ್ಕೂ ವರ್ಣಧರ್ಮಕ್ಕೂ ವ್ಯತ್ಯಾಸವೇನು?

ವಿಶ್ವಾಮಿತ್ರ: - ಜಾತಿಗಳು ಸಾವಿರಾರು ಇವೆ; ವರ್ಣಗಳು ನಾಲ್ಕೇನಾಲ್ಕು ವರ್ಣಧರ್ಮದಲ್ಲಿ ಯಾವನು ಯಾವ ಧರ್ಮವನ್ನೂ ಸೇರಬಹುದು. ಜಾತಿಯಲ್ಲಿ ಒಬ್ಬನು ಇನ್ನೊಂದು ಜಾತಿಯವನಲ್ಲಿ ಊಟ ಮಾಡಕೂಡದು.

ಜಗದ್ಗುರು:—(ನಗುತ್ತಾ) ನೀವು ನವಸುಧಾರಕರೆಂದು ಕಾಣುವಿರಿ. ಇರಲಿ, ವರ್ಣಗಳೆಂಬುದು ಧಾರ್ಮಿಕ ದೃಷ್ಟಿಯಿಂದ ಜಾತಿಯು ಲೌಕಿಕ ದೃಷ್ಟಿ

ಯಿಂದ ಆಯಾಯ ಜಾತಿಯ ಕಟ್ಟುಕಟ್ಟಳೆಯಂತೆ ನಡೆದರೇನೆ ವರ್ಣಧರ್ಮದ ಪಾಲನೆ. ಜಾತಿಜಾತಿಗಳು ಒಂದಾದರೆ ಆಚಾರಗಳು ಒಂದಾಗುತ್ತವೆ. ಆಚಾರವು ಒಂದಾದರೆ ವರ್ಣಸಂಕರವಾಗುತ್ತದೆ ಜಾತಿಗಳ ಪ್ರಾಪ್ತಿಯಾದರೂ ಅವರವರ ಕರ್ಮಾನುಸಾರವಾಗಿ.

ವಸಿಷ್ಠ:—ಅಸ್ಪೃಶ್ಯತೆಯು ನಿಮಗೆ ಸಮ್ಮತವೇ?

ಜಗದ್ಗುರು:—ದನ, ಆಡು, ಕುರಿಗಳು ನಮ್ಮ ಸೇವೆಗಾಗಿ ಹುಟ್ಟಿದಂತೆ, ಹೊಲೆಯರು ನಮ್ಮ ಸೇವೆಗಾಗಿ ಹುಟ್ಟಿರುವರು. ಅವರ ಕರ್ಮದಿಂದ ಅವರು ನೀಚ ಜನ್ಮಕ್ಕೆ ಬಂದಿರುವರು. ಜನ್ಮತಃ ನೀಚರಾದವರನ್ನು ಉದ್ಧರಿಸುವುದೆಂದರೆ ದೈವೇಚ್ಛೆಗೆ ವಿರುದ್ಧವಾಗಿ ವರ್ತಿಸಿದಂತೆ.

ಯಮರಾಯ:—ಚಿಕ್ಕ ಹುಡುಗರಿಗೆ ಸನ್ಯಾಸ ಕೊಟ್ಟು ಮಠಾಧಿಕಾರಕೊಡುವರಲ್ಲ. ಇಡೀ ಸಮಾಜವನ್ನು ನಡೆಯಿಸಿಕೊಳ್ಳುವ ಯೋಗ್ಯತೆ ಅವರಲ್ಲೇನಿದೆ? ಅವರಿಗೆ ಧಾರ್ಮಿಕ ಜ್ಞಾನವಿಲ್ಲ, ವ್ಯವಹಾರ ಜ್ಞಾನವಿಲ್ಲ. ಇತ್ತ ಧರ್ಮೋಪದೇಶ ಮಾಡಲು, ಅವರು ದೇವರನ್ನರಿತವರಾಗಿರಬೇಕು. ಸನ್ಯಾಸದ ಗುರಿಯೇ ದೇವರನ್ನರಿಯುವುದು. ಅದಕ್ಕೂ ಮೊದಲು ಇವನು ಯಾರನ್ನಾದರೂ ಉದ್ಧರಿಸಲು ಹೊರಟರೆ . . . ? ಈಗಿರುವ ಹಲವು ಮಠಗಳ ಕೆಟ್ಟ ಚರಿತ್ರೆಗಳೇ ಇವಕ್ಕೆ ಉದಾಹರಣೆಗಳು. ಇದರಿಂದ ನಿಮ್ಮ ಮೇಲೆ ನಮ್ಮ ವೈಯಕ್ತಿಕ ಆರೋಪವಿಷಯವೆಂದಲ್ಲ.

ಜಗದ್ಗುರು:—ನಿಮಗೆ ಭ್ರಾಂತು. ಶರೀರವು ಚಿಕ್ಕದಾದರೂ ಆತ್ಮವು ಹೇಗಿದೆಯೆಂದು ನೀವೇನು ಬಲ್ಲಿರಿ?

ದೂರ್ವಾಸ:— ಆತ್ಮವು ಪ್ರಬುದ್ಧವೂ ಇರಬಹುದು; ಅಪ್ರಬುದ್ಧವೂ ಇರಬಹುದು.

ಜಗದ್ಗುರು:—ಅಪ್ರಬುದ್ಧವಿದ್ದರೂ, ಮಠಗಳ ಸಿಂಹಾಸನಕ್ಕೆ ಅಷ್ಟು ಮಹತ್ವವಿದೆ. ಅದರಿಂದ ಅವರ ಯೋಗ್ಯತೆ ಹೆಚ್ಚುವುದು

ದೂರ್ವಾಸ:— ಬೇರೊಂದು ಪ್ರಶ್ನೆ. ಸನ್ಯಾಸಿಗಳಿಗೆ ಹೇಳಿಸಿದ್ದು ವೈರಾಗ್ಯ ಭೋಗ ಸೂಚಕ ಜರತಾರಿ, ಚಿನ್ನದ ಕಿರೀಟ, ವ್ಯಾಘ್ರಾಸ್ನ, ಬೆಳ್ಳಿದಂಡ, ಬಿರುಸಿನ ಮೆರವಣಿಗೆ, ಮೋಟಾರು ಗಾಡಿಗಳೇಕ?

ಜಗದ್ಗುರು:—ನಿಮ್ಮ ಪ್ರಶ್ನೆಗಳೆಲ್ಲ ಆಕ್ರೋಶಕಾರಕವಾದುವು ಆದರೂ ಹೇಳುವೆವು. ಸನ್ಯಾಸಗಳಲ್ಲಿ ಸಾಮಾನ್ಯ ಸನ್ಯಾಸ, ರಾಜಸನ್ಯಾಸವೆಂದು ಎರಡು ವಿಧ. ಸಾಮಾನ್ಯ ಸನ್ಯಾಸಿಗಳು ಅವರ ಪಾಡಿಗವರು ಇರುವವರು. ರಾಜಸನ್ಯಾಸಿಗಳಿಗೆ ಜನರೊಡನೆ ವ್ಯವಹಾರವಿದೆ ಆದುದರಿಂದ ಅವರ ತಮ್ಮ ಅಧಿಕಾರ ಶ್ರೇಷ್ಠತಗಳನ್ನು ತೋರಿಸಲು ಇವೆಲ್ಲಾ ಬೇಕು.

ದೂರ್ವಾಸ:— ಸನ್ಯಾಸಿಯು ಕಾಂಚನ ಮುಟ್ಟಬಾರದಷ್ಟೆ

ಜಗದ್ಗುರು:—ಅದು ಯುಗಧರ್ಮವನ್ನು ಹೊಂದಿಕೊಂಡಿದೆ

ದೂರ್ವಾಸ:— ಅದಿರಲಿ, ಈಗಿನ ಸನ್ಯಾಸಿಗಳು ವೇಶ್ಯೆಯರ ಉಪಚಾರ . . .

ಜಗದ್ಗುರು: ಯಾರಲ್ಲಿ ಇವರನ್ನು ಹೊರಗೆ ಹಾಕಿರಿ

* * * * *

## ಪ್ರಸಿದ್ಧ ಸಮಾಜ ಸುಧಾರಕ ಪಂಡಿತ ಪ್ರೇಮನಾಥನಲ್ಲಿ.

ವಿಶ್ವಾಮಿತ್ರ:— ಮಹಾಶಯ

ಪಂಡಿತರ ಶಿಷ್ಯನೊಬ್ಬ:— ಹಾಗೆಂದು ಸಂಬೋಧಿಸ ಬೇಡಿರಿ 'ವ್ಯಾ ಮಾಸ್ಟರ' — ಎನ್ನಿರಿ.

ವಿಶ್ವಾಮಿತ್ರ:—'ವ್ಯಾ ಮಾಸ್ಟರ್;' ಜಾತಿಧರ್ಮ ವರ್ಣಧರ್ಮಗಳ ವಿಚಾರ ಹೇಗೆ?'

ಪಂಡಿತ:— ನೀವು ಕೇಳಲಿರುವ ಯಾವತ್ತು ಪ್ರಶ್ನೆಗಳನ್ನು ಒಮ್ಮೆಗೇ ಕೇಳಿರಿ ನಡುವೆ ನಡುವೆ ಬಾಯಿ ಹಾಕಬಾರದು ನನ್ನ ಪ್ರತ್ಯುತ್ತರವನ್ನು ೫ ನಿಮಿಷಗಳಲ್ಲಿ ಕೊಟ್ಟು ಮುಗಿಸುವೆ. ನನಗೆ ಹೆಚ್ಚಿನ ಅವಕಾಶ ಇರುವುದಿಲ್ಲ.

ವಿಶ್ವಾಮಿತ್ರ: — ನಾವು ನಿಮ್ಮನ್ನು ನೋಡುವುದಕ್ಕಾಗಿಯೇ ಇಲ್ಲಿಯ ತನಕ ನೂರಾರು ಮೈಲು ದೂರ ಬಂದವು ಆದುದರಿಂದ ಸ್ವಲ್ಪ ಹೆಚ್ಚಿನ ಅವಕಾಶ . .

ಪಂಡಿತ:— ನನ್ನ ಸಮಯವು ತೀರ ಅಮೂಲ್ಯವಾದುದು ಹೂಂ ಕೇಳಿರಿ.

ದೂರ್ವಾಸ:—ಮೊದಲನೆಯ ಪ್ರಶ್ನೆಯನ್ನು ನನ್ನ ಗೆಳೆಯರು ಕೇಳಿದರು ೨ನೇ ಪ್ರಶ್ನೆ—ಬಾಲ್ಯ ವಿವಾಹವು ಬೇಕೇ? ವಿಧವಾ ವಿವಾಹದ ವಿಚಾರ ತಮ್ಮ ಅಭಿಪ್ರಾಯ ಹೇಗೆ?

೩ನೇ ಪ್ರಶ್ನೆ—ಹಿಂದೂ, ಮುಸಲ, ಕ್ರಿಸ್ತ ಧರ್ಮಗಳಲ್ಲಿ ಯಾವ ಧರ್ಮವು ಶ್ರೇಷ್ಠ?

ಪಂಡಿತ:—(ನಗುತ್ತ ಹೊಗೆಬತ್ತಿಯನ್ನು ಸೇವಿಸುತ್ತ). ಈ ಪ್ರಶ್ನೆಗಳನ್ನು ನೂರಾರು ಬಾರಿ ನಾನು ನನ್ನ 'ಪ್ರೇಮ ಸಂದೇಶ'ದಲ್ಲಿ ಚರ್ಚಿಸಿರುವೆ. ಆದರೂ ನಿಮಗಾಗಿ ತಿರುಗಿ ಚುಟಕಿನಲ್ಲಿ ಹೇಳುವೆ. ೧ನೇ ಪ್ರಶ್ನೆಗೆ ಉತ್ತರ. ನಮಗಿಂದು ಎರಡೂ ಬೇಕಾಗಿಲ್ಲ. ಮಾನವನ, ಸ್ವಾತಂತ್ರ್ಯವನ್ನು ನಿರ್ಬಂಧಿಸುವ ಜಾತಿಗಳಿಗೆ ಬೆಲೆಯಿಲ್ಲ ೨ನೇ—ವಿವಾಹ ವಿಚಾರ. ಬಾಲ್ಯ ವಿವಾಹವು ತೀರಾ ಹಾನಿಕರ. ವಿಧವಾ ವಿವಾಹದ ಪ್ರಶ್ನೆಗೆ ಅರ್ಥವಿಲ್ಲ ಏಕೆಂದರೆ ನನ್ನ ಮತದಂತೆ ಶರೀರದ ಬೆಳವಣಿಗೆಯಾದೊಡನೆ, ಯಾರು ಯಾರೊಡನೆಯೂ ಗೆಳೆತನದಿಂದಿರುವುದು ಮಾನವನ ಸ್ವಾತಂತ್ರ್ಯ. ನಾನು ಮನುಷ್ಯ ಸ್ವಾತಂತ್ರ್ಯವನ್ನು ಎಲ್ಲಕ್ಕೂ ಅಧಿಕವೆಂದು ತಿಳಿಯುವವನು ಸ್ವಾತಂತ್ರ್ಯವೇ ಸತ್ಯ ವಿವಾಹವೆಂಬುದು ಅದಕ್ಕೊಂದು ನಿರ್ಬಂಧ. ಆದುದರಿಂದ ವಿವಾಹವೇ ಬೇಡವೆಂದು ನನ್ನ ಅಭಿಪ್ರಾಯ

ನಿಮ್ಮ ಮೂರನೇ ಪ್ರಶ್ನೆಯು ಹೀಗಿದೆ—ಹುಚ್ಚ, ಮರುಳ, ತಲೆ ತಿರುಕ, ಭ್ರಾಂತ. ಇವರಲ್ಲಿ ಯಾರು

ಗಟ್ಟಿಗರೆಂದು ಕೇಳಿದಂತೆ. ಈ ನವಯುಗಕ್ಕೆ ಈ ಯಾವ ಮತಗಳೂ ಬೇಡ ಮತಗಳಿಲ್ಲದೆ ಮಾನವನು ಬದುಕಬಲ್ಲನು ಅವನ ಸ್ವಾತಂತ್ರ್ಯಕ್ಕೆ ಇವುಗಳ ನಿರ್ಬಂಧ ಬೇಡ.

(ಹೀಗೆಂದು ಏಳುವನು.)

ವಸಿಷ್ಠ:— ಸ್ವಲ್ಪ ಅನುಮಾನಗಳನ್ನು ಕೇಳಲಿದೆ.

ಪಂಡಿತ:— ನಿಮಗೆ ಶಿಷ್ಟಾಚಾರದ ಅರಿವೇ ಇರುವುದಿಲ್ಲ. ನಿಮಗೆ ಕೊಟ್ಟ ೫ ಮಿನಿಟುಗಳು ಮುಗಿದಾಯಿತು. (ಹೀಗೆಂದು ಹೊರಟೇ ಹೋದನು). . .

* * * * *

## ಕೃಷ್ಣ ಶಾಬುದ್ದೀನ್.

ಶಾಬುದ್ದೀನ್:— ನಿಮ್ಮ ಪ್ರಶ್ನೆಗಳೇ ಅವಶ್ಯವಿಲ್ಲ. ನನ್ನ ಧರ್ಮದ ತತ್ವ ನಾನು ಮೊದಲೇ ಹೇಳುವೆ. ನಾನು ಶ್ರೀಕೃಷ್ಣ, ಬುದ್ಧ, ಪೈಗಂಬರರ ಅವತಾರವೆಂದು ನಿಮಗೆ ತಿಳಿದಿರಬೇಕು ಹೀಗೆಂದ ಬಳಿಕ ನನ್ನ ಮಾತಿನಲ್ಲಿ ಅವಿಶ್ವಾಸವಿಡಬಾರದು ಹಿಂದೂಧರ್ಮದ ಉದ್ಧಾರಕ್ಕೆ ನಾನು ಕೃಷ್ಣನಾಗಿ ಕಲಿಯುಗದ ಪೂರ್ವದಲ್ಲಿ ಅವತರಿಸಿದೆ; ಆ ಬಳಿಕ ನನ್ನ ಬೌದ್ಧಾವತಾರವಾಯಿತು. ಈ ಯುಗಕ್ಕಾಗಿ ಪೈಗಂಬರನಾದೆ. ಜನರೀಗ ಈ ಮೂರು ಧರ್ಮಗಳಲ್ಲಿ ಯಾವುದು ಒಳಿತು ಎಂಬು ಸಂಶಯಪಡುತ್ತಿರುವರು. ಆಯಾಯ ಕಾಲಕ್ಕೆ ಸರಿಯಾದ ಅವತಾರವು ನನ್ನದು ಈ ಕಾಲಕೆ

ಮುಸಲ್ಮಾನ ಧರ್ಮವೇ ಶ್ರೇಷ್ಠವಾದದ್ದು. ಇನ್ನು ಕೃಷ್ಣನಿಗೆ ದನಗಳು ಎಷ್ಟು ಪ್ರೀತಿಯವೆಂದು ನೀವು ತಿಳಿದಿರುವಿರಿ ಇತ್ತ ಆತ್ಮಕ್ಕೆ ನಾಶವೂ ಇಲ್ಲ ಹೀಗಾಗಿ ನಾವು ದೇವರ ಮೆಚ್ಚುಗೆಗೆ ಪಾತ್ರರಾಗಲು ದನವನ್ನು ಬಳಿಗೆ ಕರೆದುಕೊಳ್ಳಬೇಕು ತೀರ ಹತ್ತಿರಕ್ಕ ಕರೆಯುವುದೆಂದರೆ ನಮ್ಮ ಹೊಟ್ಟೆಯಲ್ಲಿರಿಸಿಕೊಳ್ಳುವುದು ಆದುದರಿಂದಲೇ ಗೋಭಕ್ಷಣೆಯು ಧರ್ಮದಪಾಲನೆಗೆ ತೀರ ಅವಶ್ಯ. ನನ್ನ ಈ ಧರ್ಮದ ಅನುಕರಣೆಯು ಯಾರಿಗೂ ಕಠಿಣವಲ್ಲ ಇಷ್ಟನ್ನು ನೀವು ಮಾಡಿದರೆ ನಿಮಗೆ ನಿಮ್ಮ ಸಂಶಯಗಳು ನಿವಾರಣೆಯಾಗುವುವು.

(ಮಂಡಲದವರು ಮಾಡಲು ಸಿದ್ಧರಿಲ್ಲದೆ ಸಂಶಯವನ್ನು ಕಟ್ಟಿಕೊಂಡೇ ತೆರಳಿದರು.)

*　*　*　*　*

## ಡಾ| ಆರ್ಥರ್ ಆರ್ನಲ್ಡ.

ಡಾ| ಬನ್ನಿರಿ, ಬನ್ನಿರಿ ನಿಮ್ಮ ಪತ್ರ ನಮಗೆ ಸಿಕ್ಕಿ ಸಂತೋಷವಾಯಿತು ನೀವು ಬರುತ್ತೀರಿ ಎಂತ ಕೇಳಿ ಆನಂದವಾಯಿತು ನಿಮ್ಮ ಪ್ರಶ್ನೆಗಳನ್ನು ಸಂತೋಷದಿಂದ ಕೇಳುವೆನು. ಆದರೆ ಮೊದಲು ನೀವು ನನ್ನ ಕೆಲಸನೋಡಿರಿ ಬಾಯಿಮಾತಿಗಿಂತ ಕೈಮಾತು ಹೆಚ್ಚು.

ಹೀಗೆಂದು ಆರ್ನಲ್ಡರವರು ಅವರನ್ನು ತಮ್ಮ ಕಾರ್ಯಕ್ಷೇತ್ರಕ್ಕೆಲ್ಲಾ ಒಯ್ದರು. ದ್ವಾರದಲ್ಲಿಯೇ "ಯೇಹೋವನ ಕೃಪೆ ನಿಮ್ಮ ಮೇಲಿರಲಿ" ಎಂದಿತ್ತು. ಮೊದಲು ತಮ್ಮ ಮಿಶನ್ ಮಿಡಲ್‌ಸ್ಕೂಲು ತೋರಿಸಿದರು. ಅದರಲ್ಲಿ ೨೬೦ ಬಾಲಕರು ಆಗ ವಿದ್ಯಾಭ್ಯಾಸ ಮಾಡುತ್ತಿದ್ದರು. ಡಾ| ಆರ್ನಲ್ಡ—"ನೋಡಿರಿ, ಇವರೆಲ್ಲಾ ಮೊದಲು ಹಿಂದುಗಳಾಗಿದ್ದರು ಅವರಲ್ಲಿ ಹಲವರು ಹೊಲೆಯರು. ಅವರನ್ನು ಯಾರೂ ಮುಟ್ಟುತ್ತಿದ್ದಿಲ್ಲ. ಈಗ ನೋಡಿ–ಎಷ್ಟು ಶುಚಿಯಾಗಿರುವರು. ಮಿಶನಿನ ಖರ್ಚಿನಿಂದ ಅವರಿಗ ಉಡುಗೆ ಊಟ ಸಿಗುವಂತೆ ಮಾಡಿರುವೆವು. ಅವರ ಹಿರಿಯರಿಗೆ ಇಲ್ಲಿ ಉದ್ಯೋಗ ಕೊಡಿಸಿದೆ. ಮೊದಲು ಊಟಕೊಟ್ಟು, ಬಳಿಕ ಅವರನ್ನು ಯೇಸುವಿನ ಕಡೆಗೆ ತಿರುಗಿಸಿ, ಅವನ ಮಹಾತ್ಮೆಯನ್ನು ತಿಳಿಸಿದೆವು . . ." ಹೀಗೆಂದು ಅವರು ಧರ್ಮಾಸ್ಪತ್ರೆ, ನೆಯ್ಗೆ ಕಾರಖಾನೆ, ಕೊನೆಗೆ ಛಾಪಖಾನೆಗಳನ್ನು ತೋರಿಸಿದರು. "ನೋಡಿರಿ ನಮ್ಮ ಛಾಪಖಾನೆಯವರು ಪ್ರತಿ ವರುಷ ೧೫,೦೦೦ ಬ್ಯಾಬಲನ್ನು ಧರ್ಮಾರ್ಥವಾಗಿ ಹಂಚುತ್ತಿರುವರು. ಛಾಪಖಾನೆಯ ಆಯವೆಲ್ಲಾ ಧರ್ಮಪ್ರಚಾರಕ್ಕೆ ಇದಲ್ಲದೆ ನಮ್ಮ ಮತ ಸೇರುವವರಿಗೆ ಬದುಕಲು ಯಾವತ್ತು ಅನುಕೂಲತೆಗಳನ್ನೂ ಮಾಡಿಕೊಡುವೆವು. ಮುಖ್ಯವಾಗಿ ನಮ್ಮ ಧರ್ಮದಲ್ಲಿ ಸುಖವಿದೆ. ಯೇಸುವನ್ನು ನಂಬಿದವರಿಗೆ ಸ್ವರ್ಗವಿದೆ"—ಎಂದು ಡಾಕ್ಟರರ ಉಪದೇಶ

ವಾಗಿ ಅವರು ತಿರುಗಿ ಸಮಿತಿಯವರನ್ನು ಬಂಗ್ಲೆಗೆ ಕರದೊಯ್ದರು. ಅಷ್ಟರಲ್ಲಿ ಅವರ ತರುಣ ಪತ್ನಿಯು ಹೊರಬಂದು—"ಊಟಕ್ಕಾಯಿತು" ಎಂದಳು. ಆರ್ನಲ್ಡರು "ಬರುವೆ" ಎಂದು ಪತ್ನಿಗೆ ಉತ್ತರವಿತ್ತು, ತಮ್ಮ ಕೊಠಡಿಗೆ ಹೋಗಿ ಹತ್ತೆಂಟು ಪುಸ್ತಕಗಳನ್ನು ತಂದು- "ಇನ್ನೊಮ್ಮೆ ಬರಬೇಕು. ಈಗ ಈ ಪುಸ್ತಕಗಳನ್ನು ಒಯ್ದು ಓದಿನೋಡಿರಿ. ಅಂದರೆ ನಮ್ಮ ಮತವು ಎಷ್ಟು ಶ್ರೇಷ್ಠ ಎಂದು ತಿಳಿಯುವುದು"—ಎಂದು ಅವರನ್ನು ಬೀಳ್ಕೊಟ್ಟರು.

ಡಾಕ್ಟರ ಆರ್ನಲ್ಡರವರು ಐರೋಪ್ಯರು. ಅವರೀಗ ಇಲ್ಲಿ ಬಂದು ನೆಲಸಿ ೧೮ ವರುಷವಾಯಿತು. ಊರಿಗೆ ಸಹ ಮರಳಲಿಲ್ಲ. ತಮ್ಮ ೬೫ನೇ ವಯಸ್ಸಿನಲ್ಲೂ, ಮಿಷನಿನ ಕೆಲಸ ನಡೆಯಿಸುತ್ತಿರುವರು. ಆಸ್ಪತ್ರೆಯಲ್ಲಿ ವೈದ್ಯರೂ ಅವರೇ. ಅವರ ಕೆಲಸಗಳಲ್ಲಿ ಅವರ ೨೫ ವಯಸ್ಸಿನ ಉತ್ಸಾಹಿ ಪತ್ನಿಯವರು ತುಂಬಾ ಸಹಕಾರಿಗಳಾಗುವರು. ಮುಖ್ಯವಾಗಿ "ಯೇಸುವಿಲ್ಲದೆ ಸ್ವರ್ಗವಿಲ್ಲ" ಎಂದವರ ತತ್ವ.

* * * * *

## ಆರ್ಯಸಮಾಜ ಮಿಷನೆರಿ ಪ್ರಭಾಶಂಕರ ವಾಚಸ್ಪತಿಯಲ್ಲಿ.

ಆ ದಿನ ಗಿರಾಜಪುರದಲ್ಲಿ ಸಮಿತಿಯವರು ನಡೆನಡೆದು ಬೇಸತ್ತಿದ್ದರು. ಅವರಿಗೆ ವಿಶ್ರಾಂತಿಗೊಂದು ಸ್ಥಳಬೇ

ಕಿತ್ತು ನಗರದಲ್ಲಿಳಿದುಕೊಳ್ಳಲು ಸ್ವಲ್ಪ ಅಂಜಿಕೆ. ಅಂದರೆ ಎರಡೇ ಎರಡು ತಿಂಗಳ ಕೆಳಗೆ ಆ ಊರಿನಲ್ಲಿ ಹಿಂದೂಯುವನರ ದಂಗೆಯಾಗಿತ್ತು. ಆ ನಗರದಲ್ಲಿ ಅಧಿಕಾಂಶ ಜನರು ಯುವನರು. ಹೀಗಾಗಿ, ವಿಶ್ರಾಂತಿ ಸ್ಥಳವನ್ನು ಹುಡುಕಲು ಬಹಳ ಪೇಚಾಡುತ್ತಿದ್ದರು. ಇವರು ಅತ್ತಿತ್ತ ಅಲೆದಾಡುತ್ತಿರುವುದನ್ನು ಕಂಡ ಓರ್ವ ಮೂವತ್ತು ವಯಸ್ಸಿನ ತರುಣನು– ಇವರಾರು ಎಲ್ಲಿಗೆ ಹೋಗುವವರು ಎಂದೆಲ್ಲಾ ವಿಚಾರಮಾಡಿದನು. ಎಲ್ಲಾ ವಿಚಾರಗಳನ್ನು ತಿಳಿದ ಬಳಿಕವನು "ಅದಕ್ಕಷ್ಟೇನು ಯೋಚನೆ ನಮ್ಮ ಆರ್ಯಮಂದಿರಕ್ಕೆ ಬನ್ನಿರಲ್ಲಾ"–ಎಂದನು ಬಡವನಿಗೆ ಭಾಗ್ಯ ದೊರೆತಂತಾಯಿತು. ಆ ರಾತ್ರಿ ಯೆಲ್ಲಾ ಅವರು ಆ ಆರ್ಯಮಿಷನೆರಿ ಪ್ರಭಾಶಂಕರನ ಆತಿಥ್ಯದಲ್ಲೇ ಕಳೆದು ಮರುದಿನ ಮುಂದಿನ ಪಯಣ ಸಾಗಿದರು.

ಪ್ರಭಾಶಂಕರನು ಬಲು ಧೈರ್ಯಶಾಲಿ. ಅವನು ಗಿರಾಜಪುರದಲ್ಲಿ ದಿನೇ ದಿನೇ ಕ್ಷೀಣವಾಗುತ್ತಿರುವ ಹಿಂದೂಸಮಾಜವನ್ನು ಉದ್ಧರಿಸಲು ಬಂದವನು. ಅವನೀಗ ಬಂದಂದಿನಿಂದ ಜನರು ಯುವನಧರ್ಮಕ್ಕೆ ಮತಾಂತರವಾಗುವುದನ್ನು ನಿಲ್ಲಿಸಿರುವನು ಬದಲು, ಬಂದಮೇಲೆ ೪೦೦ಕ್ಕೂ ಮಿಕ್ಕಿ ಜನರನ್ನು ಶುದ್ಧಿಮಾಡಿ ಆರ್ಯರನ್ನಾಗಿ ಮಾಡಿರುವನು ಇನ್ನುಮುಂದ ವರುಷಕ್ಕೆ ೧೦೦೦ ಮತಾಂತರಗಳನ್ನಾದರೂ ಮಾಡಬೇಕೆಂದು ಅವನ ದೃಢನಿಶ್ಚಯ. ಸಂಖ್ಯೆ ಭರತಿಯಾಗಲೂ ಬಹುದು.

## ಪ್ರಭಾಶಂಕರನೊಡನೆ ನಡೆದ ಕೆಲವು ಪ್ರಶ್ನೋತ್ತರಗಳಿವು:—

ವಿಶ್ವ:—ಹಿಂದೂಧರ್ಮದ ವಿಚಾರದಲ್ಲಿ ನಿಮ್ಮ ಅಭಿಪ್ರಾಯ ಹೇಗೆ?

ಪ್ರಭಾ:—ಅದೀಗ ಅರ್ಥ ಅನರ್ಥಗಳ ಕಲಸು ಮೇಲೋಗರವಾಗಿದೆ ಅದನ್ನು ಶುಚಿಯಾಗಿ ಮಾಡು ವುದೇ ನಮ್ಮ ಆರ್ಯಸಮಾಜದ ಉದ್ದೇಶ.

ವಿಶ್ವ:—ಹಾಗೆ ಶುಚಿಯಾಗಿರಿಸಲು ಆಧಾರಗಳಾ ವುವು?

ಪ್ರಭಾ:—ನಮಗೆ ದೇವದತ್ತ ವೇದವೇ ಆಧಾರ

ವಿಶ್ವ:—ಸನಾತನಿಗಳೂ ಅದನ್ನು ತೋರಿಸುವರಲ್ಲ;

ಪ್ರಭಾ:—ತೋರಿಸುವರು ಆದರೆ, ಅರ್ಥ ಗಳನ್ನು ಅವರು ಬೇಕಾದಂತೆ ತಿರುಗಿಸಿಕೊಳ್ಳುವರು. ಅವರಿಗೆ ಸಂಕುಚಿತ ದೃಷ್ಟಿಯ ಸಾಯಣನೇ ಭಾಷ್ಯ ಕಾರನು. ಸಾಯಣನಿಗೆ ಭಾಷ್ಯಬರೆಯುವ ಜ್ಞಾನವೆಲ್ಲಿ? ದಯಾನಂದ ಮಹಾರಾಜರ ಭಾಷ್ಯದ ಮುಂದೆ ಸಾಯಣ ಭಾಷ್ಯಕ್ಕೆ ಬೆಲೆಯೆಲ್ಲಿ? ಮುಖ್ಯವಾಗಿ ಸಾಯಣನು ಅಪೂರ್ಣ ಪಂಡಿತನೆಂಬುದಕ್ಕೆ ಅವನ ಆರಾಧ್ಯದೇವತೆಯೇ ಸಾಕ್ಷಿ. ಅವನು ಮೂರ್ತಿಪೂಜ ಕನು ವೇದಗಳಲ್ಲಿ ಮೂರ್ತಿಪೂಜೆಗೆ ಆಧಾರವಿಲ್ಲ ವೇದಕ್ಕೆಟೀಕ ಬರೆಯುವವನೇ, ನಿರಾಕಾರ ದೇವರನ್ನು ಸಾಕಾರವಾಗಿ ತಿಳಿದರೆ, ಸಮಾಜವು ಉಳಿಯಬೇಕು ಹೇಗೆ?

ವಿಶ್ವ:— ಸಾಕಾರ ಪೂಜೆ ವ್ಯರ್ಥವೆಂದು ಹೇಗೆ ಹೇಳುವಿರಿ?

ಪ್ರಭಾ:— ಹೇಳುವುದೇಕೆ! ಅದರ ಮೋರೆಯ ಮೇಲೆಯೇ ತಿಳಿಯುವುದಲ್ಲ. ನೀವು ನಮ್ಮ ದಯಾನಂದರ ಚರಿತ್ರೆಯನ್ನು ಓದಿಲ್ಲವೇನು? ಆ ಶಿವರಾತ್ರಿ ದಿನ ಇಲಿಯು ಶಿವಲಿಂಗದ ಮೇಲೆ ಓಡಿದ ಕಥೆ.

ವಸಿಷ್ಠ:— ದೇವರು ಇಲಿಯಲ್ಲೂ ಲಿಂಗದಲ್ಲೂ ಇರಲು ಅದರಿಂದ ದೇವರಿಗೇನು ಅಪಮಾನ.

ಪ್ರಭಾ:— ಅದು ಬೇರೆ ವಿಚಾರ ದೇವರು ನಮ್ಮಲ್ಲೂ ಇರುವನು ನಾವು ಅವನ್ನು ಪೂಜಿಸ ಬೇಕೇಕೆ?

ವಸಿಷ್ಠ:— ಹಾಗೆ ತನ್ನಲ್ಲಿ ದೇವರಿರುವನೆಂದು ತಿಳಿದುಕೊಂಡವನು ಬೇರೆ ದೇವರನ್ನು ಪೂಜಿಸ ಬೇಕೆಂದಿಲ್ಲ

ಪ್ರಭಾ:— ಓಹೋ, ನೀವು ಶಂಕರ ಸಾಂಪ್ರದಾಯಿಗಳು. ಆದರೆ ವೇದವು ದ್ವೈತವನ್ನು ಸಾಧಿಸುತ್ತಿದೆ.

ವಿಶ್ವಾಮಿತ್ರ:— ಬೇರೆ ಧರ್ಮಗಳ ವಿಚಾರ ನಿಮ್ಮ ಅಭಿಪ್ರಾಯ ಹೇಗೆ?

ಪ್ರಭಾ:— ವೇದಗಳೇ ನಮ್ಮ ಧರ್ಮದ ಅಡಿಗಲ್ಲು. ಅದನ್ನು ನಂಬದಿದ್ದರೆ ಮೋಕ್ಷವಿಲ್ಲ.

ವಿಶ್ವಾ:— ಕ್ರಿಸ್ತಿಯರನ್ನುವರು—ಬ್ಯಾಬಲನ್ನು ನಂಬದಿದ್ದರೆ ಮೋಕ್ಷವಿಲ್ಲವೆಂದು.

ಪ್ರಭಾ:— ಕ್ರಿಸ್ತಿಯರ ಮಾತು ಬಿಡಿ. ಕ್ರಿಸ್ತ

ನೆಂಬವನೇ ಹುಟ್ಟಿಲ್ಲ. ನಮ್ಮ ಠಾಕುರಖಾನ ಚಂದ್ರ ವರ್ಮರು Christ a myth ಎಂದು ಸಿದ್ಧಾಂತ ಪಡಿಸಲಿಲ್ಲವೇ?

ವಿಶ್ವಾ:— ಕ್ರಿಸ್ತನು ಸುಳ್ಳಾದರೆ "ಬ್ಯಾಬಲು"?

ಪ್ರಭಾ:— ಅದರಲ್ಲಿ ಅಬದ್ಧವೆಷ್ಟುಬೇಕು? ಮಾತ್ರ ವಲ್ಲ ಅದು ವೇದಗಳಿಂದೀಚಿನದು ಅಷ್ಟೆ ಅಲ್ಲ. ಅದ ರಲ್ಲಿ ವೇದವಿರುದ್ಧವಾದ ವಿಷಯುಗಳಿವೆ. ವೇದವು ದೈವಪ್ರಣೀತ. ಇದು ಕಲ್ಪನಾಕ್ರಿಸ್ತ ಪ್ರಣೀತ. ಮುಖ್ಯ ವಾಗಿ 'ವೇದಧರ್ಮಕ್ಕಿಂತ ಇನ್ನು ಧರ್ಮಗಳಿಲ್ಲಿಲ್ಲ ವೇದಕ್ಕೆ ಮೇಲು ಇನ್ನಿಲ್ಲ'

ವಿಶ್ವಾ:— ಬ್ಯಾಬಲು ಇತ್ತೀಚೆಗಿನದಾದರ ಅರ್ಥ ವಿಲ್ಲೆನ್ನಬೇಕೆ? ತಂದೆಗಿಂತ ಮಗನು ಚಿಕ್ಕವನಾದರೂ ಬುದ್ಧಿವಂತನಾಗಬಾರದೆಂದಿದೆಯೇ.

ಪ್ರಭಾ:— ಅದು ಡೊಂಕು ವಾದ ಆ ಉಪ ಮಾನವು ಇಲ್ಲಿಗೆ ಸರಿಯಲ್ಲ. ಅಲ್ಲದೆ ವೇದವು ತಂದೆ ಯಂದರೆ ದೇವರಾಯಿತು — ಮಗನು ಕ್ರಿಸ್ತ. ದೇವರಿ ಗಿಂತ ತಾನು ದೊಡ್ಡವನಲ್ಲ'ವೆಂದು ಕ್ರಿಸ್ತನೇ ಅಂದಿ ರುವನಲ್ಲ.

## ಪ್ರಕರಣ ೧೬.

## "ಸಾಕಪ್ಪಾ, ನಿನ್ನ ಪುರಾಣ."

ದೂರ್ವಾಸರಿಗೇಕೋ, ಮುಂಬಯಿಯನ್ನು ಕಾಣು ವ ಮನಸ್ಸಾಯಿತು. ಅವರ ಠರಾವಿಗೆ ಯಮ ಧರ್ಮ

ರಾಯನಂತೂ ಒಪ್ಪಿಗೆಯನ್ನು ಕೊಟ್ಟೇ ಕೊಟ್ಟನು. ಸಾಧು ಸದಾನಂದನೂ ಎಲ್ಲಿಗೂ ಸಿದ್ಧ. ಹೀಗಾಗಿ, ಹಣ್ಣುಗಡ್ಡದ ವಸಿಷ್ಠನು ಇವರ ಆಸೆಗೆ ಅಡ್ಡಬರುವನೇ? ಇಲ್ಲ. ಸರಿ, ಮುಂಬಯಿಗೆ ಹೋಗುವುದೆಂದು ನಿಶ್ಚಯುವಾಯಿತು. ಪ್ರಯಾಣ ಸಾಗಿಸಿ ವಿಕ್ಟೋರಿಯಾ ನಿಲ್ದಾಣಕ್ಕೆ ಬಂದರು. ಸಾಧುವರ್ಯನ ಶಿಷ್ಯನೆನಿಸಿಕೊಂಡವನೊಬ್ಬನು ಗ್ರಾಂಟರೋಡಿನ ಬಳಿ ವಾಸವಾಗಿದ್ದನು ಬೋರಿಬಂದರಿನಿಂದ ಗ್ರಾಂಟರೋಡಿನ ವರೆಗೆ ಟ್ರಾಮಿಗೇಕೆ ಕಾಸು ಖರ್ಚುಮಾಡುವುದೆಂದು ಅವರು ಕಾಲುಹಾದಿಯಿಂದ ಮುಂದೆ ಸಾಗಿದರು ಸಾಗ ಸಾಗುತ್ತ ಪ್ಯಾದೋಣಿಯ ಮುಂದೆ ಹಾದಿ ತಪ್ಪಿತು. ತಿರುಗಾಡತೊಡಗಿದರು. ಕತ್ತಲೆಯಾಗಿ ಹೋಗಿತ್ತು. ಅಂತು ಕೇಳ ಕೇಳುತ್ತ ಮುಂದರಿಸಿದರು ದಾರಿಯಲ್ಲಿನ ಸೊಬಗನ್ನೇನು ಹೇಳಲಿ! ಮುಂಬಾಯಿಯ ಪಾತಿವ್ರತ್ಯದ ಬೀದಿಯೇ ಅವರ ಕಣ್ಣಮುಂದೆ ಬಂದಿತು. ವಸಿಷ್ಠನಂತು ವಿಶ್ವಾಮಿತ್ರನ ಮೋರೆಯನ್ನು ಒಂದೇ ಸವನೆ ನೋಡುತ್ತ ಬಂದನು ವಿಶ್ವಾಮಿತ್ರನು ಒಂದು ಠಾಣೆಗೆ ಬರಲು ತಟಸ್ಥನಾಗಿ ನಿಂತುಬಿಟ್ಟನು. ಓರ್ವ ಕುಷ್ಠರೋಗಿಯು ಬಳಿಯಲ್ಲಿ ವೇಷಭೂಷ ಬಣ್ಣಗಿಣ್ಣಗಳಿಂದ ಮೆರೆಯುತ್ತಿದ್ದ ವೈಯ್ಯಾರಶೀಲೆಯೊಬ್ಬಳೊಡನೆ ಪಾತಿವ್ರತ್ಯದ ಧಾರಣೆ ಕೇಳುತ್ತಿದ್ದನು. ಈ ಚಿತ್ರವನ್ನು ಕಂಡು: "ಯುಮರಾಯಾ, ನಿನ್ನ ಮಾರ್ಕೆಟೇ ಇದು?" ಎಂದುಬಿಟ್ಟನು. ದಾರಿಯುದ್ದಕ್ಕೂ ಆಬಾಲ

ವೃದ್ಧರ ಸಂತೆಯೇ ನಡೆದಿತ್ತು. ಬರುವರು, ಹೋಗು ವರು, ಸಿಳ್ಳುಹೊಡಿಯುವರು, ಚಪ್ಪಾಳೆ ಹೊಡಿಯುವರು, ಹಾಡು ಹಾಡುವರು — ಇವರದೇ ಒಂದು ಬೃಂದಾವನ. ಇವರು ನಿಂತುದನ್ನು ಕಂಡು ಓರ್ವ ಪಠಾನನು ಓಡೋಡಿ ಬಂದು "ಬಂನಿ ಸ್ವಾಮಿ, ಇಲ್ಲಿ ಉಪಯೋಗವಿಲ್ಲ ಬೇರೆ ಕಡೆಯಲ್ಲಿ ನಿಮಗೆ ಒಪ್ಪುವವರನ್ನು ತೋರಿಸುವೆ ಬನ್ನಿರಿ" ಎಂದು ವಿಶ್ವಪ್ಪನ ಕೈಗೆ ಕೈಕೊಟ್ಟನು. ಅಷ್ಟ ರಲ್ಲೇ ಗಿರಾಕಿಗಳು ಬೇರೆಯವರ ಪಾಲಾಗುವರಲ್ಲಾ ಎಂದು ಅನ್ಯ ದಲ್ಲಾಳಿಗಳೂ ಬಂದರು ಅಂತು ಇಂತು ಅವರ ಕೈಯಿಂದ ತಪ್ಪಿಸಿಕೊಂಡು ಗ್ರ್ಯಾಂಟ್‌ರೋಡ್ ಮುಟ್ಟಬರಲು ಪ್ರಾಣಕ್ಕೆ ಬಂದಿತು ಅಲ್ಲೇ ನಿಂತು ದಿಕ್ಕು ತಪ್ಪಿದವರಂತೆ ಯೋಚನೆಮಾಡತೊಡಗಿದರು; ಸದಾನಂದನಿಗೆ ಶಿಷ್ಯನ ಮನೆಗೆ ಸರಿಯಾದ ಹಾದಿ ತಿಳಿ ದಿರಲಿಲ್ಲ. ಗಡಿಬಿಡಿಯಲ್ಲಿ ಇವರು ಬರೆದ ಪತ್ರ ಒಂದ ಕ್ಕೊಂದು ವಿಳಾಸವಾಗಿ ಆ ಶಿಷ್ಯನಿಗೂ ಸಿಕ್ಕಿಲ್ಲವಾದುದ ರಿಂದ, ಪೂರ್ವನಿಶ್ಚಯದಂತೆ, ಅವನು ರೈಲ್ವೆ ನಿಲ್ದಾಣಕ್ಕೆ ಇವರನ್ನು ಸ್ವಾಗತ ಮಾಡಲೂ ಬಂದಿರಲಿಲ್ಲ. ಕಾಲು ಹಾದಿಯಲ್ಲಿ ಹಾಗೆಯೇ ಯೋಚಿಸುತ್ತ ನಿಂತರೆ ಹಾದಿ ಹೋಕರ ಹಾಯುವಿಕೆಯಿಂದ ನುಗ್ಗುನುರಿಯಾಗ ಬಹುದು. ಪುಣ್ಯಕ್ಕೆ ಅಷ್ಟರಲ್ಲಿಯೇ ಅವರ ಪರಿಚಿತ, ಬೇಕಾದ, ಆ ಶಿಷ್ಯನೇ ಅಲ್ಲಿಗೆ ಬಂದನು ಅವನು ಆ ದಿನ ಆದಿತ್ಯವಾರವಾದುದರಿಂದ ಮ್ಯಾಟನಿ ನಾಟಕವೊಂದಕ್ಕೆ ಹೋಗಿದ್ದನು ಮ್ಯಾಟನಿ ಮುಗಿದು ಬರುವಾಗ ಹಾದಿ

ಯಲ್ಲಿ ಗುರುಗಳನ್ನು ಹಾದು ಕಣ್ತೆರೆದು ನೋಡಲು, ಪರಮಾನಂದವಾಯಿತು. "ಹೂಂ, ಹೊರಡಿರಿ, ಇದೇನು ನನಗೆ ಒಂದು ಪತ್ರವನ್ನು ಬರೆಯಬಾರದಿತ್ತೇ?" ಎಂದು ಅವರನ್ನು ಮನೆಗೆ ಒಯ್ದನು. ಅಂತು ರಾತ್ರಿ ಸೆಕೆ ಯಲ್ಲಿ ಈ ಐದು ಶರೀರಗಳನ್ನು 6″×8″ಯ ದೊಡ್ಡ ಕೊಠಡಿಯಲ್ಲಿ ತುಂಬಿಸಿ ಚೆನ್ನಾಗಿ ಬೇಯಿಸಿದನು. ಮರುದಿನ ನೆರೆ ಕೂರಡಿಯೊಂದರಲ್ಲಿ, ಗೆಳೆಯರ ಸ್ನೇಹ ಮಾಡಿ, ನಮ್ಮ ಶ್ರೀ|| ಗೋಡ್‌ಬೊಳೆಯು ಅತಿಥಿ ಗಳಿಗೆ ಸ್ವಲ್ಪ ವಿಶ್ರಾಂತಿಯುಂಟುಮಾಡಿಸಿಕೊಟ್ಟನು.

ಅವರು ಬಂದ ಮರುದಿನದ ಪತ್ರಿಕೆಗಳಲ್ಲಿ ಇವರೈವರ ಭಾವಚಿತ್ರಗಳು ಪ್ರಕಟವಾಗಿದ್ದುವು ಹೆಚ್ಚೇನು — ಪಾತಿವ್ರತ್ಯ ಬಾಜಾರಿನಲ್ಲಿ ಇವರಿಗಾದ ಪ್ರಸಂಗವು 'The Daily Pictorial" ಎಂಬುದರಲ್ಲಿ ಬಂದಿತ್ತು. ಅದನ್ನವರು ಹೇಗೆ ಸಂಗ್ರಹಿಸಿದರೆಂದು ತಿಳಿಯಲು ನೀವಾದರೂ ಕುತೂಹಲಪಡಬಹುದು. ಇವರು ಬರುವರೆಂಬ ಸುದ್ದಿ ಒಬ್ಬ ಪತ್ರಕರ್ತನ ಕಿವಿಗೆ ಬಿದ್ದು, ಅವನು ತನ್ನ 'ಕೆಮರಾ'ವನ್ನು ನಿಲ್ದಾಣಕ್ಕೆ ಕಳುಹಿಸಿದನು. ಸರಿ. ಒಂದು ಕೆಮರಾ ಹೋದುದನ್ನು ಕಂಡೊಡನೆ ಬೋರಿಬಂದರಿಗೆ ಹಲವು ಕೆಮರಾಗಳು ಸಾಗಿದುವು. ನಮ್ಮ 'ಡೈಲಿ ಪಿಕ್ಟೋರಿಯಲ್'ನ ಕಮರಾ ಹೋಗುವುದರೊಳಗೆ ನಾಥುಮುಂಡಳವು ಸಾಗಿಹೋಗಿತ್ತು. ಇವರನ್ನು ಅವನು ಅತಿವೇಗದಿಂದ ಹಿಂಬಾಲಿಸಿದನು. ಇವರ ನಡಿಗೆ ಮತ್ತೂ ಜೋರಾಗಿತ್ತು ಆದರೆ ಪಾತಿವ್ರತ್ಯ

ಬಾಜಾರಿನಲ್ಲಿ ಇವರ ನಡಿಗೆ ಮೆಲ್ಲಗಾಗಲು, ನಮ್ಮ ಚಿತ್ರ ಕಾರನು ಗೆದ್ದನು. ವಿಶ್ವಾಮಿತ್ರನು ನಿಂತುದೇ ಅವನ ಪಾಲಿಗೆ ಸುಸಂಧಿಯಾಯಿತು ತೇಜೋಸ್ಫುರಣ (Flash light)ದ ಸಹಾಯದಿಂದ ಛಾವಚಿತ್ರ ತೆಗೆಯುವಷ್ಟರಲ್ಲಿ, ಸಾರ್ವಜನಿಕ ಛಾವಂದಿರು ಅವರನ್ನು ಸುತ್ತುವರಿದಿದ್ದರು. ಮುಂದೆ ಅವರು ತಪ್ಪಿಸಿಕೊಳ್ಳಲು ಓಡಾಡಿದುದರಿಂದ ಫೋಟೋಗ್ರಾಫರನು ಅಷ್ಟಕ್ಕೇ ತೃಪ್ತನಾಗಿ ಮರಳಿದನು.

ಮರುದಿನ ಬೆಳಗ್ಗಿನ ಪತ್ರಿಕೆಯಲ್ಲೇ ಈ ಚಿತ್ರವು ಪ್ರಕಟವಾಯಿತು ಅದರ ಮೇಲೆ ಯಥಾವತ್ ಟೀಕೆ ಟಿಪ್ಪಣಿಗಳೂ ನಡೆದಿದ್ದುವು.

"ಸಾಯಂಕಾಲ ವರ್ತಮಾನ"ದಲ್ಲಿ, "ಸಾಧು ಸದಾನಂದನ ಗುಟ್ಟು ಸಫೇದ್ ಗಲ್ಲಿಯಲ್ಲಿ ರಟ್ಟಾಯಿತು" ಎಂದಿತ್ತು. ಅವನಿಗೆ ಸಾಧುಗಳ ಹೆಸರನ್ನು ಕೇಳಿದರಾಗದು. ಇವರೆಂದೇನು ಹೆಚ್ಚಿನ ವಿಶೇಷವಲ್ಲ. ಅವನು ಜನಮೇಜಯನ ಸರ್ಪಯಾಗದಂತೆ, 'ಕಾಷಾಯಧಾರಿಗಳ ಯಾಗ'ವನ್ನು ಮಾಡಲು ನೊಂಟಕಟ್ಟಿದವನು. ಹೀಗಾಗಿ ಸದಾನಂದನು ತಪ್ಪುವುದು ಹೇಗೆ? ಈ ವಿಷಯವಾಗಿಯೇ ಪತ್ರಿಕೆಗಳಲ್ಲಿ ಎಂಟು ದಿನಗಳತನಕ ಬಡಿದಾಟವಾಯಿತು. ಸಾಲು ಸಾಲು ಅಗ್ರಲೇಖನಗಳು ಹೊರಟುವು. ಶ್ರೀ ಗೋದಬೋಳೆಯು ಸ್ವತಃ ಪತ್ರಕರ್ತ. ಆದರೆ ಅವನದು ಪ್ರತಿ ಶನಿವಾರ ಹೊರಡುವ ವಾರಪತ್ರಿಕೆ. ಈ ಪ್ರಸಂಗದಲ್ಲಿ, ಅವನು ತನ್ನ ಅತಿಥಿ

ಗಳ ಮಾನ ಉಳಿಸಲು "ಸದಾನಂದ ವಿಶೇಷಾಂಕ" ಗಳೆಂದು ನಾಲ್ಕು ದಿವಸಗಳ ವರೆಗೆ ಹೊರಡಿಸಿದನು. ಕೊನೆಗೆ ಇದೂ ತೀರ ಫಲಕಾರಿಯಾಗಲಿಲ್ಲವೆಂಬ ಭಾವನೆಯಿಂದ ಮಾರವಾಡಿ ವಿದ್ಯಾಲಯದಲ್ಲಿ ಒಂದು ಉಪನ್ಯಾಸವನ್ನು ಸಾಧುವರ್ಯರ ಬಾಯಿಯಿಂದಲೇ ಕೊಡಿಸಲು ನಿರ್ಧರಿಸಿದನು. ಸ್ಥಳಸಂಕೋಚವಾಗ ಬಹುದೆಂದು ಅವನ ಗೆಳೆಯರು ಹೇಳಿದುದರಿಂದ, ಚೌಪಾಟಯಲ್ಲಿ ಆದಿತ್ಯವಾರ ಸಂಜೆ ೫ಘಂಟೆಗೆ ಸಾರ್ವಜನಿಕ ಸಭೆ ಜರುಗಿಸಬೇಕೆಂದು ನಿಶ್ಚಯಮಾಡಿದನು

ಶ್ರೀ ಗೋಡಬೋಳೆಯ ಶನಿವಾರ ಸಂಜೆಯ ಪತ್ರಿಕೆಯಲ್ಲಿ ಸಾಧುಸದಾನಂದನು ನೋಡುತ್ತಾನೆ! ಪ್ರಥಮ ಪುಟದಲ್ಲಿ ಪೂರ್ಣವಾಗಿ ದೊಡ್ಡದೊಂದು ಜಾಹೀರಾತು. "ಶ್ರೀ ಸಾಧುಸದಾನಂದರು ನಾಳೆ ಸಂಜೆ ೫ ಘಂಟೆಗೆ 'ಚೌಪಾಟಯಲ್ಲಿ ಆರ್ಯಾವರ್ತದ ಉದ್ಧಾರ' ಎಂಬ ವಿಚಾರವಾಗಿ ಶ್ರೀ ಜಗತ್ ನಾರಾಯಣ ಕೀರ್ತಿಕರರ ಅಧ್ಯಕ್ಷತೆಯಲ್ಲಿ ಉಪನ್ಯಾಸ ಕೊಡಲಿರುವರು ಅವರ ಸಂಗಾತಿಗಳೂ ಕೆಲವು ಮಾತುಗಳನ್ನಾಡಲಿರುವರು" ಎಂಬ ಭಾವ ಪ್ರಕಟಣೆ ಒಳಗಡೆಯಲ್ಲಿ ಸಾಧುಮಂಡಲದ ದೊಡ್ಡದೊಡ್ಡ ಚಿತ್ರಗಳು.

ವಿಶ್ವಾಮಿತ್ರ: - ಸದಾನಂದ, ಇದೇನು ಸಾರ್ವಜನಿಕ ಉಪನ್ಯಾಸದ ಹುಚ್ಚು ನಿನಗ ಹಿಡಿಯಿತು ಈ ವ್ಯವಸ್ಥೆ ಮಾಡುವ ಪೂರ್ವದಲ್ಲಿ ನನಗೆ ತಿಳಿಸಿದ್ದರೆ ನಾನು ಬೇಡವೆಂದೇ ಹೇಳುತ್ತಿದ್ದೆ.

ಸಾಧು:—ನಾನು ಅದನ್ನು ನಿಶ್ಚಯಪಡಿಸಿದವನಲ್ಲ; ಇದೆಲ್ಲಾ ಶ್ರೀ ಗೋಡಬೋಳೆಯ ಅಪರಿಮಿತ ಉತ್ಸಾಹದ ಫಲ. ಅವನು ನನಗೂ ಸಹ ಒಂದು ಮಾತನ್ನೂ ಹೇಳಲಿಲ್ಲ.

(ಅಷ್ಟರಲ್ಲಿ ಗೋಡಬೋಳೆಯು ಪ್ರವೇಶಿಸಿದನು)

ಗೋಡಬೋಳೆ:—ನಿಜ, ನಿಮಗೆ ತಿಳಿಸಿದ್ದರೆ ನೀವು ಒಪ್ಪುತ್ತಿದ್ದಿಲ್ಲವೆಂದು ನನಗೂ ತಿಳಿದಿತ್ತು ಆದ್ದರಿಂದ ಹೀಗೆ ಮಾಡಿದೆ. ಕ್ಷಮಿಸುವಿರಷ್ಟೆ. ಅಂತು ನಾಳೆ ದಿನ ಆ ಸಾಯಂಕಾಲ ವರ್ತಮಾನ' ಪತ್ರಕಾರನ ಮುಖಕ್ಕೆ ಮಸಿ ಬಳಿಯಬೇಕು ಮುಖ್ಯವಾಗಿ, ನಿಮ್ಮ ಮೇಲೆ ಪತ್ರಿಕೆಗಳು ಹುಚ್ಚು ಹುಚ್ಚಾಗಿ ಮಾಡಿದ ಟೀಕೆಗಳಿಗೆ ನೀವು ಸರಿಯಾದ ಉತ್ತರವೀಯಬೇಕು

ಸಾಧು:—ಅದು ಹೇಗಾದೀತು? "ವಿಷಯವು ಆರ್ಯಾವರ್ತದ ಉದ್ಧಾರ" ವೆಂದಿರಲು?

ಗೋಡಬೋಳೆ:—ಅದರಿಂದೇನು ಅಡ್ಡಿ? ಹಾಗೂ ಹೀಗೂ ವಿಷಯವನ್ನು ಅಲ್ಲಿಂದ ಇಲ್ಲಿಗೆ ಎಳೆದುಕೊಂಡು ಹೋಗುವದೇನು ಕಷ್ಟ.

ಸಾಧು:—ಉದ್ದೇಶ ಬಿಟ್ಟು ಮಾತನಾಡಲಾರೆ.

ಗೋಡಬೋಳೆ:-ಉದ್ದೇಶವಿಲ್ಲದೆ ಮಾತನಾಡುವ ಯುಗದಲ್ಲಿ ನೀವು ಈ ಚಿಲ್ಲರೆ ಕಲಸಕ್ಕೆ ಅಂಜುವಿರೇಕ?

ಸಾಧು:— ಆದರೂ ನನ್ನಿಂದಾಗದು.

ಗೋಡಬೋಳೆ:—ಚಿಂತೆಯಿಲ್ಲ, ನಿಮ್ಮ ಪರಿಚಯವನ್ನು ಮಾಡಿಕೊಡುವಾಗ ಆ ಕೆಲಸ ನಾನು ಮಾಡುವೆ.

ಸಾಧು:— ಆ ವಿಷಯ ಹಾಳಾಗಲಿ. ಅಧ್ಯಕ್ಷರಾರ
ವರು?

ಗೋಡಬೋಳೆ:— ನಿಮಗೆ ತಿಳಿಯದೇ? ನಮ್ಮ ಕೀರ್ತಿಕರ. ಇಲ್ಲಿನ ಸನಾತನಿ ಸಭೆಯ ಅಧ್ಯಕ್ಷ.

ಸಾಧು:—ಅವನು ತೀರ ಸಾಂಪ್ರದಾಯಿಕನಲ್ಲವೇ?

ಗೋಡಬೋಳೆ:— ಅವನು ಎಲ್ಲವೂ ಅಹುದು, ಯಾವುದೂ ಅಲ್ಲ. ಮುಖ್ಯವಾಗಿ ಅವನು ಯಾರ ಮನಸ್ಸನ್ನೂ ನೋಯಿಸದವನು. ಇನ್ನೆರಡನೆಯದಾಗಿ ಅವನ ಮಾತಿಗೆ ಮುಂಬಯಿಯು ಎರಡಾಡುವುದಿಲ್ಲ. ಹಲವು ಪತ್ರಿಕೆಗಳಲ್ಲಿ ಅವನ ಭಂಡವಳವಿದೆ. ಇಲ್ಲದೆ ಒಂದೆರಡು ಪತ್ರಿಕೆಗಳು ಬೊಬ್ಬೆಹೊಡೆದರೆ ಕೇಳುವರಾರು? ಅದಕ್ಕಾಗಿ ಭಾರೀ ಯೋಚನೆ ಮಾಡಿ ಅವನನ್ನು ಆರಿಸಿರುವೆ. ಅದರಿಂದ ನನಗೂ ಲಾಭವಾಯಿತು. ನನ್ನ ಪತ್ರಿಕಯ ಪೋಷಣೆಗಾಗಿ ೫೦೦೦ ರೂಪಾಯಿಗಳನ್ನು ವರುಷಾವಧಿ ಕೊಡುವೆನೆಂದು ವಾಗ್ದಾನಮಾಡಿರುವನು. ನಿಜವಾಗಿ ಕೀರ್ತಿಕರನೆಂದರೆ ಧರ್ಮರಾಯ.

* * * * *

ಸರಿ! ಆದಿತ್ಯವಾರ ಬಂದಿತು. ಮಧ್ಯಾಹ್ನ ಮೂರು ಘಂಟೆಯಿಂದ ಹಿಡಿದು ಜನಸಂದಣಿ ಚೌಪಾಟಿಗೆ ಹರಿಯುತ್ತಿತ್ತು. ಮುಂಬಯಿಯ ಗ್ರೇಟ್ ಇಲೆಕ್ಟ್ರಿಕ್ ಕಂಪೆನಿಯವರು ತಾವಾಗಿ ಲೌಡ್‌ಸ್ಪೀಕರವ್ಯವಸ್ಥೆ ಮಾಡಿದರು. ಹಾದಿಯುದ್ದಕ್ಕೂ – "ಸಾಧು ಸದಾನಂದರು ಗ್ರೇಟ್ ಕಂಪೆನಿಯ ರೇಡಿಯೋವಿನಲ್ಲಿ ಇಂದು ಮಾತ

ನಾಡುವರು" ಎಂದಿತ್ತು ದಾರಿಯಲ್ಲಿ ಗದ್ದಲದಿಂದ ಸೇಂಡಸ್ಟ್ರ್ ಸೇತುವೆಬಳಿ ನಾಲ್ಕಾರುಪ್ರಾಣಿಗಳು ನಜ್ಜುಗುಜ್ಜಾದುವು. ಅಂತು ಸಂಜೆ ನಾಲ್ಕುವರೆ ತಾಸಿಗೆ ಚೌಪಾಟಿಯಲ್ಲಿ ಮರಳಕಣವೊಂದೂ ಕಾಣಿಸದು. ಮುಂಬಯಿಯ ಸಾರ್ವಜನಿಕರು ಸಾಧುಗಳ ತಲೆಯನ್ನು ಚಿತ್ರದಲ್ಲಿ ಕಂಡಿದ್ದರಷ್ಟೆ; ಈಗ ಸಜೀವ ಕಾಣಬೇಕೆಂಬ ಕುತೂಹಲ ಅವರಿಗೆ.

ಸರಿ, ಅಧ್ಯಕ್ಷ ಕೀರ್ತಿಕರರ ಕಾರು ಅತಿ ಕಷ್ಟದಿಂದ ಬಂದಿತು ಅವರ ಅನುಯಾಯಿಗಳು ಅವರನ್ನು ಎತ್ತಿಕೊಂಡು ವೇದಿಕೆಯಮೇಲೆ ಕುಳ್ಳಿರಿಸಿದರು. "ಜೈ, ಕೀರ್ತಿಕರ್ ಮಹಾರಾಜಕೀ ಜೈ" ಎಂದು ಶಂಖನಾದವಾಯಿತು. ಸಾಧುಮಂಡಲವನ್ನು ಕಾಣದೆ ಸಭಿಕರ ತಾಳ್ಮೆ ಕೆಟ್ಟುಹೋಗಿತ್ತು. ಒಂದೇಸವನೆ ಸಿಳ್ಳು ಚಪ್ಪಾಳೆಗಳು ಆರಂಭವಾದುವು. ಐದು ಘಂಟೆಗೆ ಸರಿಯಾಗಿ ಸಾಧುಮಂಡಲವು ಗೋಡಬೋಳೆಯೊಂದಿಗೆ ಆಗಮಿಸಿತು. "ಆಯಾ" ಎಂದು ಯಾರೋ ಅಂದುದೇ ಸರಿ—ಕುಳಿತವರೆಲ್ಲಾ ಎದ್ದು ಅವರಿರುವಲ್ಲಿ ಮುಂದೊತ್ತಲು ಆರಂಭ. ಪೋಲೀಸುಸಾಬರಿಗೆ, ಅವರಿಗೆ ಮಾರ್ಗ ಕಲ್ಪಿಸಲು ಪ್ರಾಣಕ್ಕೆ ಬಂದಿತು. ಅಂತು ಇಂತು ಮಂಡಲವು ವೇದಿಕೆಯಮೇಲೆ ಸ್ಥಾಪನೆಯಾಯಿತು.

ಗೋಡಬೋಳೆಯು ಎದ್ದು ಪರಿಚಯವನ್ನು ಮಾಡಿಕೊಡತೊಡಗಿದನು. ೧೫ ನಿಮಿಷ ಮುಗಿದರೂ ಪರಿಚಯದ ಕೆಲಸ ಮುಗಿಯಲಿಲ್ಲ. ಅವನು ಸಾಧುಗಳ ಸಮ

ರ್ಥನೆ, ಮತ್ತು ಕೀರ್ತನಕರರ ಜಯಘೋಷವಾದುತ್ತಿ ದ್ದನು. ಸಭಿಕರು ಬೇಸತ್ತು: "ಸಾಕು. ಸಾಕು. ನಾವು ಸಾಧುಗಳನ್ನು ಕೇಳಬಂದವರು" ಎಂದು ಕೂಗಿದರು. ಅಧ್ಯಕ್ಷರು ಒಂದು ಬಾರಿ ಗೋಡಬೋಳೆಗೂ, ಇನ್ನೊಂದು ಬಾರಿ ಸಭೆಗೂ ಬೆರಳು ತೋರಿಸಿದರು. ಸಭೆಯು ಶಾಂತವಾಯಿತು. ಗೋಡಬೋಳೆಯು ಕೆಳಕ್ಕಿಳಿದನು. ಅಧ್ಯಕ್ಷರು ಎದ್ದು ನಿಲ್ಲಬೇಕೆನ್ನುವಷ್ಟರಲ್ಲಿ ಪೋಲೀಸು ಇನ್ಸ್‌ಪೆಕ್ಟರನೊಬ್ಬನು ಪ್ರವೇಶಿಸಿ ಸಾಧುಮಂಡಲದವರ ಮೇಲೆ 'ರಾಜಕೀಯ ವಿಚಾರ ಪ್ರಸ್ತಾಪವಾಡಕೂಡದು' ಎಂದು ನೋಟೀಸುಕೊಟ್ಟನು ಅಧ್ಯಕ್ಷರು ಈ ವಾರ್ತೆಯನ್ನು ಸಭಿಕರಿಗರುಹಿದರು. "ಶೇಮ್! ಶೇಮ್" ನಿನಾದವೆಸಗಿತು. "ಲಾಂಗ್ ಲಿವ್ ದಿ ರಿವ್ಯೊಲೂಶನ್ (ಕ್ರಾಂತಿಯು ದೀರ್ಘಾಯುವಾಗಲಿ)" ಎಂದು ಕೂಗಿದರು "ಬಾಲ್ಶೆವಿಸಮ್‌ಕೀ ಜೈ" ಎಂದು ಮೂರನೆಯ ತಂಡದಿಂದ ನಿನಾದವೆಸಗಿತು.

ಇಷ್ಟರಲ್ಲಿ ೫|||| ಘಂಟೆಯಾಯಿತು. ಕೀರ್ತನಕರರು ಮೆಲ್ಲನಿಯಿಂದ ಗೋಡಬೋಳೆಯಿಂದ ಸಾಧುಗಳ ವಿಚಾರ ಕೇಳುವುದು — ಈಚೆ ಅದನ್ನು ಗಟ್ಟಿಯಾಗಿ ಹೇಳುವುದು - ಹೀಗೆ ಮಾಡಿ ಅಧ್ಯಕ್ಷರ ಭಾಷಣ ಮುಗಿಸಿದರು. ಬೇರೆ ಅಧ್ಯಕ್ಷರು ಹೀಗೆ ಮಾಡಿದ್ದರೆ ಮುಂಬಯಿಯವರು ಅವರಿಗೆ ಸಮುದ್ರಸ್ನಾನಮಾಡಿಸುತ್ತಿದ್ದರು. ಆದರೆ ಇದು ಮುಂಬಯಿಯ ಪ್ರಮುಖ ಕೀರ್ತನಕರರೆಂದ ಬಳಿಕ.—

ಸರಿ, ಸಾಧುಸದಾನಂದನು ನಗುತ್ತ ಎದ್ದು ನಿಂತನು. ತಿರುಗಿ ಜಯ ಜಯಕಾರಗಳು! ಕೆಲವರು "ಸಾಧು ಸದಾನಂದ ಮಹಾರಾಜಕೀ ಜೈ" ಎಂದರು. ಕೆಲವರು "ಮಹಾತ್ಮಾ ಸದಾನಂದಕೀ ಜೈ" ಎಂದರು. ಇನ್ನೂ ಕೆಲವರು "ಮಿ| ಸದಾನಂದಕೀ ಜೈ" ಅಂದರು. ಅದರ ಹಿಂದೆ —'ಸನಾತನ ಧರ್ಮಕ್ಕೆ ವಿಜಯವಾಗಲಿ,' 'ಸುಧಾರಣೆಗೆ ಜಯವಾಗಲಿ,' 'ವಿಶ್ವಧರ್ಮಕ್ಕೆ ಜಯ ವಾಗಲಿ,' 'ಕ್ರಾಂತಿಗೆ ಜಯವಾಗಲಿ'— ಎಂದು ಕೂಗು ಗಳೆಸಗಿದುವು. ಅವು ಶಾಂತವಾಗಲಾಗಿ—"ನಾನು ರಾಜಕೀಯ ವಿಚಾರ ಮಾತಾಡುವುದಿಲ್ಲ" ಎಂದು ಸದಾನಂದನೆಂದನು.

ಸಭಿಕರು:—ಮಾತಾಡಿರಿ ಕಾಯಿದೆ ಭಂಗಮಾಡಿ ರಿ. ನಾವಿರುವೆವು. ಕಾಯಿದೆ ಭಂಗಕ್ಕೆ ಜಯವಾಗಲಿ.

ಸಾಧು: ಅಲ್ಲದಿದ್ದರೂ ರಾಜಕೀಯ ವಿಚಾರವು ನನ್ನ ಉದ್ದೇಶವಲ್ಲ. ನಾನು ಸನ್ಯಾಸಿ. ಸನ್ಯಾಸಿಗೆ ಬೇಕಾದುದು ಧರ್ಮ; ದೇವರು

ಸಭಿಕರಲ್ಲಿ:—'ಶೇಮ್ ಶೇಮ್.' 'ಡಿಸ್ ಅಪ್ಪಾಂ ಟೆಡ್' ನಮಗೆ "ಆರ್ಯಾವರ್ತದ ಉದ್ಧಾರವು ರಾಜ ನೀತಿಯಿಲ್ಲದೆ ಆಗದು. ಆ ಮೇಲೆ ಧರ್ಮವು ಬಂದರೆ ಬರಲಿ."

ಅಧ್ಯಕ್ಷ:—ನೀವು ಗದ್ದಲವೆಬ್ಬಿಸಿದರೆ ಅವರು ಮಾತಾಡುವುದೇ ಇಲ್ಲ. ಅವರೇನು ಎನ್ನುವರೆಂಬು ಕೇಳಿದ ಬಳಿಕ ನಿಮ್ಮ ಉದ್ಗಾರಗಳು ಹೊರಡಲಿ.

(ಎಲ್ಲರೂ ತತ್ಕಾಲಕ್ಕೆ ಶಾಂತರಾಗುವರು.)

ಸಾಧು:—ಧರ್ಮವು ರಾಜನೀತಿಯನ್ನು ಬಿಟ್ಟಿಲ್ಲ. ಜಗತ್ತಿನ ಪೋಷಣೆಗೆ ಬೇಕಾದುದೇ ಧರ್ಮ. ಇಂದು ಆರ್ಯಾವರ್ತದ ಉದ್ಧಾರಕ್ಕೆ ಬೇಕಾದುದೇ ಧರ್ಮ. ಆದುದರಿಂದ ನೀವು ಮೊದಲು ಧರ್ಮದೃಷ್ಟಿಯಿಂದ ಒಗ್ಗಟ್ಟಾಗಿರಿ. ಒಗ್ಗಟ್ಟು, ಒಗ್ಗಟ್ಟು, ಒಗ್ಗಟ್ಟು—ಅದು ಇಂದು ಬೇಕು.

ಅಧ್ಯಕ್ಷ:— ಕೇಳಿರಿ, ಕೇಳಿರಿ.

ಸಭಿಕರಲ್ಲಿ:—ಹೂಂ, ಈಗ ಹಾದಿಗೆಬರುತ್ತಿರುವರು. ಶಾಂತವಾಗಿ ಕೇಳಿ. ನಿಜವಾಗಿಯೂ ಚೆನ್ನಾಗಿದೆ.

ಸಾಧು:—ಮೊದಲು ನಮ್ಮಲ್ಲಿನ ಜಾತಿಭೇದಗಳು ಹೋಗಬೇಕು. ಅಸ್ಪರ್ಶತೆಯು ಹೋಗಬೇಕು. ಹಿಂದೂ ಯವನ ಕಲಹವು ನಿಲ್ಲಬೇಕು.

ಸುಧಾರಕರು: — ಕೇಳಿರಿ, ಕೇಳಿರಿ.

ಸಾಂಪ್ರದಾಯಿಕರು:—ಕೇಳುವದೇನು ಮಣ್ಣು: ಜಾತಿಕೆಡಿಸುವ ಸನ್ಯಾಸಿಯ ಮಾತನ್ನು.

ಹಿಂದು ಮಹಾಸಭಿಕ:—ಹಿಂದುಗಳು ಮುಸಲ್ಮಾನರನ್ನೆಂದೂ ನಂಬಬಾರದು.

ಮುಸಲ್ಮಾನರು:—ಹಿಂದುಗಳು ಠಕ್ಕರು.

ಅಧ್ಯಕ್ಷರು:—ಈ ರೀತಿಯ ಉದ್ಗಾರಗಳು ಸಭ್ಯ ಮುಂಬಯಿಯವರಿಗೆ ಹೇಳಿಸಿದುದಲ್ಲ. ನಮ್ಮ ವೈರಿಗಳ ಮಾತನ್ನು ನಾವು ಕೇಳಬೇಕು

ಸಾಧು:— ಮುಖ್ಯವಾಗಿ ಅವರವರು ತಮ್ಮ ತಮ್ಮ

ಧರ್ಮಗಳಂತೆ ಆಚರಿಸಲಿ; ಪ್ರತಿಯೊಬ್ಬನಿಗೂ ವ್ಯಕ್ತಿ ಸ್ವಾತಂತ್ರ್ಯವಿರಲಿ. ಆದರೆ ಆ ವ್ಯಕ್ತಿಸ್ವಾತಂತ್ರ್ಯವು ಬೇರೆಯವರ ಸ್ವಾತಂತ್ರ್ಯಕ್ಕೆ ಭಂಗತರಬಾರದು.

ಸಭಿಕ:— ಗೋವಧೆ, ಮಜೀದಿಯ ಮುಂದೆ ವಾದ್ಯಬಾರಿಸುವ ಪ್ರಸಂಗಗಳಲ್ಲಿ ಇದು ಹೇಗಾದೀತು? ನಿಮ್ಮದು ಪುರಾಣದ ಬದನೇಕಾಯಿ.

ಸಾಧು:— ಇವೆಲ್ಲ ಧರ್ಮದ ಮೂಲತತ್ವಗಳಲ್ಲ. ಯವನ ಧರ್ಮವು ಗೋವಧೆ ಬೇಕೆಂದೇ ಹಟಹಿಡಿಯುವುದಿಲ್ಲ.

ಕೂಲಿಕಾರ ಮುಖಂಡ:— ಅದು ಸಾಯಲಿ, ಜಾತಿ ಮತಗಳಿಗಿಂತ ಮೊದಲು ಹೆಚ್ಚಿನ ಪ್ರಶ್ನೆ— ಶ್ರಮಗಾರರಿಗೂ ಶ್ರೀಮಂತರಿಗೂ ಮೇಳವಾಗುವುದೆಂದು?

ಸಾಧು:— ದುಡ್ಡಿಗಾಗಿ ಓಡಾಡುವುದು ತಪ್ಪು. ಶ್ರೀಮಂತರು ತಾವಾಗಿ ತಮ್ಮ ಐಶ್ವರ್ಯವನ್ನು ಬಡವರ ಸುಖಕ್ಕಾಗಿ ವಿನಿಯೋಗಿಸಬೇಕು. ಹಿಂದಿನ ಕಾಲದ ವೈಶ್ಯರು ಹಾಗೆ ಮಾಡುತ್ತಿದ್ದರು.

ಪೋಲೀಸು:— (ಆ) ಇದು ಪಾಲಿಟಕ್ಸ್. ಬಾಲ್ಶೆವಿಸಮ್.

ಕೂಲಿಕಾರರು:— ಶ್ರೀಮಂತರು ತಾವಾಗಿ ಕೊಡದಿದ್ದರೆ—

ಸಾಧು:— ಜುಲುಮೆಯಿಂದ ಕೀಳುವುದು ಹಿತಕಾರಿಯಲ್ಲ.

ಕೂಲಿಕಾರರು:— ಶೇಮ್! ಶೇಮ್! ಶ್ರೀಮಂತರ

ದಾಸ! ಸರಿ, ಅಲ್ಲಿಗೆ ಕೂಲಿಕಾರರು ಬೇಸರಗೊಂಡು ಹೊರಟುಹೋಗಲಾರಂಭಿಸಿದರು ಮುಂದಿನ ಮಾತು ಗಳನ್ನು ಕೇಳುವ ತಾಳ್ಮೆ ಅವರಿಗಿರಲಿಲ್ಲ. ಅವರು ಏಳಲು ಸಭೆಯು ಅಸ್ತವ್ಯಸ್ತವಾಗಿ, ಎಲ್ಲರೂ ಎದ್ದರು. ತಿರುಗಿ ಅವರನ್ನು ಕುಳ್ಳಿರಿಸಬೇಕೆಂಬುವ ಅಧ್ಯಕ್ಷರ ಯತ್ನವು ಸಫಲವಾಗಲಿಲ್ಲ. ಸರಿ, ಸಭೆಯ ವಿಸರ್ಜನೆ ಯನ್ನು ಯಾರೂ ಮಾಡದೆ ತನ್ನಂತೆಯೇ ಆಯಿತು. ಗೋಡಬೋಳೆಯು ಹತಾಶನಾದನು. ಧಾರ್ಮಿಕ ಮಂಡಳದವರ ಕೆಲಸ ಆ ದಿನವೇ ಸಮಾಪ್ತಿಗೊಂಡಿತು.

ಇಲ್ಲಿಗೆ ಧಾರ್ಮಿಕ ಪ್ರಕರಣವು ಸಂಪೂರ್ಣವು.

---

## ಪ್ರಕರಣ ೧೭.

## ಅನ್ನಪಾನ ವಿಭಾಗ.

ಅದೀಗ ನಮ್ಮ ಆರೋಗ್ಯ ಸಮಿತಿಯ ಕಾರ್ಯ ಕ್ರಮಗಳನ್ನು ಪರಿಶೀಲಿಸುವ. ಅದರ ಸದಸ್ಯರು ಅಗ್ನಿ ವಾಯುಗಳೆಂದೂ, ಅಧ್ಯಕ್ಷನು ವರುಣನೆಂದೂ ಮರವೆ ಯಾಗಿಲ್ಲವಷ್ಟೆ. ಅವರ ಪರೀಕ್ಷೆಯೂ ಸಹ ಸಂತರ್ಪಣೆ ನಗರದಲ್ಲೇ ತೊಡಗಿತ್ತು. ಆದರೂ ಅವರು ಅಲ್ಲಲ್ಲಿ ಸುತ್ತದೆ ನಿರ್ವಾಹವಿಲ್ಲ ಅವರೂ ಒಬ್ಬ ಚತುರ್ಮುಖಿ ಯೊಡನೆ ಸಂಚರಿಸತೊಡಗಿದರು. ಹೋದ ಹೋದೂ ರುಗಳ ಅನ್ನ, ಪಾನ, ಉಡುಗೆ, ನಡಿಗೆಗಳನ್ನು ಪರಿಶೀಲಿ ಸುವುದು, ಟೀಕೆಟಿಪ್ಪಣಿಗಳನ್ನು ಬರೆಯುವುದು, ಇದೇ ಅವರ ಕೆಲಸವಾಗಿತ್ತು.

ಸಂತರ್ಪಣೆಯ ಕಾಲದಲ್ಲಿ ದಕ್ಷಿಣ ಹಿಂದುಸ್ಥಾನದ "ಬೇಷಾದ" ಊಟಗಳ ಸವಿಯು ಅವರಿಗೆ ಸಿಕ್ಕಿತು. ಕೆಲವನ್ನು ತಯಾರಿಸುವಾಗ ಅಡುಗೆಮನೆಯಲ್ಲಿ ಕಾದು ಕುಳಿತರು ಏನೇನು ಹಾಕುತ್ತಾರೆ, ಹೇಗೇಗೆ ಸಿದ್ಧಮಾಡುತ್ತಾರೆ–ಎಂದು ನೋಡಲು ಪ್ರಾಯಶಃ ದೇವಲೋಕದಲ್ಲಿ ಅದನ್ನು ರೂಢಿಗೆ ತರುವುದಕ್ಕಿರಬೇಕು

ಮಾನವರ ನವಸಿದ್ಧಾಂತದಂತ ಆಹಾರಗಳಿಗೆ ಆರೋಗ್ಯವು ಪರೀಕ್ಷೆಯಲ್ಲ. ನಾಲಗೆ, ಕಣ್ಣುಗಳು ನ್ಯಾಯಾಧಿಕಾರಿಗಳು ಚಾಮುಂಡಿ ಊಟವಂದರೆ ಒಬ್ಬೊಬ್ಬನಿಗೆ ಸರಾಸರಿ $\frac{1}{2}$ ಸೇರು ಅನ್ನ, $\frac{1}{4}$ ಸೇರು ಮೆಣಸು ಮೊದಲಾದ ಸಾಂಬಾರು, $2\frac{1}{4}$ ಸೇರು ತರಕಾರಿ, $\frac{1}{8}$ ಸೇರು ಬೇಳೆ. ಅಂತ್ಯದಲ್ಲಿ 3 ರಾತ್ಲು ತೂಕ ರಸಾಯನ. ಉಳಿದ ತೂಕ ಭರತಿ ಮಾಡುವಷ್ಟು ಮೋಹನಲಾಡು, ಹೋಳಿಗೆ–ಇತ್ಯಾದಿ. ಇವು ಸಂಖ್ಯೆಯಲ್ಲಿ ೧೧ರಿಂದ–೨೦ರ ವರೆಗೂ ಹೋಗಬಹುದು. ಇದು ವಿಶೇಷಾಂಕದ ವಿಚಾರ ಸಾಮಾನ್ಯಾಂಕಗಳು ಅಂದರೆ ನಿತ್ಯದೂಟದಲ್ಲಿ, ಶ್ರೀಮಂತರಲ್ಲಿ–ಅಜ್ಜಬಳೇ ಸಾರತೆಗೆದ ಅಕ್ಕಿಯ ಅನ್ನ, ಪಲ್ಲೆ, ಬಾರದಸಾರು, ಮಜ್ಜಿಗೆ–ತಿನ್ನುವರು. 'ಯಾರ'ವೇನೆಂದು ನಮ್ಮ ವರುಣಪ್ಪನ ಅನುಭವವನ್ನು ಹೇಳುವೆವು. ಮೊದಲಿನ ದಿನ ಸಂತರ್ಪಣೆ ನಗರದಲ್ಲಿ ಊಟಕ್ಕೆ ಕುಳಿತನು ಹಾಸಿಗೆಯಂಥ ಎಲೆ ಬಡಸಿದ್ದರು. ಅದರ ಮೇಲೆ ಘನ, ದ್ರವ, ತಿಂಡಿಪದಾರ್ಥಗಳನ್ನು ಬಡಿಸಿದರು ವರುಣನಷ್ಟೆ ದ್ರವ

ಪ್ರೇಮಿ. ಅದಕ್ಕಾಗಿ ಸಾರನ್ನು ಕುಡಿಯುವ ಮನಸ್ಸು ಮಾಡಿದನು. ಆತುರದಿಂದ ಒಂದು ಔನ್ಸು ಕುಡಿದಿದ್ದನೋ ಇಲ್ಲವೋ, ಕಣ್ಣುಮೂಗುಗಳಿಂದ ಕುಡಿದ ಸಾರೆಲ್ಲಾ ಕೆಳಗಿಳಿಯಿತು. ಅರ್ಧತಾಸಿನ ತನಕ ಕೇಕರಿಸುತ್ತ ಕುಳಿತನು. ಕೊನೆಗೆ ಆಯಾಸವಾಗಿ ಅಲ್ಲಿ ಸಿಪ್ಪೆಯು ಬಂದಿತು ಮುಂದೆ ಇದಕ್ಕಾ ಮೀರಿದ ಉದಾತ್ತ ಔಷಧಗಳನ್ನು ಅವನು ತೆಲುಗರ ರಾಜ್ಯದಲ್ಲಿ ಕಂಡನು ಅವರ ಆಹಾರದ ವಿಭಾಗವು ಹೀಗಿದೆ. ಅನ್ನ ಸೇರು 1 ಃ $\frac{3}{4}$ ಸೇರು ಮೆಣಸು ಃ $\frac{1}{3}$ ಸೇರು ಹುಣಸೆ ಕಾಯಿ. ದಕ್ಷಿಣದವರ ಇನ್ನೊಂದು ಪ್ರೀತಿಯ ಆಹಾರದ ವಸ್ತುವೆಂದರೆ ಈ ಕೊನೆಯವಸ್ತು. ಇದು ಅವರ ಆಹಾರದ $\frac{1}{4}$ ಅಂಶವಾದರೂ ಇರಬೇಕು ಇದಕ್ಕುಪಯೋಗಿಸುವುದು ಹುಣಸೆಕಾಯಿ. 'ಕಾಯಿ'— ಹೀಗೆಂದರೆ ನಮ್ಮ ಮಲಬಾರ ನಾಡಿನವರಿಗೆ ಸಿಟ್ಟು ಬರಬಹುದು. ಅವರು ಮಜ್ಜಿಗೆ ಎಂಬುದೊಂದು ವಿಶೇಷ ವಸ್ತುವನ್ನು ತಯಾರಿಸುವರು. 'ಮಜ್ಜಿಗೆ'ಯು ತನ್ನಷ್ಟಕ್ಕೆ ವಿಶೇಷ ವಸ್ತುವಲ್ಲ ಅದರ ತಯಾರಿಯ ಕ್ರಮವು ವಿಶೇಷವಿದೆ. ಹಾಲನ್ನು ಕಾಯಿಸಿ, ತಣಿಸಿ, ಹೆಪ್ಪುಹಾಕಿ, ೧೨ ತಾಸಿರಿಸಿ ಹೊರತೆಗೆದರೆ ಸಾಮಾನ್ಯರ ಮಜ್ಜಿಗೆ. ಆದರೆ ಅದು ಮಲಬಾರವರ ವಿಶೇಷರೀತಿಯಲ್ಲಿ ಅವರು ಹೆಪ್ಪುಹಾಕಿ ಒಂದು ಗಡಿಗೆಯಲ್ಲಿ ಹಾಕಿ ಬಾಯಿ ಮುಚ್ಚಿ, ಶುಭಮುಹೂರ್ತದಲ್ಲಿ ಅದನ್ನು ಭೂಗರ್ಭದಲ್ಲಿ ಹೂತಿಡುವರು. ಯಾವ ಮುಹೂರ್ತದಲ್ಲಿಂ

ಸಿತೋ! ಆ ಗಳಿಗೆಯು ಸರಿ ಮೂರು ವರುಷ, ಮೂರು ತಿಂಗಳು, ಮೂರು ದಿನ, ಮೂರು ಗಳಿಗೆ, ಮೂರು ವಿಘಳಿಗೆಯು ಬಳಿಕ—ಅದನ್ನು ಹೊರತೆಗೆದರೆ ಆಗ ಅದು ಉಪಯೋಗಕ್ಕೆ ಸಿದ್ಧವಾಯಿತು. ಅದನ್ನು ಬಡಿಸುವ ವಿಧಾನವೂ ತೀರಾ ನಾಜೂಕಿದೆ. ದೊಡ್ಡದೊಂದು ನೀರಿನ ಕೊಳಗಕ್ಕೆ ಒಂದೆರಡು ಔನ್ಸು ಈ ಮಜ್ಜಿಗೆಯ ಸಾರವನ್ನು ಸೇರಿಸಿ ಆ ಮಿಶ್ರಣವನ್ನು ಎಳೆಯ ಮೇಲೆ ೧—೬ವರುಷದವರಿಗೆ ಒಂದು ಬೊಟ್ಟನಂತೆ, ೬—೧೬ಕ್ಕೆ ಎರಡು ಬೊಟ್ಟನಂತೆ, ೧೭-೨೫ಕ್ಕೆ ಮೂರು ಬೊಟ್ಟನಂತೆ, ೨೬ರ ಮೇಲೆ ನಾಲ್ಕು ಬೊಟ್ಟನಂತೆ ಬಡಿಸಿದರಾಯಿತು. ಅದನ್ನು ತಿನ್ನುವಾಗಲೂ ಬಡಿಸುವಾಗಲೂ ಮೂಗಿನ ಸೊಳ್ಳೆಯನ್ನು ಚೆನ್ನಾಗಿ ಹಿಡಿದುಕೊಳ್ಳಬೇಕು. ಈ ಎಚ್ಚರವನ್ನು ಮರೆತ ಎಷ್ಟೋ ಮಂದಿ ಮೂರ್ಛೆಹೋದುದು ಉಂಟು. ಉತ್ತರ ಹಿಂದುಸ್ಥಾನದವರು ಈ ಖಾರಹುಳಿಗಳ ಸೇಡನ್ನು ಸಕ್ಕರೆಯಿಂದ ತೀರಿಸಿಕೊಳ್ಳುವರು. ಅವರ ಆಹಾರದಲ್ಲಿ ೧ ಸೇರು ಹಿಟ್ಟು: ೪ಸೇರು ಸಕ್ಕರೆ: ೨ಸೇರು ತುಪ್ಪ—ಕನಿಷ್ಟಪಕ್ಷಕ್ಕೆ ಬೇಕು. ಇನ್ನು ಹಿಂದುಸ್ಥಾನದಲ್ಲಿ ಸೇಕಡಾದಲ್ಲಿ ೧॥ ಹಾಲು ಮೊಸರನ್ನು ನಿತ್ಯ ಉಣ್ಣುವ ಧಾರಾಳಿಗಳು ಉಳಿದವರು, ಗಂಗಾಜಲ. ಇದು ಜನರ ನಿತ್ಯ ಊಟ. ಮೇಲಿನದು ಸಸ್ಯಾಹಾರದ ಖಾತೆ.

ಮಾಂಸಾಹಾರದ ಖಾತೆ ಬೇರೆ ಇದೆ. ಸಮುದ್ರ ತೀರದವರು ಹೆಚ್ಚಾಗಿ ೧ ಅನ್ನ; ೪ ಮೆಣಸು; ೭ ಮೀನು;

ಕರಾವಳಿಯಲ್ಲಿ ಹಸಿಮೀನು. ಕರಾವಳಿ, ನದೀತೀರದ ವರು ಬಿಟ್ಟರೆ ಒಣಮೀನು. ಇವೆರಡೂ ಸಿಗದಿದ್ದವರಿಗೆ ವಿದೇಶದಿಂದ ಬರುವ 'ಡಬ್ಬಾ ಮೀನುಗಳು' ಇವೆ. ೭೦, ೮೦ ವರುಷಗಳ ಮೇಲೂ ಇವು ಹಾಗೇ ಸ್ವಚ್ಛ ವಾಗಿ ಉಳಿಯುತ್ತವಂತೆ! ಬಡವರು ನಿತ್ಯ ಮೀನು ತಿಂದರೆ ಶ್ರೀಮಂತರು ಯಾವಾಗಲೂ ತಿನ್ನರು. ಕುರಿ, ಕೋಳಿ, ಹಂದಿ, ದನಗಳ ಮಾಂಸವು ಅವರಿಗೆ ಮೂ ರನೆ ವಸ್ತುವಿಗೆ ದಕ್ಷಿಣ ಹಿಂದುಸ್ಥಾನದ ಕರಾವಳಿಗಳಲ್ಲಿ ಗಿರಾಕಿ ಅಧಿಕ.

ಪಾನೀಯಗಳ ವಿಚಾರ ಹೇಳುವೆವು ಇತ್ತೀಚೆಗೆ ಸಾರ್ವಜನಿಕರು, ನೀರಲ್ಲಿ ರೋಗಾಣುಗಳಿರುವುವೆಂಬ ವಿಚಾರ ತಿಳಿದುಕೊಂಡು, ಆರೋಗ್ಯದ ಸಲುವಾಗಿ ಅಹರ ಪಾನವು ಚೆನ್ನಾಗಲಾರದೆಂದು— ಅದರ ಉಪ ಯೋಗವನ್ನೇ ರದ್ದುಮಾಡಿರುವರು. ಬಾಯಾರಿಕೆ ಆದಾಗ ಎಂಬ ನಿಯಮವನ್ನು ಬಿಟ್ಟು- ನಿತ್ಯ ಬೆಳಗ್ಗೆ ೬ ಘಂಟೆಗೆ, ೧೦ ಘಂಟೆಗೆ, ೨ ಘಂಟೆಗೆ, ೬ ಘಂಟೆಗೆ— ಹೀಗೆ ಕನಿಷ್ಠಾವೃತ್ತಿ ನಾಲ್ಕು ಸಾರಿ, (ಜಾಸ್ತಿ ಶರೀರ ಶ್ರಮಪಡುವವರು ಇನ್ನೂ ಹೆಚ್ಚಾಗಿ—) ಕಾಫಿ, ಟೀ ಯನ್ನು ಸ್ವೀಕರಿಸುವರು. ಇದರ ಮಹತ್ವವನ್ನು ಪ್ರತಿ ಹಳ್ಳಿಗಳ ಗೋಡೆಯ ಮೇಲೂ ಅಂಟಿಸಿರುವ ನೋಟೀ ಸುಗಳಿಂದ ಸಮಿತಿಯವರು ತಿಳಿದುಕೊಂಡರು ಅದು 'ಜ್ವರಹಾರಿ, ಜೀರ್ಣಕಾರಿ, ಉತ್ಸಾಹಕಾರಿ, ಶ್ರಮಪರಿ ಹಾರಿ.'— ಇನ್ನೂ ಎಷ್ಟೋ ಕಾರಿಗಳಿವೆ. ನೇರಿಸಲಿಲ್ಲ

ಅಷ್ಟೆ. ಇದನ್ನು ತಯಾರಿಸುವ ವಿಧಾನವನ್ನು ಸವಿ ತಿಯುವರು "ದಿ ಆೃಡಿಯಲ್ ಹೆಲ್ತ್ ರೆಸ್ಟೋರೆಂಟ್"ನಲ್ಲಿ ಕಂಡುಹಿಡಿದರು. ಈ ರೆಸ್ಟೋರೆಂಟನವರು ಎಷ್ಟರ ಮಟ್ಟಿಗೆ ಆದರ್ಶ (Ideal) ಆರೋಗ್ಯ ಇರಿಸಿರುವರೆಂದು ಅವರ ತೂಕದಿಂದ ತಿಳಿಯುವುದು. ಅವರಲ್ಲಿ ೧೬-೧೮ ವರುಷದವರ ತೂಕ ೭೦ ರಾತ್ತಿಗೆ ಮೀರುವುದಿಲ್ಲ. ಅದರ ಮೇಲಿನವರು ೮೦ಕ್ಕೆ ಮೀರಬಾರದಂತೆ. ಚಟು ವಟಿಕೆಯಿರಲು ಲಘುತ್ವ ಬೇಕಷ್ಟೆ. ಇರಲಿ, ವಿಷಯ ಕ್ಕೆ ಬರುವ. ಕಾಫಿ, ಟೀ ತಯಾರಿಸುವ ವಿಧಾನ:—

೧ ಕಪ್ ನೀರು; ೧ ಔನ್ಸ್ ಟೀ – ಇಲ್ಲವೆ ಕಾಫಿ ಪುಡಿ; ೭೦ ಗ್ರೈನ್ ಸಕ್ಕರೆ; $\frac{1}{16}$ ಔನ್ಸ್ ಹಾಲು.

ಮುಖ್ಯವಾಗಿ ಮಾಡುವ ಕ್ರಮದಲ್ಲಿ ಎಚ್ಚರಿಕೆ ಬೇಕು. ಕುದಿಕುದಿ ಬಿಸಿನೀರಿಗೆ ಹುಡಿಹಾಕಿ, ಹುಡಿಯು ಬಣ್ಣದ ಬಟ್ಟೆಯಿಂದ ಗಾಳಿಸಬೇಕು. ಆ ಮೇಲೆ ಸಕ್ಕರೆ ಮತ್ತು ಹಾಲು ಅವಶ್ಯಬಿದ್ದಲ್ಲಿ ಮೇಲಿನ ತೂಕಕ್ಕೆ ಮೀರದಂತೆ ಹಾಕಬೇಕು ಕಾಫಿ, ಟೀಗಳಿಗೆ ನೀರಿ ರಿಸುವ ಪಾತ್ರೆಯನ್ನು ಒಲೆಯಿಂದ ಎಂದೂ ಇಳಿಸಬಾ ರದು. ಎಷ್ಟು ಕಾಲ ಅದು ಒಲೆಯಮೇಲೆಯೇ ಇರು ವುದೋ ಅಷ್ಟು ಒಳಿತು ಇನ್ನು ಹಾಗೆ, ಬಡಿಸುವ ಲೋ ಟಗಳಿಗೆ, ಕಾಫಿ, ಟೀ, ಕಿಟ್ಟವು ಅಂಟಿ ಅಂಟ ಅವು ಅದೇ ವರ್ಣಕ್ಕೆ ಬಂದಿರಬೇಕು ಹೀಗೆ ಮಾಡುವುದ ರಿಂದ ಲೋಹದ ಕೆಮಕು ದ್ರಾವಕಕ್ಕೆ ಅಂಟದು ಈ ರೀತಿ ತಯಾರಿಸಿ ಬಡಿಸಿದ ಕಾಫಿರಸಾಯನಕ್ಕೆ

"ರಿವ್ಲ್ಯಾನ್" — ಎಂದು ಹೆಸರು. ಇದಲ್ಲದೆ ಸ್ನ್ಯಾಂಗು, ಎಕ್ಸ್ಪ್ರಸ್ಸ್ಯಾಂಗು, ಕಾಫಿ ಟೀ ಮಿಕ್ಸ— ಮೊದಲಾದ ತರ ಗತಿಗಳಿವೆ. ಕಾಫಿ, ಟೀಹುಡಿಯು ನೀರಲ್ಲಿರುವ ರೋಗಾಣುಗಳನ್ನು ನಾಶಮಾಡುವುದರಿಂದ, ಅದರ ಸೇವನೆಯು ಹಾನಿಕರವಲ್ಲ. ನಿತ್ಯ ಸೇವನೆಯಿಂದ ಹಸಿವು ಹಿಂಗುವುದು

ಇದಕ್ಕೂ ಶ್ರೇಷ್ಠತರದ ಪಾನೀಯಗಳನ್ನು ಕುರಿತು ಮುಂದೆ ಹೇಳುವೆವು

ಈಗ ಒಂದೆರಡು ಮಾತುಗಳು - ಈ ಆರೋಗ್ಯ ಸಂಸ್ಥೆಗಳ ವಿಚಾರ. ಎಂಥ ಚಿಕ್ಕ ಹಳ್ಳಿಯಲ್ಲಿಯೂ ಇವುಗಳನ್ನು ಹುಡುಕಬೇಕಂತಿಲ್ಲ ಪ್ರತಿ ಎರಡು ಮನೆಗಳಿಗೊಂದರಂತೆ ಇವುಗಳು ಇದ್ದೇ ಇರುವುವು. ಹೆಚ್ಚಿನವುಗಳಿಗೆ "ಶ್ರೀಕೃಷ್ಣ ವಿಲಾಸ ಕಾಫಿ ಕ್ಲಬ್", "ಮನೋಹರ ಉಪಾಹಾರಗೃಹ," "ವೀರಶೈವರ ಫಲಾಹಾರ ದಂಗಡಿ," "ದಿ ಟ್ರಿಡಿಷನಲ್ ರೆಸ್ಟೋರೆಂಟ್" — ಹೀಗೇನಾದರೊಂದು ಬಿರುದಾವಳಿಯ ಪಟ್ಟಿ ಅವುಗಳ ಮುಂದೆ ಅಲ್ಲಿ ತೂಗುತ್ತದೆ ಇದಿಲ್ಲದಿದ್ದರೆ— ಬೆಳಗ್ಗೆ ೫ ಘಂಟೆಯಿಂದ ಹಿಡಿದು ಸಂಜೆ ೧೦ರ ವರೆಗೂ ಚಿಕ್ಕ ಮಕ್ಕಳು ಸಹ ಯಾವಲ್ಲಿಗೆ ತಂಡತಂಡವಾಗಿ ಹೋಗುವರೋ— ಅದೇ ಆರೋಗ್ಯಮಂದಿರವೆಂದು ತಿಳಿಯಿರಿ. ಇನ್ನು ಸ್ಯಾನುಬೋರ್ಡು ಇರುವುದಿಲ್ಲ, ಕಾಲವು ಅಕಾಲ, ದೇಶವು ವಿದೇಶ— ಇಂಥ ಸಮಯದಲ್ಲಿಯೂ ಅವುಗಳ ಠಾಣೆ ತಿಳಿಯುವುದು ಕಷ್ಟವಲ್ಲ. ಬೀದಿಯಲ್ಲಿ

ಸಂಚರಿಸುತ್ತಿರುವಾಗ, ಎಲ್ಲ ರಸ್ತೆಯಬಳಿ ರಾಶಿರಾಶಿ ಯಾಗಿ ಕಾಫಿ, ಟೀ ತಿಂಡಿಯು ಬಿದ್ದಿರುವುದನ್ನು ಕಾಣು ವಿರೋ, ಅದರ ಮುಂದಿರುವುದೇ ಆ ಸ್ಥಳ. ಈ ಮಂ ದಿರಗಳಿಂದ ಸಮಾಜಕ್ಕಿದ್ದ ಪ್ರಯೋಜನಗಳು ಅಷ್ಟಿಷ್ಟಲ್ಲ. ಮನೆಯ ಹೆಂಗುಸರಿಗೆ ಅಡುಗೆಯ ಕೆಲಸದ ಭಾರ ಎಷ್ಟೋ ಕಡಿಮೆಯಾಯಿತು ಇದರಿಂದ ಹಲವು ಗಂಡುಸರಿಗೆ ಬೆಳಗ್ಗೆ ೫ ಘಂಟೆಗೇ ಏಳುವ ಅಭ್ಯಾಸವು ಬಂದಿತು. ಇನ್ನು ಮಕ್ಕಳನ್ನೂ ಅದೇ ಸಮಯದಲ್ಲಿ ಎಚ್ಚರಿಸಿ ಅಲ್ಲಿಗೆ ಒಯ್ಯುವರು ಬರುವಾಗ ಮನೆಹೆಂ ಗುಸರಿಗೂ ಇಷ್ಟು 'ಕಾಫಿ, ಚಾ' ತರುವರು ಈ ಉಪಾಹಾರಗಳ ದೆಸೆಯಿಂದ ಆಹಾರದ ಪರಿಮಾಣ ಬಲುಕಡಿಮೆಯಾಯಿತು ಅಷ್ಟೇ ಅಲ್ಲ, ಪ್ರತಿ ತಿಂಗಳ ಮೊದಲನೆ ದಿನವೇ ನಿಮಗೆ ನಿಮ್ಮ ಆಫೀಸಿನಲ್ಲಿ ಭೇಟಿ ಯಾಗುವ ಹೋಟೇಲ ಮೆನೇಜರನ ದೆಸೆಯಿಂದ ನಿಮ್ಮ ಕಿಸೆಯ ಭಾರವು ಅರ್ಧಕ್ಕರ್ಧ ಕಡಿಮೆಯಾಗುವುದು.

ಮಂಗಳೂರಲ್ಲೊಂದು ದಿನ ನಡು ನಡು ಮಧ್ಯಾ ಹ್ನದಲ್ಲಿ ಸಮಿತಿಯವರು ಸಂಚರಿಸುತ್ತಿದ್ದರು. ತಿರುಗಿ ತಿರುಗಿ ಬೇಸತ್ತು ರಥಬೀದಿಗೆ ಬಂದರು. ಹಸಿವು ಉಕ್ಕೇರಿತ್ತು. ಇನ್ನು ತಮ್ಮ ನಿವಾಸದವರೆಗೆ ಹೋಗು ವುದಕ್ಕೂ ಅದರ ತಾಪ ಬಿಡಲಿಲ್ಲ. ಇನ್ನೇನು ಮಾಡ ಲೆಂದು, ಬೀದಿಯಲ್ಲಿ ನ್ಯಾಸು ಬೋರ್ಡು ಕಾಣುತ್ತ ತಿರುಗಿದರು ಬೀದಿಯ ಬಳಿ ಮುನ್ಸಿಪಲ್ ಚರಂಡಿಯ ಸುವಾಸನೆಯನ್ನು ಕಂಡೇ ಆರೋಗ್ಯಮಂದಿರವು ಸಮಿ

ಪಿಸಿತೆಂದು ಅವರಿಗೆ ತಿಳಿಯಿತು. ಒಂದು ಸ್ಟ್ಯಾನು ಬೋರ್ಡಿಗೆ ಮೋರೆ ಮಾಡಿ ಒಳನುಗ್ಗಿದರು ಜನ ಸಂದಣಿಯುಲ್ಲಿ ಎಡೆ ಸಿಗಬೇಕೇ! ಒಳಹೋದರೆ ಅಲ್ಲೂ ಕುಳಿತಿರಲು ಎಡೆಯಿಲ್ಲ. ನಿಂತೇ ಸುಧಾರಿಸುವವ ರೆಷ್ಟು ಮಂದಿ ಬೇಕು. ನಡು ಮಧ್ಯಾಹ್ನದಲ್ಲಿ ಇಷ್ಟು ಜನ ಏಕೆ ತುಂಬಿದೆಯೆಂದು ಯೋಚಿಸುವಾಗ ಯಾರೋ ಒಬ್ಬರು - ಏನು ಸ್ವಾಮಿ ಭಟ್ಟರೆ, ಏಕಾದಶಿ ಫಲಾ ಹಾರಕ್ಕೆ ಬಂದಿರೇನು?" ಎಂದು ಪ್ರಶ್ನೆಮಾಡಿದರು. ಆ ದಿನ ಏಕಾದಶಿಯಾದುದರಿಂದ ಜನರು ತುಂಬಿದುದು ಎಂದು ತಿಳಿದರು. ವರುಣನು ವಾಯುವಿನೊಡನೆ — "ಏನಪ್ಪ ಏಕಾದಶಿ ನಿರಾಹಾರ ಹೋಗಿ ಫಲಾಹಾರವಾ ಯಿತು. ಇಲ್ಲೀಗ ಅದೂ ಹೋಗಿ ಉಪಾಹಾರವಾಗಿದೆ." ಅದನ್ನಾದರೂ ಹೇಗೆ ಮಾಡುವರೆಂದು ನೋಡೋಣ— ಎಂದು ಆಶ್ರೋತ್ರಿ ಭಟ್ಟರನ್ನು ಆತುರದಿಂದ ಕಾಣತೊ ಡಗಿದರು. ಭಟ್ಟರೂ ನಿಂತಲ್ಲಿಂದಲೇ ಒಂದು ನಾಲ್ಕು ಇಡ್ಲಿ, ಒಂದೆರಡು ತುಪ್ಪದದೋಸೆ, ಮೇಲರ್ಧನೇರು ಹಲವಾ, ಇನ್ನು ಆರೋಗ್ಯರಸಾಯನವೆನಿಸಿದ ಕಾಫಿ ಡಬ್ಬಲ್ ಎರಡು — ಮುಗಿಸಿ ಹಿಂತಿರುಗುವಷ್ಟಕ್ಕೆ ಅವರ ಚಿಕ್ಕ ಮಗನು, ಐದು ವರ್ಷದ ಮರಿ, ತಮ್ಮ ಹಿಂದಿರುವುದನ್ನು ಕಂಡರು ಭಟ್ಟರಿಗೆ ಸಿಟ್ಟುಬಂದು ಎರಡೇಟು ಕೊಟ್ಟರು. ಅದರ ಅಳುವನ್ನು ಶಾಂತಪಡಿ ಸಲು ಒಂದು ಪ್ಲೇಟು 'ಮನೋಹರ ಬಾತ'ನ್ನು ಕೊಡಿಸಿ ಮನೆಗೆ ಕರೆದೊಯ್ದರು.

ನಮ್ಮ ಸಮಿತಿಯವರು ವೇಳೆಕಾದು, ಕಾದು, ಯಾರೋ ಮೂವರು ಕುರ್ಚಿಬಿಟ್ಟದ್ದನ್ನು ಕಂಡು, ಅತಿ ಸಾಹಸದಿಂದ ಉಳಿದವರಿಗಿಂತ ಮೊದಲು ಅಲ್ಲಿ ಸ್ಥಾಪಿತರಾದರು. ಅವರು ಕುಳಿತ ಅರ್ಧ ತಾಸಿನ ಬಳಿಕ ಮೇಜಿನಮೇಲಿನ ಹಳೇಸರಬರಾಯಗಳು ಹೊರಟು ಹೋದುವು. ಒಬ್ಬ ಹುಡುಗನು ಅವುಗಳನ್ನೆತ್ತಿ, ಬಳಿಯಲ್ಲಿರುವ ಒಂದು ಪಾತ್ರೆಯಲ್ಲಿ, ಒಮ್ಮೆ ಮುಣುಗಿಸಿ ಎತ್ತಿ ತಿರುಗಿ ಒಳಗೆ ಕೊಂಡೊಯ್ದನು. ಇವರಿಗೆ ಕುತೂಹಲವಾಗಿ ಅವನುಪಯೋಗಿಸಿದ ಆ ವಿಚಿತ್ರ ಜಲವೇನೆಂದು ತಿಳಿಯಲು ಮುಂದರಿದರು. ಅದರ, ಪರಿಮಳ ಬಣ್ಣಗಳಿಂದ, ಅದನ್ನು ರಾಮೇಶ್ವರದ ಹಲವು ತೀರ್ಥಗಳಲ್ಲಿ ಯಾವುದೋ ಒಂದರಿಂದ ತಂದುದು ಎಂದು ನಿಶ್ಚಯಿಸಿದರು. ಆ ಬಳಿಕ—'ಏನು ಬೇಕು?' ಎಂಬ ದೂತನು ಬಂದನು. ಎಲ್ಲರೂ ಆತುರದಿಂದ 'ಮನೋಹರ ಬಾತ' ಎಂದುದನ್ನು ಕೇಳಿ, ಇವರೂ ಅದನ್ನು ತರ ಹೇಳಿದರು. ಮೇಲೆ ಬಾಯಾರಿಕೆಗೆ 'ಹಾಲು' ಕೇಳಿದರು. ಆ ದಿನ ಹಾಲು ಸಿಗದು ಎಂದುತ್ತರ ಬಂದಿತು. 'ಇವರ' "ಕಾಫಿ ನೋಡೋಣ" ಎಂದು ಕಾಫಿತರಲು ಹೇಳಿದರು. ಸರಿ, ಇನ್ನರ್ಧ ತಾಸಿನಲ್ಲಿ ಸರಬರಾಯಗಳು ಬಂದು ನಿಂತುವು. ಬೇರೆ ಸ್ಥಳವಾಗಿದ್ದರೆ ಇವರು ಅಷ್ಟರಲ್ಲಿ ಹಸಿವಿನಿಂದ ಸಾಯಬೇಕಿತ್ತು. ಆದರೆ ಅಲ್ಲಿನ ವಿಚಿತ್ರ ಸುಗಂಧದ ಪೆನೆಯಿಂದ ಹಸಿವು ಮರೆತು ಹೋಯಿತು. ಈಗಂತು ಫಲಹಾರ ಬಂದಿತಷ್ಟೆ. ಬಕಾಸುರನ ವೇಗ

ದಿಂದ ತಿನ್ನತೊಡಗಿದರು. ಮೇಲೆ ಒಂದಿಷ್ಟು ಕಾಫಿ ಹಾಕಿ, ಕಾಸುಕೊಟ್ಟು ಮನೆಗೆ ಬಂದರು. ಬರುವುದ ರಲ್ಲಿ ತಿಂದುದೆಲ್ಲಾ ಜಠರಂಡಿಗೆ ಸಂದು ತಿರುಗಿ ಮನೆ ಯಡುಗೆಗೆ ಸಿದ್ಧರಾಗಿ ನಿಂತರು. ಇಂಥ ವಿಚಿತ್ರ ಮನೋಹರ ಖಾತನ್ನು ತಯಾರಿಸುವ ರಹಸ್ಯವೇನೆಂದು ತಿಳಿಯುವ ಕುತೂಹಲ ಅವರಿಗೆ ಅಷ್ಟಿಷ್ಟಲ್ಲ. ಆದರೆ ಕಾಫಿ ಕ್ಲಬ್ಬಿನವರು ಇದರ ರಹಸ್ಯ ಹೇಳುವರೇ! ಇದಕ್ಕಾಗಿ ಅವರು ಬಹಳ ಉಪಾಯಮಾಡಿ, ತಾವು ಹೋದ ಕಾಫಿ ಕ್ಲಬ್ಬಿನ ದೂತನೊಬ್ಬನ ಸ್ನೇಹ ಮಾಡಿ ದರು. ಉಂಡ ಮನೆಗೆರಡೆಣಿಸುವ ವಿಚಾರ! ಆದರೆ ಇವರ ಸ್ನೇಹಕ್ಕೆ ಮರುಳಾಗಿ ಅವನು ಹೇಳಬೇಕೆ? "ಸ್ವಾಮಿ, ಇನ್ನೇನು ಬೇಕಾದರೂ ಹೇಳುತ್ತೇನೆ. ಅದೊಂದು ವಿಚಾರ ಕೇಳಬೇಡಿ. ನಮ್ಮ ಹೋಟೇಲಿಗೆ ಜನರು ಬರುವುದೇ ಅದಕ್ಕೆ. ಇನ್ನಾರಿಗೂ ಅದನ್ನು ಮಾಡಲುಬಾರದು. ನಿಮ್ಮ ಆತುರವನ್ನು ಕಂಡರೆ, ನೀವೂ ಹೋಟಲಿಡುವ ಯೋಚನೆಯಲ್ಲಿದ್ದಂತೆ ಕಾಣು ವುದು"—ಎಂದನು. ವಾಯುರಾಯನು ಅವನ್ನುಬ್ಬಿಸಿ ಉಬ್ಬಿಸಿ, ಕೊನೆಗೆ ೫ರೂಪಾಯಿಯ ನೋಟೊಂದನ್ನು ಕೈಮೇಲೆ ಹಾಕಲು ಬಿಗಿಹಿಡಿದ ಬಾಯಿ ತೆರೆಯಿತು. ಕಾಂಚನದಂಥ ರಹಸ್ಯಭೇದಕವು ಇನ್ನೊಂದಿಲ್ಲ.

"ರಾತ್ರಿ ೧೦ಘಂಟೆಯ ಮೇಲೆ ನಮ್ಮಲ್ಲಿ ಗಿರಾಕಿಗ ಳಿಲ್ಲ. ಆಗ ಅಂಗಡಿ ಬಾಗಿಲು ಹಾಕಿ, ತುಪ್ಪ, ಸಕ್ಕರೆ ಗೋಧಿ ನೇರಿಸಿದ ಮ್ಹಾಲುಗಳನ್ನು ಬಿಟ್ಟು ಉಳಿದ ತಿಂಡಿ

ತಿಲಕುಗಳನ್ನೆಲ್ಲಾ ಒಂದು ಕಡಾಯದಲ್ಲಿ ಹಾಕಿ ಪುಡಿ ಮಾಡಿ, ಸ್ವಲ್ಪ ನೀರುಹಾಕಿರಿಸುವೆವು. ಮರುದಿನ ಮುಂಜಾನೆ, ಅದನ್ನು ಚೆನ್ನಾಗಿ ಕುದಿಸಿ, ಸಾಕಷ್ಟು ಉಪ್ಪಿಟ್ಟು, ತಪ್ಪಿ ಉಳಿದರೆ ನಿನ್ನೆ ಮನೋಹರ ಭಾತಿನ ತಿಲಕನ್ನು ಸೇರಿಸಿ, ಚೆನ್ನಾಗಿ ಕಲಸಿಬಿಟ್ಟು ಬೆಳ್ಳುಳ್ಳಿ ಒಗ್ಗರಣೆಯೊಂದು ಹಾಕಿಬಿಟ್ಟರೆ—ತೆಗೆದುಕೊಳ್ಳಿ ನಮ್ಮ ಮನೋಹರಬಾತು!" ಅದರಲ್ಲಿ ಸೇರಿಕೊಂಡ ತಿಂಡಿ, ಉಪತಿಂಡಿಗಳ ಕಾನಿಲರ್ಣಯ ಮಾಡಲು ಬ್ರಹ್ಮನೇ ಬರಬೇಕು . . . . ಎಂಬುದೇ ರಹಸ್ಯ.

ವಾಯು:—ಇದರಿಂದ ನಾತ ಬರುವುದಿಲ್ಲವೇ?

ಹೋಟೇಲಮರಿ:—ಸ್ವಾಮಿ, ಬೆಳ್ಳುಳ್ಳಿ ಒಗ್ಗರಣೆ ಹಾಕುವುದೇ ಅದಕ್ಕೆ.

ಅಗ್ನಿ:-ನಾನು ಏನು ತಿಂದರೂ ಕರಗಿಸಬಲ್ಲವನು. ಅಂಥ ನನಗೆ ನಿನ್ನೆ ಅದನ್ನು ತಿಂದು ವಾಂತಿಯಾಯಿತು.

ಇದನ್ನು ಕೇಳಿದೊಡನೆಯೇ ಹೋಟೇಲಮರಿಗೆ ಸಿಟ್ಟು ಬಂದು—"ಸ್ವಾಮಿ, ನಾಕು ನಿಮ್ಮ ನೊಕ್ಕು ನನ್ನಿಂದ ಗುಟ್ಟನ್ನು ತಿಳಿದು ಪರಿಹಾಸ್ಯ ಮಾಡುವಿರಾ. ನೋಡಿಕೊಳ್ಳಿ, ಎಲ್ಲಾದರೂ ಗುಟ್ಟುರಟ್ಟಾದರೆ ಧರ್ಮ ಸ್ಥಳದ ದೇವರ ಆಣೆಯಿದೆ"—ಹೀಗೆಂದು ಅವರ ಬಾಯಿಗೆ ಬೀಗಮುದ್ರೆಹಾಕಿ ನಡೆದುಬಿಟ್ಟನು.

ನಮ್ಮ ಮಂಡಳದವರು ಅಖಿಲ ಹಿಂದುಸ್ಥಾನದ ಪ್ರವಾಸ ಮಾಡಿದರು. ಅವರಿಗೆ ಈ ಮನೋಹರ ಬಾತಿ ನಂಥ ತಿಂಡಿಸಿಗದಿದ್ದರೂ ಪ್ರಸಿದ್ಧ ಹೋಟೇಲುಗಳಲ್ಲಿ

ಇಂಥ ಒಂದಲ್ಲಒಂದು ಬಗೆಯ 'ಪೇಟೆಂಟ್' ತಿಂಡಿಗಳು ದೊರೆತುವು.

ಮುಖ್ಯವಾಗಿ, ಆರ್ಥಿಕ ಪ್ರಶ್ನೆಯು ಅವರಿಗೆ ಸಂಬಂಧಿಸಿದ್ದಲ್ಲದಿದ್ದರೂ, ಅವರಿಗನಿಸಿದ್ದೇನಂದರೆ— ಶ್ರೀಮಂತನಾಗಬೇಕಾದರೆ ಮನೋಹರ ಬಾತಿನಂಥ ತಿಂಡಿಯನ್ನು ತಯಾರಿಸುವ ಒಂದು ಹೋಟೇಲನ್ನಿಡ ಬೇಕೆಂದು.

ಇಷ್ಟರವರೆಗೆ ಹೇಳಿದುದು ಅನಾಗರಿಕ ಸ್ವದೇಶೀಯ ರ ಅನ್ನಪಾನಗಳವಿಚಾರ. ನಾಗರಿಕರು, ಅಂದರೆ ಸ್ವಲ್ಪ ವಿದ್ಯಾಭ್ಯಾಸದಿಂದ ಸುಧಾರಿಸಿದವರು ಈ ದೇಶೀ ತಿಂಡಿ ಗಳನ್ನು ತಿನ್ನುವುದಿಲ್ಲ. ಅವರ ಪಾನೀಯಗಳು ಇಲ್ಲಿನ ಕಾಫಿ, ಟೀಗಳಾದರೂ, ಅನ್ನವು ವಿಲಾಯತಿಯಿಂದಲೇ ಬರಬೇಕು. ಹೊಳಪಿನ ಡಬ್ಬಿಗಳಿಂದ ಅವುಗಳನ್ನು ಹೊರತೆಗೆದರೇನೇ ಅವಕ್ಕೆ ಬೆಲೆ. ಮಗುವು ಹುಟ್ಟಿ ತೆಂದರೆ ತೂಡಗಿದುವು. ದಬ್ಬಿ ತಿಂಡಿಗಳು, ಡಾಫಿ, ಟಾಫಿ, ಜಾಫಿ, ಪೆಪ್ಪರ್‌ಮಿಂಟ್, ಚಾಕ್ಲೇಟ್, ಜೇಮ್ ಬಿಸ್ಕಿಟ್ . . . . ಇತ್ಯಾದಿ ಇತ್ಯಾದಿ. ಇವುಗಳನ್ನು ತಿನ್ನುವುದರಿಂದ ಅನಾರೋಗ್ಯವಿಲ್ಲವೆಂದು ಎಷ್ಟೆಷ್ಟೋ ಜಾಹಿರಾತುಗಳೇ ಹೇಳುತ್ತವೆ. ಸಾಲದಿದ್ದರೆ — ಡಾ। ಬ್ರೇಕ್, ಡಾ। ಡೇನಿಯಲ್, ಡಾ। ಜೇಮ್ಸರಂಥವರ ಪ್ರಶಂಸಾಪತ್ರಗಳಿವೆ. "ಚಾದಂಥ ಆರೋಗ್ಯಕಾರಿ ಪಾನೀಯವಿಲ್ಲ"ವೆಂದು ಪ್ರಶಂಸಾಪತ್ರವನ್ನು ಕೊಟ್ಟವರೇ ನಮ್ಮ ಡಾ। ಬ್ರೇಕ್‌ರವರು. ಆದಕ್ಕಾಗಿಯೇ ಅವರು

ತಮ್ಮ ಈ ಮುಪ್ಪಿನ ದಿನಗಳಲ್ಲಿ ನೀಲಗಿರಿಯಲ್ಲಿ ಸ್ವತಃ ಚಾತುರ್ಮಾಸ್ಯವನ್ನಿರಿಸಿರುವರು ಹೆಚ್ಚೇನು, ವಿಲಾಯತಿಯಿಂದ ಬರುವ ಪ್ರತಿಯೊಂದು ಆಹಾರಕ್ಕೂ ಡಾ। ಸರ್ಟಿಫಿಕೇಟುಗಳಿರುವುದರಿಂದ, ಅದನ್ನು ಎಂಥ ರೋಗಿಯೂ ತಿನ್ನಬಹುದು.

ತಿನ್ನುವುದು—ಎನ್ನುವಾಗ ಇನ್ನೊಂದರ ನೆನಪು ಬಂದಿತು. ಅದು ಮಲಬಾರು ತೀರದವರ ಉಪ್ಪೋಪ ತಿಂಡಿ—ತಾಂಬೂಲ. ಬರೇ ತಾಂಬೂಲವು ಅನಾದಿಯಿಂದಿತ್ತು. ಆದರೆ ಅದಕ್ಕೆ ಮುಕುಟಪ್ರಾಯವಾಗಿರುವ 'ಹೊಗೆಸೊಪ್ಪು'—ಇವರ ನವೀನ ಶೋಧೆ. ಒಂದು ದಿನ ಸ್ವತಃ ಅಗ್ನಿದೇವನು ಅದರ 'ಸ್ಯಾಂಪಲ್' ತಿಂದು ತ್ರಿಲೋಕಗಳನ್ನೂ ಕಂಡಿರುವನು ಇದು ಆರೋಗ್ಯಕ್ಕೆ ತೀರ ಅವಶ್ಯ. ಇದನ್ನು ಆಹಾರವಾಗಿ ಉಪಯೋಗಿಸಲಾರದವರು, ಚೂರ್ಣರೂಪದಿಂದಲೂ, ಊದುಬತ್ತಿಯ ರೂಪದಿಂದಲೂ ಸೇವಿಸಬಹುದು.

## ಪ್ರಕರಣ ೧೮.

## ಪರೀಕ್ಷೆ.

ಆರೋಗ್ಯ ಸಮಿತಿಯವರು ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ ಸುತ್ತಿದರು. ಅವರಿಗೆ ಎಲ್ಲೆಲ್ಲಿಯೂ ನವೀನ ಆರೋಗ್ಯ ನಿಯಮಗಳೇ ಕಂಡುವು. ಹಳೆಯ ವೈದ್ಯಶಾಸ್ತ್ರ, ವೇದಶಾಸ್ತ್ರಗಳನ್ನೆಲ್ಲ

ಅವರು ತಿರುವಿಹಾಕಿದರು. ಅವರಿಗೆ, ಮಾನವರ ಈ ಹೊಸ ಜೀವನ ಕ್ರಮಗಳಿಗೆ, ಆಧಾರಗಳು ಸಿಗಲಿಲ್ಲ. ಹೀಗಿರಲು, ಮಾನವರ ಸುಧಾರಣೆಯ ಕಲ್ಪನೆಗಳು ತೀರ ಸ್ವಾರ್ಜಿತವೆಂಬ ಅನುಭವವು ಅವರಿಗೆ ಬಂತು. ಹಿಂದು ಸ್ಥಾನದಲ್ಲಿ ಮಾನವರ ಮಟ್ಟಗನ್ನುವುದಾದರೆ ಅವರ ಅನುಭವದಲ್ಲಿ ಬಂದ ವಿಷಯವೆಂದರೆ – ಪ್ರತಿಯೊಂದು ವ್ಯಕ್ತಿಯೂ ತೀರ ನವೀನ ಶೋಧನೆಯಲ್ಲಿ ನಿಸ್ವಾರ್ಥ ಬುದ್ಧಿಯಿಂದ ಮಗ್ನನಾಗಿರುವನೆಂದು. ಆರೋಗ್ಯದ ನವೀನ ಸುಧಾರಣೆಗಾಗಿ ಪ್ರತಿಯೊಬ್ಬರೂ ತಮ್ಮ ಪ್ರಾಣವನ್ನು ಸಹ ಬಲಿಯಿಂಸಲು ಸಿದ್ಧರಿದ್ದರು. ಇಂಥ ನಿಸ್ವಾರ್ಥ ಬುದ್ಧಿಯು ಅಲ್ಲಿಲ್ಲೊಂದು ಆಕ್ಷೇಪಗಳಲ್ಲ; ಅದು ಸಾರ್ವಜನಿಕ ನಡತೆಯಾಗಿತ್ತು. ಇಂಥ ಸ್ವಾರ್ಥತ್ಯಾಗದಲ್ಲಿ ಜಗತ್ತಿನ ಯಾವತ್ತು ಜನರಿಗಿಂತ ಹಿಂದೀಯರ ಸ್ವಾರ್ಥ ತ್ಯಾಗವು ಅತಿ ಹೆಚ್ಚಿನದೆನ್ನಬಹುದು. ಇದು ಬರೇ ಬಾಯಿಮಾತಲ್ಲ. ಗಣಿತಗಳಿಂದ ಸಿದ್ಧಾಂತಗೊಳಿಸಬಹುದಾದ ವಿಷಯ. ದೇವಲೋಕದವರು ಪ್ರತಿಯೊಬ್ಬ ಮಾನವನಿಗೆ ೧೦೦ ವರುಷಗಳ ಬಾಳ್ವೆ ಧಾರೆಯೆರದಿರುವರಂತೆ. ಅದರಲ್ಲಿ ನಾರ್ವೆಪ್ರಾಂತದವರು ಸಾಧಾರಣ ೪೫ ವರುಷಗಳಿಗೂ ಮಿಕ್ಕಿ ಆರೋಗ್ಯ ಜೀವನಕ್ಕಾಗಿ ವ್ಯಯಿಸುತ್ತಿದ್ದರು; ಅಮೇರಿಕಾ ಇತ್ಯಾದಿ ಶ್ವೇತವರ್ಣಿಯರು ಸಾಧಾರಣ ೫೫ ವರುಷಗಳನ್ನು ಆದರೆ, ಅನಾದಿಯಿಂದಲೂ ತ್ಯಾಗಕ್ಕೆ ಕೀರ್ತಿಗೊಂಡ ಭರತಖಂಡವು–೭೭ ವರುಷಗಳ ತ್ಯಾಗಮಾಡಿರುವುದು. ಅಲ್ಲಿ

ಸಾಮಾನ್ಯ ಮಾನವನು ೨೩ ವಯಸ್ಸುಗಳಿಗಿಂತ ಮಿಾರಿ ಬದುಕುವುದೆಂದರೆ ಕೇವಲ ಸ್ವಾರ್ಥವೆಂದು ತಿಳಿಯು ವನು. ಅವನ ಉಳಿದಾಯುಷ್ಯವು ಆರೋಗ್ಯಶೋಧ ನೆಗೆ ಧಾರೆ ಎರೆಯಲ್ಪಟ್ಟದೆ. ೩೩,೦೦,೦೦,೦೦೦ ಜನರ ಈ ಸ್ವಾರ್ಥತ್ಯಾಗದಿಂದ ಜಗತ್ತಿಗೆ—ಎಷ್ಟು ಧನಸ ಧಾನ್ಯಗಳು ಉಳಿಯಲಿಲ್ಲ!

ಇಂಥ ನವೀನ ಶೋಧನೆಯ ಹಾದಿಗಳೇನೆಂದು ತಿಳಿಯಲು—ದೇವಲೋಕದ ಅಸ್ವಾರ್ಥಿ (ಕಾರಣ—ಅವ ರಿಗೆ ಸಾಯಲು ಇಷ್ಟವೇ ಇಲ್ಲ. ಅಮರರಲ್ಲವೆ ಅವರು!) ಗಳಿಗೆ ತಿಳಿಯಲು ಕುತೂಹಲವಾಯಿತು. ಇಂಥ ಮಹತ್ವದ ಪ್ರಶ್ನೆಯನ್ನು ಜನರಲ್ಲಿ ಬಾಯಿಬಿಟ್ಟು ತರ್ಕಿ ಸಲು ಅವರಿಗೆ ನಾಚುಗೆಯಾಗಿ, ಅವರು ಕೇವಲ ಪರಿಶೀ ಲನೆಯಿಂದಲೇ ತಿಳಿಯಬೇಕೆಂದರು ಸಾಧ್ಯವಾದಾಗ ಲಿಲ್ಲ ತಮ್ಮ ದೇವಲೋಕದ ನಡೆಗಳನ್ನು ಬಿಟ್ಟು—ಮಾನ ವೀನಡೆಗಳನ್ನು ಅನುಸರಿಸತೊಡಗಿದರು. ಆದರೆ ಒತ್ತಟ್ಟು ಅವರಿಗೆ ಈ ಭೀತಿಯಿತ್ತು—ತಮ್ಮದೂ ಈ ಸ್ವಾರ್ಥತ್ಯಾಗದ ಜೀವನವೇ ಆದರೆ ಬಂದ ಕೆಲಸ ಪೂ ರೈಸುವುದರೊಳಗಾಗಿ ಎಷ್ಟು ಜನ್ಮಗಳಾಗಬೇಕೋ ಎಂದು. ಆದರೆ ಕೇವಲ ಅದೊಂದನ್ನು ನೋಡಲು ಸಾಧ್ಯವೇ?

ಈ ಮಹತ್ವದ ಕೆಲಸಕ್ಕಾಗಿ ಶಿಶುಗಳನ್ನು ಹಿಡಿದು ಮುದುಕರ ವರೆಗೆ ಪರಿಶೀಲಿಸತೊಡಗಿದರು. ಸ್ತ್ರೀ ಪುರುಷರ ದಿನಚರ್ಯೆಯನ್ನೆಲ್ಲ ತಿಳಿಯತೊಡಗಿದರು.

ಈ ಕೆಲಸಕ್ಕಾಗಿ ಅವರು ಸಾಲೆಗಳಿಂದ ಹಿಡಿದು ಅಡುಗೆ ಯ ಮನೆಗಳವರೆಗೆ ನಿಲುಕಬೇಕಾಯಿತು

ಅಖಿಲ ಹಿಂದುಸ್ಥಾನದ ಶಾಲೆಗಳನ್ನೆಲ್ಲ ತಿರುವಿ ಹಾಕಿದರು ಅಲ್ಲಿಂದಲೇ ಅವರ ಅನುಭವಕ್ಕೆ ಬಂದಿ ತು—ಈ ತ್ಯಾಗದ ಬುದ್ಧಿಯು ಮಕ್ಕಳಲ್ಲಿ ಸಹ ಬೇ ರೂರಿದೆಯೆಂದು. ಒಂದು ದಿನ ಅವರು ನಾಡಿನ ಶಾಲೆ ಯೊಂದನ್ನು ನೋಡುವ ಕುತೂಹಲದಿಂದ ಹೊರ ಟರು. ಒಂದು ದಿನ ಕಂಡುದರಿಂದೇನು ಫಲ? ಕೆಲವು ದಿನಗಳನ್ನಾದರೂ ಅವರು ಶಾಲೆಯಲ್ಲಿ ಕಳೆಯಬೇ ಕೆಂದು ಅವರಿಗೆ ತೋರಿತು. ಈ ಕೆಲಸ ಸುಲಭವಾ ಗುವಂತ ಅವರು, ಕೆಲವು ಸುತ್ತುಮುತ್ತಲಿನ ಶಾಲೆ ಗಳ, ಕಾಲೇಜುಗಳ ಅಧ್ಯಾಪಕರಿಗೆ ಸಾಧುಸದಾನಂದ ನಿಂದ ಪರಿಚಯ ಪತ್ರನನ್ನು ತೆಗೆದುಕೊಂಡರು. ಪತ್ರ ದಲ್ಲಿ ಇವರು ಆರೋಗ್ಯಪರಿಶೀಲಕರು ಎಂದು ಬರೆಯ ಲ್ಪಟ್ಟದ್ದರೆ–ಇವರಿಗೆ ಶಾಲಾ ಛತ್ರಲಿನ ಒಳಗೆ ಪ್ರವೇಶ ಸಿಗುವುದು ಕಷ್ಟವಿತ್ತು. ಕಾರಣ ಇವರು ಎಂಟೆಂಟು ಫೀಟನ ರಕ್ಕಸರಂತಿದ್ದರು. "ಹುಡುಗರು ಇವರನ್ನು ಕಂಡರೆ ಬೆದರಿ ಓಡಬಹುದು" ಎಂಬೊಂದೇ ನೆಪ ಸಾಕಲ್ಲವೇ ಅವರಿಗೆ. ಆ ಕಾರಣದಿಂದ, 'ಇವರಿಗೆ ನಾಡಿನ ಶಿಕ್ಷಣ ಕ್ರಮವನ್ನೂ ಕಾಣುವ ಇಷ್ಟವಿದ್ದುದ ರಿಂದ ಇವರು ನಿಮ್ಮಲ್ಲಿಯ ತನಕ ಬಂದಿರುವರು. ನನ್ನ ಮೇಲಣ ಮಮತೆಯಿಂದ ಇವರಿಗೆ ನಿಮ್ಮಲ್ಲಿ ತಕ್ಕ ಅನು ಕೂಲತೆಗಳನು ಕಲ್ಪಿಸಿಕೊಡಿರಿ' ಎಂದು ವಿಜ್ಞಾಪನೆ

ಇತ್ತು. ಖರ್ಚಿಲ್ಲದ ವಿಷಯ; ಅದೂ ಗುರು ಮಹಾ ರಾಜರ ವಾಣಿ; ಹೀಗಾಗಿ ಅವರಾರೂ ಇವರಿಗೆ ಆಶ್ರಯ ವೀಯುವುದಿಲ್ಲೆನ್ನಲಿಲ್ಲ. ಇವರ ನಿವಾಸಕ್ಕೆ ಆ ಉಪಾ ಧ್ಯಾಯರು ತಂತಮ್ಮ ನಿವಾಸಗಳಲ್ಲಿ ಸೌಕರ್ಯವನ್ನು ಕಲ್ಪಿಸಿಕೊಡುವೆವೆಂದರು. ಆದರೆ ಇವರಿಗದು ಇಷ್ಟವಿ ದ್ದಿಲ್ಲ "ಇಲ್ಲ, ನಿಮ್ಮ ವಿದ್ಯಾರ್ಥಿ ಆಶ್ರಮಗಳಲ್ಲಿರಲು ನಮಗೆ ಅನುಮತಿಯಾದರೆ . . ." ಎಂಬ ವಿನಂತಿ ಮಾಡಿಕೊಂಡರು. "ವಿದ್ಯಾರ್ಥಿ ಆಶ್ರಮ"?—ಎಂದು ಉಪಾಧ್ಯಾಯರು ಕೆಲವರು ತಬ್ಬಿಬ್ಬಾದರು. "ಆಶ್ರ ಮಗಳು ನಮ್ಮೂರಲ್ಲಿಲ್ಲ ಬೇಕಾದರೆ ನೀವು ಅಹಮ್ಮ ದಾಬಾದಿಗೋ, ಹಿಮಾಲಯಕ್ಕೋ ಹೋಗಬೇಕು" ಅಂದರು.

ವರುಣ:—ನಮಗೆ ಬೇಕಾದುದು ವಿದ್ಯಾರ್ಥಿಗಳು ಳಿದುಕೊಳ್ಳುವ ಸ್ಥಳ.

ಉಪಾ:—ಓಹೋ, ಅದೋ ಹಾಸ್ಟೆಲು- ಎನ್ನಿರಿ. ಹಲವರು ಹಾಟೆಲುಗಳಲ್ಲೂ ಇರುವರು. ಹಾಸ್ಟೆಲಾ ದರೆ ನಿಮಗೆ ತೊಂದರೆಯಿಲ್ಲ.

ಹೀಗೆಂದು ಇವರು ನಾಲ್ವರನ್ನು—ಆ ಊರಿನ "ದಿ ಸ್ಟೂಡೆಂಟ್ಸ ಓನ್ ಹಾಸ್ಟೆಲ" ಎಂಬ ಆಶ್ರಮದಲ್ಲಿ "ಅತಿ ಥಿ"ಗಳನ್ನಾಗಿ ಸೇರಿಸಿದರು. ಅಲ್ಲಿ ಐದು ವರುಷದ ಬಾಲಕರಿಂದ ಹಿಡಿದು ಮೂವತ್ತೈದು ವಯಸ್ಸಿನ ತರು ಣರ ವರೆಗೆ ವಾಸವಾಗಿದ್ದರು. ಕೆಲವು ಉಪಾಧ್ಯಾ ಯರೂ ಅಲ್ಲೀ ಇರುತ್ತಿದ್ದರು ಇದನ್ನು ಕೇಳಿದೊಡ

ನೆಯೇ ದೇವದೂತ ತ್ರಯರಿಗೆ, "ಇವರಿನ್ನೂ ಗುರು ಶಿಷ್ಯ ಬಂಧನವನ್ನು ಕಡಿದಿಲ್ಲ"— ಎಂದು ತಿಳಿದು ಹರುಷವಾಯಿತು.

ಮೊದಲನೆಯ ದಿನ ಅವರೊಂದು ಪ್ರಾಥಮಿಕ ಶಾಲೆಯನ್ನು ನೋಡಹೋದರು. ಅವರ ಚತುರ್ಮುಖಿಯು ಆ ಊರವನೇ ಆದುದರಿಂದ ಸ್ವಲ್ಪ ಚುಟುವಟಿಕೆಯಿಂದ ತಿರುಗಿದನು. ಬೆಳಗ್ಗೆ ಎದ್ದೊಡನೆಯೇ ಇವರನ್ನು ಪೇಟೆಗೆ ಒಯ್ದನು. ಆರೋಗ್ಯಾಲಯವೊಂದನ್ನು ಸೇರಿದರು; ಅವರ ಹಾಸ್ಟೆಲಿನ ಬಾಲಕರಲ್ಲಿ ಅರ್ಧಕ್ಕರ್ಧ ಒಳಗೆ ಜಮಾಯಿಸಿದ್ದರು. ಸರಿ, ಒಂದೊಂದಾಣೆ ಪಕೋಡಾ, ಕಾರ, ಒರಿಯುಕ್ಕಿ ತುಪ್ಪದದೋಸೆ, ಅರ್ಧರ್ಧ ಡಿಕಾಕ್ಶನ್ ಹೊಡೆದು— ಮುಂದರಿದರು. ಹಾದಿಯಲ್ಲಿ 'ಗುಂಯ್' ಎಂಬ ನಿನಾದವು ಹೊರಟದ್ದನ್ನು ಕೇಳಿ— "ಏನು ಬಳಿಯಲ್ಲಿ ಸಂತೆಯಿದೆಯೇ?" ಎಂದು ಕೇಳಿದರು. ಚತುರ್ಮುಖಿಯು "ಅಲ್ಲ-ಸಾಲೆ ಬಂತು" ಅಂದನು. ಹಾಗಾದರೆ ತಂಬೂರಿ ಹಿಡಿದು ಸಂಗೀತದಭ್ಯಾಸ ನಡಿದಿರಬೇಕೆಂದು ಊಹಿಸಿದರು. ಸಾಲೆಯೊಳಗೆ ನೇರಲಾಗಿ ಆ ಸ್ವರವು ಸಜೀವ ತಂಬೂರಿಗಳನ್ನು ಮೇಳೈಸಿದ ಸ್ವರವೆಂದು ತಿಳಿಯಿತು. ಪ್ರಾಥಮಿಕ ಶಿಕ್ಷಣ ನಿಯಮಕ್ಕನುಸರಿಸಿ ಅಲ್ಲಿ ಜನಸಂದಣಿ ದಟ್ಟಾಗಿತ್ತು. ಕಿಟಕಿ ಬೆಳಕುಗಳು ಕಡಿಮೆಯಾಗಿದ್ದರೂ, ಧೂಳಿನ ಹಾರಾಟ ಸಾಕಷ್ಟಿತ್ತು. ಹುಡುಗರ ಕೋಮಲ ಚರಣಗಳಿಗೆ ಸಾಲೆಯ ಗಟ್ಟಿಯಾದ ನೆಲವು ತಾಗ

ಬಾರದೆಂದು ಅದನ್ನು—ಮಲ್ಲಯುದ್ಧದ ರಂಗಭೂಮಿಯನ್ನಾಗಿ ಮಾಡಿದ್ದರು. ಹುಡುಗರಲ್ಲಿ ಕೆಲವರು ಚೀರುತ್ತಿದ್ದರು, ಕೆಲವರು ತೂಕಡಿಸುತ್ತಿದ್ದರು, ಕೆಲವರು ಅಳುತ್ತಿದ್ದರು. ಉಪಾಧ್ಯಾಯರು, ಹವಾಶುದ್ಧಿಗಾಗಿ ಊದುಬತ್ತಿಯನ್ನು ತುಟಿಯಿಂದ ಹಿಡಿದು ಹೊತ್ತಿಸುತ್ತಿದ್ದರು. ಮಂಡಲದವರು ಬರಲು, ಇವರಿಗೂ ಒಂದೊಂದು ಬತ್ತಿಯನ್ನು ಕೊಟ್ಟರು. ಚತುರ್ಮುಖರೊಬ್ಬನು ಮಾತ್ರ ನೆಳೆದನು. ಅಗ್ನಿರಾಯನಿಗೆ ಇದು ತನ್ನ ಸೇವೆಯೆಂದು ತಿಳಿದು ಹರುಷವಾಗಿ, ದಾಕ್ಷಿಣ್ಯದಿಂದ ಒಂದು "ಆನೆ" (Elephant) ಊದುಬತ್ತಿಗೆ ಬಾಯಿಹಾಕಿದನು. ಇದರ ಪರಿಣಾಮವಾಗಿ ಹೋಗುವಾಗ ಅವನ ಕೈಗಳನ್ನು ಗೆಳೆಯರು ತಮ್ಮ ಹೆಗಲಮೇಲಿರಿಸಬೇಕಾಗಿ ಬಂತು.

ಬಾಲಕರ ವಿಚಾರ—ಯಾರಿಗೂ ಎತ್ತರ ಬೆಳೆಯುವ ಮನಸ್ಸೇ ಇದ್ದಿಲ್ಲ. (ಆರ್ಥಿಕ ದೃಷ್ಟಿಯಿಂದ ಲಾಭವಿದೆ. ಬಟ್ಟೆ ಖರ್ಚು ಕಡಿಮೆ). ಇತ್ತ ಕೆಲವೊಂದು ಹುಡುಗರಲ್ಲಿ ಬರಿ ತಲೆಯೊಂದೇ ಕಾಣಿಸುತ್ತಿತ್ತು; ಕೆಲವರಿಗೆ ಬರಿ ಹೊಟ್ಟೆ ಮಾತ್ರ ಕೈಕಾಲುಗಳಿಲ್ಲ—ತ್ರೈರಾಶಿಕದಿಂದ ಹೇಳುವುದಾದರೆ-ಎಕ್ಕಳೆಯ ಕೈಕಾಲುಗಳಂತಿದ್ದುವು ಅವರಲ್ಲಿ ಅರ್ಧಕ್ಕರ್ಧ ಬಾಲಕರು ಬೇರೆ ಗಾಜಿನ ಕನ್ನಡಕವನ್ನಿಟ್ಟದ್ದರು. ಅವುಗಳಲ್ಲೊಂದನ್ನು ವರುಣರಾಯನಿರಿಸಿಕೊಂಡನು ಕಣ್ಣಿನಿಂದ ಮಳೆ ಸುರಿಯಿತು. ಸುತ್ತನೋಡಲು – ಗೋಡೆ, ಮನೆ, ಮಠಗಳಿಗೆ ಭೇದ ಕಾಣಿಸಲಿಲ್ಲ. ಒಳ್ಳೇ ವಿಚಿತ್ರ

ವೆನಿಸಿತು. ಇದರ ಗುಟ್ಟು ತಿಳಿಯಲಾರದೆ—"ಇವೇಕೆ? ಆಟವಾಡುವುದಕ್ಕೇ?" ಎಂದು ಕೇಳಿದನು ಉಪಾಧ್ಯಾಯನು "ಶಾರ್ಟ್‌ಸ್ಪ್ಯಾಟ್" ಎಂದನು ಹೆಚ್ಚಿನ ಅಜ್ಞಾನಿಯೆಂದು ತೋರಿಸಿಕೊಳ್ಳಬಾರದೆಂದು ಸುಮ್ಮನಾದನು. ದೂರದಲ್ಲಿ, ಒಬ್ಬ ಗೆಳೆಯನು ವೇಳೆಯಾದರೂ ಮೆಲ್ಲಗೆ ಬರುತ್ತಿದ್ದುದನ್ನು ಕಂಡು, ಹಲವು ಬಾಲಕರು ನಕ್ಕರು. ದೇವಲೋಕದವರಿಗೆ ಕಾಳಿದಾಸಾದಿಗಳ ಕೆಲವು ನಾಟಕದ ಪ್ರತಿಗಳು ಹೋಗಿರಬೇಕು ಅದರಲ್ಲಿ "ಮುತ್ತಿನಂತಹ" ಹಲ್ಲುಗಳು ಎಂಬ ವರ್ಣನೆ ಇದೆಯಷ್ಟೆ. ಅವನ್ನು ಕಾಣುವ ಆಸೆಯಿಂದ ಬಿರನೆ ಬಿರನೆ, ನಗಲು ಬಾಯಿತೆರೆದ ಬಾಲಕರ ಹಲ್ಲುಗಳ ಕಡೆಗೆ ಎವೆಯಿಕ್ಕದೆ ನೋಡಿದರು. ಅವರಿಗೆ ಮುತ್ತುಗಳು ಕಾಣಸಿಗಲಿಲ್ಲ ಹಲವು ಹಲ್ಲುಗಳು ಧವಳವರ್ಣ ತಾಳಿದ್ದುವು. ಆಗ "ಮುತ್ತೋ, ಹವಳವೋ" ಎಂಬ ಸಂಶಯ ಸಹ ಬಂದಿತು ಇನ್ನು ಕೆಲವು ಬಾಯಿಗಳಲ್ಲಿ— ಎಡದವಡೆಯಲ್ಲಿ ಶುಕ್ಲಪಕ್ಷದ ಚಂದ್ರನ ಕಳೆಯ ಸ್ಥಿತ್ಯಂತರಗಳೂ, ಮೇಲಿನ ಸಾಲಿನಲ್ಲಿ ಕೃಷ್ಣಪಕ್ಷದ ಚಿತ್ರವೂ ಇತ್ತು. ಮೇಲಿನ ಸಾಲಿನ ಎಡಕೊನೆಯಲ್ಲಿ ಒಂದು ಹಲ್ಲಿಲ್ಲ. ಕೆಳಗಿನ ಸಾಲಿಗೆ ಎಡಕೊನೆಯಲ್ಲಿ ಒಂದು ಹಲ್ಲಿತ್ತು. ಇದು ಖಗೋಳ ಶಿಕ್ಷಣದ ವ್ಯವಸ್ಥೆಯೆಂದು ಊಹಿಸಿದರು. ಇದನ್ನು ಬಿಟ್ಟು ಇನ್ನೊಂದು ದಂತವರ್ಗವು ದೊರೆಯಿತು ಒಬ್ಬ ಬಾಲಕನು ನಗುವಾಗ ಅವನ ಮೇಲುದವಡೆಯ ಹಲ್ಲುಗಳು

ಕಳಚಿಬಿದ್ದುವು! ಇವರು ತಬ್ಬಿಬ್ಬಾದರು. ಆದರೆ ಬಾಲ ಕನು ಅವುಗಳನ್ನು ತಿರುಗಿ ಎತ್ತಿ ಹಿಡಿದು ಬಾಯಿಯಲ್ಲಿ ರಿಸಿಕೊಂಡನು. ಈ ಜಾದುವನ್ನು ಕಂಡು ವಾಯು ರಾಯನು ಕುತೂಹಲ ತಡೆಯಲಾರದೆ ಉಪಾಧ್ಯಾಯ ನನ್ನು ಕುರಿತು -- ಈ ಹಲ್ಲುಗಳಂತೆ, ಕಣ್ಣುಗಳನ್ನೂ ಸಹ ಹೀಗೆ ಕಿತ್ತಿರಿಸಲು ಬಂದೀತೆ? ಎಂದು ಕೇಳಿದ ನು ಆ ಕೂಡಲೆ ಅವರು "ಗೋಪಾಲ" ಎಂದು ಕರೆದು, 'ನಿನ್ನ ಕಣ್ಣು ಕಿತ್ತುತೋರಿಸು' ಎಂದನು. ಅವನು ಕಣ್ಣಾಲಿಯನ್ನು ಕಿತ್ತು ತೋರಿಸಿದನು. ವರುಣನು ಕೈಯಲ್ಲಿ ಹಿಡಿಯಲು ಮುಂದಾದನು. ಅಗ್ನಿಗೂ ಅದೇ ಕುತೂಹಲವುಂಟಾಗಿ ಅವನೂ ಅದಕ್ಕೆ ಕೈಹಾಕಿದನು. 'ಇಬ್ಬರ ನ್ಯಾಯವಾಗಿ' ಅದು ನೆಲಕ್ಕೆ ಬಿತ್ತು. ಒಂದು ಕಣ್ಣಿಗೆ ಎರಡಾಯಿತು. ಗೋಪಾಲನು ಅಳತೊಡಗಿ ದನು. ದೇವದೂತರಿಗೆ ಎದೆ ಬಡಬಡ ಅಂದಿತು. "ಇನ್ನೇನು ಗತಿ" ಎಂದರು! "ಪರರ ಕಣ್ಣು ಕಿತ್ತ ಪಾಪ ಬಂತಲ್ಲಾ" ಎಂದು ಅವರ ಧರ್ಮದೃಷ್ಟಿಯು ನುಡಿಯಿತು. "ಛೀ ಅದಕ್ಕೇನು! ಹತ್ತು ರೂಪಾಯಿ ಕೊಡಿರಿ. ಬೇರೆ ಕಣ್ಣನ್ನು ತಂದರಾಯಿತು." ಎಂದು ಉಪಾಧ್ಯಾಯನು ಸಮಾಧಾನ ಹೇಳಿದನು. ಹತ್ತನ್ನಲ್ಲ, ನೂರನ್ನು ಕೊಡ ಲು ಅವರು ಸಿದ್ಧರಿದ್ದರು. ಸರಿ ಅರ್ಧ ತಾಸಿನಲ್ಲಿ ಹೊಸ ಕಣ್ಣು ಬಂದಿತು. ಅಂದಿಗೆ ಸಾಕೆಂದು ಅವರು ಮರಳಿದರು! ವೇಳೆಯಾದುದರಿಂದ ಅವರ ಹಿಂದೆಯೇ ಸಾಲೆ ಬಿಟ್ಟಿತು. ಬಾಲಕರು ಕೆಲವರು ಗಾಡಿಯ

ಮೇಲೆ ನಾಗಿಹೋದರು. ಕೆಲವರು ಮೋಟಾರಿನ ಮೇಲೆ. ಹರಕಂಗಿಯ ಕೆಲವರು ಕಾಲುನಡೆಯಿಂದ. ಇಂಥವರ ಹೆಜ್ಜೆಗಳ ಗತಿಯನ್ನು ಕಂಡು ಅವರು ದಣಿದಿರುವರೆಂದು ತಿಳಿದು ವಾಯುವು ಒಬ್ಬ ಹುಡುಗನನ್ನು ಎತ್ತಿಕೊಂಡನು. ಹೂವಿನಷ್ಟು ಭಾರ! ಕೂಡಲೆ, ಬಳಿಯಲ್ಲಿದ್ದ ಇನ್ನಾರೆಂಟು ಹುಡುಗರನ್ನು ಎತ್ತಿಕೊಂಡನು. ಒಟ್ಟು ತೂಕ ೧೦೦ ರಾತ್ತಲುಗಳಾಗಬಹುದೋ ಏನೋ! ಅವನಿಗಾಶ್ಚರ್ಯವಾಯಿತು. ಅವನು ರಾಮಾಯಣ ಕಾಲದಲ್ಲಿ ಮಂಗನಾಗಿದ್ದಾಗ, ಪುಷ್ಪಕ ವಿಮಾನವನ್ನು ಕಂಡಿದ್ದ. ಈಗ ಮನುಷ್ಯನಾದಾಗ ಪುಷ್ಪಸಮಾನರನ್ನು ಕಂಡ! "ಧನ್ಯವೆನ್ನವತಾರ. . ." ಎಂಬ ಹಾಡು ಅವನ ಬಾಯಿಗೆ ಬಂದಿತು. ಬಾಲಕರನ್ನೆಲ್ಲಾ ಅವರವರ ನಿವಾಸಗಳಿಗೊಯ್ಯಲು ಹಾಗಿದನು. ತುಸು ಹೊತ್ತಿನಲ್ಲಿ ಅವರವಗ ಮನೆಗಳು ಬಂದುವು. ಅವರು ಅಲ್ಲಿನ ಗಿರಣಿಕೂಲಿಗಳ ಮಕ್ಕಳೆಂದು ತಿಳಿಯಿತು. ಆ ಬಾಲಕರನ್ನೂ, ಅವರ ನಿವಾಸಗಳನ್ನೂ ಕಂಡು—ದೈವಲೀಲೆಯ ನನಪಾಯಿತು. ದೇವರು—ಆತ್ಮರಕ್ಷಣಾರ್ಥವಾಗಿ ಪ್ರಾಣಿಗಳ ಮೈಬಣ್ಣವನ್ನೂ, ಅವುಗಳ ಜನ್ಮಭೂಮಿಗೆ ಸರಿಯಾಗಿ ಕೂಡುವನಂತೆ. ಗಿಳಿಯ ನಿವಾಸವು ಹಸುರುಮರ, ಮೈಬಣ್ಣವೂ ಹಸುರು! ಆದರೆ ಈ ಬಾಲಕರು ನಿವಾಸದ ಬಣ್ಣದವರು ಮಾತ್ರವಲ್ಲ, ಮೈವಾಸನೆ ಸಹ ಸುತ್ತಲಿನ ಚರಂಡಿಯ ವಾಸನೆಯಂತೆಯೇ ಇತ್ತು. ಮುಂದಿನ ಶೋಧನೆಯಿಂದ—

ಇದು ಅಲ್ಲಿನ ಮೂವತ್ತು ಬಾಲಕರ ವೈಶಿಷ್ಟ್ಯವೆಂದವ
ರಿಗೆ ತಿಳಿಯಿತು.

ಹಾಸ್ಟೇಲಿನಲ್ಲಿನ ಜೀವನವಾದರೂ ಅವರಿಗೆ ವಿಶೇಷ
ಅನುಭವವನ್ನುಂಟುಮಾಡಿತು. ಚಿಕ್ಕ ಮಕ್ಕಳು ಸಹ
ಊದುಬತ್ತಿ ಸೇವಿಸುತ್ತಿದ್ದರು! ಇದರ ಪ್ರಭಾವವನ್ನು
ಸಹಿಸಿದ ಅಗ್ನಿಯು ಒಮ್ಮೆ ಒಬ್ಬ ಬತ್ತಿಭಕ್ತನೊಡನೆ
ಬಾಲಕಾ—"ನಿನಗೂ ಈ ಪರಿಪಾಠವಿದೆಯೇ ಎಂದು
ಕೇಳಿದನು" ಅದಕ್ಕವನಿಂದ ತೀಕ್ಷ್ಣ ಉತ್ತರ ಬಂದಿತು:
ನಮ್ಮ ಊರಲ್ಲಿ–"ಇಷ್ಟಿಷ್ಟು ಚಿಕ್ಕ ಹುಡುಗರು ಬತ್ತಿ ಎಳೆ
ಯುವರು" ಎಂದನು. ಆಗಿವನು "ಹಾಗಾದರೆ ನಿನ್ನ
ವಯಸ್ಸು?" ಎಂದು ಕೇಳಲು, ಬಾಲಕನು–"ಪತ್ತು"–
ಎಂದು ಉತ್ತರವಿತ್ತನು ಆಗಿವನು "ವಾಯುಶುದ್ಧೀ
ಕರಣಕ್ಕಾಗಿ ಇದು ಹೋಮದಂತಿರಬೇಕು"-- ಎಂದು
ದಿನಚರಿಯಲ್ಲಿ ಟಿಪ್ಪಣಿಮಾಡಿಕೊಂಡನು.

* * * * *

ಪ್ರಾಥಮಿಕ ಶಾಲೆಯಿಂದ ಹೈಸ್ಕೂಲಿಗೆ ಹೋದರು.
ಹುಡುಗರು ಹೆಸರಿಗೆ ತಕ್ಕಷ್ಟು "ಹೈ" ಇದ್ದಿಲ್ಲ. ೧೬
ವಯಸ್ಸಿನವರು ಸಹ ೪ ಅಡಿಗಿಂತ "ಹೈ" ಆಗಬಾರ
ದೆಂದು ಪಣತೊಟ್ಟದ್ದರು. ಒಂದುದಿನ ಕೆಲವು
ಹುಡುಗರು ಆಟವಾಡುತ್ತಿದ್ದರು ಒಬ್ಬರು ಇನ್ನೊ
ಬ್ಬರ ಹೆಗಲನ್ನೇರಿ ಹೋಗುತ್ತಿದ್ದರು. ವಾಯುವಿಗೆ,
ಹಿಂದೆ ತಾನು ರಾಮಲಕ್ಷ್ಮಣರನ್ನು ಹೊತ್ತ ನೆನಪಾಗಿ–
ಅವರೊಡನೆ "ನಾನೂ ಬರಲೇ" ಅಂದನು. "ಬರ

ಬಹುದು ಆದರೆ ನಿನ್ನನ್ನು ಹೊರುವಕೆಲಸ ಮಾತ್ರ ಆಗದು. ಛೀ, ಛೀ, ಬೇಡಪ್ಪ" ಎಂದನು. ಸರಿ ಆಟತೊಡಗಿತು. ಚೇಷ್ಟೆಗಾಗಿ ಇವನು ಕುಳಿತಿರಲು, ಇವನ ಹೆಗಲಮೇಲೆ ಎಂಟು ಹುಡುಗರು ಕುಳಿತರು. ವಾಯುರಾಯನು ಜಗಿಜಗಿದು ಓಡತೊಡಗಿದನು. ೧೦೦ ಗಜ ಸಾಗುವುದರಲ್ಲಿ ಬಾಲಕರೆಲ್ಲಾ "ಬೇಡಪ್ಪಾ" ಎಂದು ಕೂಗಿದರು. ವಾಯುವು ಹತಾಶನಾಗಿ ಅವರನ್ನಿಳಿಸಿದನು. ಇದರ ಮೇಲಿಂದ ಅವರ ತೂಕದ ಎಣಿಕೆ ಹಾಕಿದನು. ಹೀಗೆ ಉಪಾಯಾಂತರಗಳಿಂದ ಅವರ ಭಾರತೂಗುವ ಕೆಲಸಕ್ಕೆ ಹೊರಟನು. ಅವನು ದಿನಚರಿಯಲ್ಲಿ ಬರೆದಿಟ್ಟ ಟಿಪ್ಪಣಿ ನೋಡಿರಿ:—

| ೧೦ ವರುಷ. | ಸರಾಸರಿ ತೂಕ. | ೫೦ ರಾತಲು, |
|---|---|---|
| ೧೨ " | " | ೫೫ " |
| ೧೪ " | " | ೬೦ " |
| ೧೬ " | " | ೭೦ " |
| ೧೮ " | " | ೮೦ " |
| ೨೦ " | " | ೯೦ " |
| ೨೪ " | " | ೧೦೦ " |
| ೩೦ " | " | ೯೫* " |
| ೫೦ " | " | ೮೦* " |

* ಈ ಪ್ರಾಯದವರ ಸಂಖ್ಯೆ ಸಾಕಷ್ಟಿಲ್ಲ.

ಅಂತು ೧೦೦ ರಾತ್ಲಿನ ಮೇಲೇರುವುದು ಯಾವ ತರುಣನಿಗೂ ಇಷ್ಟವಿಲ್ಲದ ಸಂಗತಿಯಾಗಿತ್ತು

* * * * * *

ಇನ್ನು, ಈ ತರುಣರ (೧೨—೨೪ ವಯಸ್ಸಿನವರ) ಮುಖ ಮೈಕಟ್ಟುಗಳೆಲ್ಲ ವಿಚಿತ್ರವಾಗಿದ್ದುವು. ಚಿಕ್ಕಮಕ್ಕಳಲ್ಲಿ ಅಲ್ಪ ಸ್ವಲ್ಪ ಕೊಬ್ಬನ್ನು ಕಂಡದ್ದುಂಟು. ಒಬ್ಬಿಬ್ಬರಿಗೆ ಥಳಥಳಿಸುವ ಕಣ್ಣುಗಳೂ ಇದ್ದಿದ್ದವು. ಆದರೆ ತರುಣರಲ್ಲಿ ಎಷ್ಟುಮಾತ್ರಕ್ಕೂ ಈ ದೋಷಗಳಿಲ್ಲ. ಅವರೆಲುಬಿಗೂ ಚರ್ಮಕ್ಕೂ ತುಂಬಾ ಮೈತ್ರಿ. ಕಣ್ಣುಗಳಿಗೆ ಸಾವಿನ ಭೀತಿ ಸಹ ಇದ್ದಿಲ್ಲ. (ಕಾರಣ ಸತ್ತವರಿಗೂ ಅಂಥ ಕಣ್ಣುಗಳೇ ಇರುವುವು.) ಇದರ ರಹಸ್ಯವನ್ನು ಹುಡುಕುವ ಯೋಚನೆಯಾಯಿತು. ಇದೇ ಅವರ ಶರೀರಸೌಷ್ಠವದ ಕಲ್ಪನೆಯೆಂಬುದನ್ನು ಈ ಕೆಳಗಣ ಘಟನೆಯ ಮೇಲಿಂದ ನಿರ್ಣಯಿಸಿದರು.

ಹಾಸ್ಟೆಲಿನಲ್ಲಿ ಒಬ್ಬ ಹದಿನಾರು ವರುಷದ ಬಾಲಕನಿದ್ದನು. ಅವನ ತೂಕ ೧೧೦ ರಾತಲು! ಮೈಕಟ್ಟು ಪುಷ್ಟವಾಗಿತ್ತು. ಅವನನ್ನು ಕಂಡರೆ ಎಲ್ಲರೂ ನಕಲಿ ಮಾಡುವವರೆ. ಅವನ ಹೆಸರು ರಘುದಾಸನೆಂದು. ಆದರೆ ಶಾಲಾಹುಡುಗರ ನಾಮಕರಣವೇ ಬೇರೆ-"ತೃತೀಯಾವತಾರ" (ವಿಷ್ಣುವಿನ) — ಎಂದು. ರಘುದಾಸನಿಗೆ ಈ ಹೆಸರು ಕೇಳಿ ಕೇಳಿ ಬೇಸರವಾಯಿತು. ಒಂದು ದಿನ ಅವನು "ತೃತೀಯಾವತಾರ" ಎಂದೊಬ್ಬ ಬಾಲಕನಿಗೆರಡೇಟನ್ನು ಕೊಟ್ಟನು. ಏಟು ತಿಂದವನು, ತಕ್ಷಣವೇ, (ಮರಳಿ ಸಲ್ಲಿಸಲಿಲ್ಲ. ಅಹಿಂಸಾಪರಮೋಧರ್ಮ:) ಗುರುಗಳಿಗೆ ಸುದ್ದಿ ಹೇಳಿದನು. ಏಟು ತಿಂದವನ ಹೆಸರು-ಮೋಹನರಾಯ-ಎಂದು. ಮೋಹನರಾಯ

ನಿಗೂ, ಅವನ ಗುರು ರಂಗಾಚಾರ್ಯರಿಗೂ ಪ್ರಾಣಕ್ಕೆ ಪ್ರಾಣ. ಸರಿ "ಕೇಸ್" ತೀರ್ಮಾನವಾಯಿತು. ಉಪಾಧ್ಯಾಯರು—"ಧೂ, ಪಟಿಂಗ" ಎಂದು ರಘುದಾಸಗೆ ಸರ್ಟಿಫಿಕೇಟನ್ನು ಕೊಟ್ಟರು. ಅವನ ವೈವುಟ್ಟ ನೋಡುವ ತೂಕ ಅವರಿಗೂ ಇದ್ದಿಲ್ಲ. ಈ ದಾವೆಯು ತನಖಿಕಾಲಕ್ಕೆ ಸೇರಿದ ಹಲವು ಹುಡುಗರು ಜಜಮೆಂಟ್ ಹೊರಟ ಬಳಿಕ—"ಭೂಮಿಗೆ ಭಾರ; ಕೂಳಿಗೆ ದಂಡ"—ಎಂದು ತಮ್ಮ ತೀರ್ಮಾನವಿತ್ತರು. ಸರಿ! ರಘುದಾಸನು ನಾಲ್ಕನೆಯ ಅವತಾರ ಧರಿಸಿದನು. ಒಬ್ಬಿಬ್ಬರಿಗೆ (ಉಪಾಧ್ಯಾಯರಿಗೂ ಸಹ) ಗುರುದಕ್ಷಿಣೆ ಸಲ್ಲಿಸಿ— ಹಾಸ್ಟೆಲಿನಿಂದ ನಿವೃತ್ತಿಗೊಂಡನು.

"ಭೂಮಿಗೆ ಭಾರ; ಕೂಳಿಗೆ ದಂಡ"—ಈ ಮಾತು ವರುಣಾಗ್ನಿವಾಯುರಾಯರಿಗೆ ತಿಳಿದದಿನ, ತರುಣರ ಜೀವನದ ಧೋರಣೆ ತಿಳಿಯಿತು. "ಭೂಮಿಗೆ ಭಾರ; ಕೂಳಿಗೆ ದಂಡ"ವಾಗಬಾರದೆಂದು ಅವರು ತಮ್ಮ ಶರೀರವನ್ನು ರೂಪಿಸುತ್ತಿದ್ದರು ಎಂದು.

ಇನ್ನು ಕನ್ನಡಕ, ಹಲ್ಲು, ಕಿವಿ ಇತ್ಯಾದಿಗಳ ವಿಚಾರದಲ್ಲಿ ಪ್ರಾಥಮಿಕ ಶಾಲೆಗಳಿಗಿಂತ ಹೈಸ್ಕೂಲುಗಳಲ್ಲಿ ೧೫೦% ಅಭಿವೃದ್ಧಿಯಿದೆ. ಇಲ್ಲಿಂದ ಕಾಲೇಜಿಗೆ ಕನಿಷ್ಟ ೨೦೦% ರ ಸುಧಾರಣೆ! S. S. L. C. ಎಂಬ ಪರೀಕ್ಷೆ ತೇರ್ಗಡೆಯಾಗುವುವರಲ್ಲಿ—ಹೆಚ್ಚಿನ ಶರೀರಶಾಸ್ತ್ರದ ಶೋಧನೆ ನಡೆದು ನೂರಾರು ಬಾಲಕರು—"ಲುನಾಟಿಕ್ ಆಶ್ರಮ"—ಎಂಬ ಅತಿ ಪ್ರೌಢ

ವಿದ್ಯಾಲಯಗಳಿಗೆ "ಮಾನಸಿಕ ವಿಜ್ಞಾನ" ಶೋಧನೆಗೆ ತೆರಳುವರು ಹ್ಯಾಸ್ಕೂಲಲ್ಲೇ ಈ ಶಕ್ತಿ ಬಾರದವರು-ಕಾಲೇಜನ್ನು ಈಸಿ ಮುಂದೆ ಅಲ್ಲಿಗೆ ತೆರಳುವುದುಂಟು.

ತರುಣರ ಜೀವನದ ಧೋರಣೆಯನ್ನು ತಿಳಿದ ಬಳಿಕ-ಅದನ್ನು ಕಾರ್ಯರಂಗಕ್ಕೆ ತರಲು ಅವರ ಯತ್ನಗಳೇನೆಂದು ತಿಳಿಯುವ ಕುತೂಹಲವು ಮಂಡಲಕ್ಕಾಯಿತು. ಇದು ತೀರ ಕಷ್ಟ ನಡೆಯಬೇಕಾದ ಕೆಲಸ. ತಿಳಿದರೆ-ಆಶ್ರಮಗಳಿಂದ ಹೊರಡಬೇಕಾದೀತು. ಇದಕ್ಕಾಗಿ ಕಳ್ಳರಂತೆ ಹೊಂಚುಹಾಕುತ್ತಿದ್ದರು ಇದರ ಶೋಧನೆಯು ಅವರಿಗೆ ಆಕಸ್ಮಿಕವಾಗಿ ದೊರೆಯಿತು. ಅದು ತೀರ ಗುಪ್ತ ವಿಷಯ ಆದರೆ, ವರದಿ ಬರೆಯುವವರಿಗೆ ಅಂತರಂಗ ಬಹಿರಂಗಗಳೆಂಬರೇನು?

ಹಾಸ್ಟೆಲಿನಲ್ಲಿದ್ದ ಗುರುಶಿಷ್ಯರ ಪ್ರೇಮಸಂಬಂಧವು ಅವರನ್ನು ತೀರ ಆಕರ್ಷಿಸಿತು. ಉಣ್ಣುವಾಗ, ತಿನ್ನುವಾಗ, ಊದುಬತ್ತಿ ಸೇವಿಸುವಾಗ--ಅವರು ಜತೆಯಲ್ಲಿರುತ್ತಿದ್ದರು ಇಂಥ ಆದರ್ಶ ಗುರುಶಿಷ್ಯರಲ್ಲಿ ಮೋಹನರಾಯ ರಂಗಾಚಾರ್ಯರು -- ಇಬ್ಬರೆನ್ನಬಹುದು. ಇವರು, ಆಶ್ರಮದ ಒಂದು ಕೊಠಡಿಯಲ್ಲಿ ವಾಸಮಾಡುತ್ತಿದ್ದರು. ಅದರ ನೆರೆಕೊಠಡಿಯಲ್ಲಿ ಮಂಡಲದವರಿದ್ದರು. ಹೀಗಾಗಿ--ಅವರು ಈ ಆದರ್ಶ ಗುರುಚೇಲರನ್ನು ಪರಿಶೀಲಿಸಲು ಸುಲಭವಿತ್ತು. ಒಂದು ದಿನ ವಾಯುರಾಯನು, ಬೆಳದಿಂಗಳನ್ನು ನೋಡಿ, ವಿಹಾರಕ್ಕೆ ಹೊರಟಿದ್ದನು. ತಿರುಗಾಡಿ ಬರುವಾಗ ತಾಸು ೧೨

ಬಾರಿಸಿತ್ತು. ವೇಳೆಯಾಯಿತೆಂದು ಮರಳಿಬಂದನು. ತನ್ನ ಕೋಠಡಿಯೆಂಬ ಭ್ರಾಂತಿನಿಂದ, ಗುರುರಾಯರ ಕೋರಡಿಯನ್ನು ಒಮ್ಮೆಗೇ ಸೇರಿ, ಕೈಯಲ್ಲಿದ್ದ ವಿದ್ಯುತ್ ಲಾಂದ್ರವನ್ನು ಹೊಳೆಯಿಸಿದನು. ತನ್ನ ಕೂರಡಿಯ ಲ್ಲೆಂದು ತಿಳಿದು ಮರಳಿ ಬರುವಂತಾಯಿತು. ಆ ಘಟ ನೆಯಿಂದ ಅವನ ಮನಸ್ಸು ತಳಮಳಗೊಂಡಿತು. ವಿಶೇ ಷ—ತನ್ನಪರಾಧಕ್ಕಂದಲ್ಲ; ಅಲ್ಲಿ ದೊರೆತ ಅನುಭವ ಕ್ಕಾಗಿ.

ವಾಯುರಾಯನು, ಆಂಜನೇಯನಾಗಿದ್ದನಲ್ಲವೇ; ಆಗಿಂದವನು ಚಿರಂಜೀವಿಯಾಗಲು ಬ್ರಹ್ಮಚರ್ಯ ಸಾಧನೆಮಾಡಿದ್ದನು. ಆ ನ್ವಾರ್ಥಹಿಡಿಯಲಿಷ್ಟವಿಲ್ಲ ದವರು ಏನುಮಾಡಬೇಕು—ಎಂಬ ವಿಚಾರವು ಈ ಘಟನೆ ಯಿಂದ ಹೊಳೆಯಿತು. ಅಂದಿನಿಂದವನು ಈ ವಿಚಾರ ವಾಗಿಯೇ ಮನನಮಾಡತೊಡಗಿದನು. ಸಂಗತಿಯನ್ನು ತನ್ನ ಗೆಳೆಯರಿಗೂ ಸಹ ತಿಳಿಸದೆ ದಿನಚರಿಯಲ್ಲಿ ಬರೆ ದಿಡತೊಡಗಿದನು. ಮುಂದೆ ಆ ಗುರುಶಿಷ್ಯರನ್ನು ಭಿನ್ನಭಾವದಿಂದ (ಮಧುರಭಾವ) ದಿಂದ ಕಾಣತೊಡಗಿ ದನು. ಅವನಿಗೆ ಈ ಸಮಸ್ಯೆಯನ್ನು ಬಿಡಿಸಿದನೆಂಬ ಹಿಗ್ಗಾಯಿತು. ಸಾವಿರಾರು ತರುಣರ ಧ್ಯೇಯವನ್ನ ರತೆನಂದು ಆನಂದವಾಯಿತು. ಆದರೂ ಅವರು ಅರ್ಧಾಂಗರಾಗಿ ನಿಸರ್ಗದ ನಿಯಮದ ವಿಪರ್ಯಾಸ ಮಾಡಬೇಕೇಕೆ—ಎಂಬ ವಿಚಾರ ಅವನಿಗೆ ತಿಳಿಯ ಲಿಲ್ಲ.

ವಾಯುರಾಯನ ವಿಚಾರಾಕಾಶದಲ್ಲಿ ಇದೊಂದು ಮೋಡವಾಗಿ ಆವರಿಸಿಕೊಂಡಿತು. "ಮಾತೃತ್ವವು ಮಮತೆಯ ಬೀಡು"—ಹೀಗಿರಲು, ಪ್ರತಿ ಮಾನವನು ಮಾತೃವಾಗಲು ಯತ್ನಿಸಬಾರದೇಕೆ?—ಎಂದು ಅನುಮಾನವಾಯಿತು ಇಂಥ ಪ್ರಶ್ನೆಯ ರಹಸ್ಯವರಿಯಲು, ನೂರಕ್ಕೆ ತೊಂಭತ್ತು ತರುಣರು ಹೊರಟು, ತಮ್ಮ ತಾರುಣ್ಯದ ಅಮೂಲ್ಯಕಾಲವನ್ನು ವ್ಯಯಿಸಿ, ಆಯುಷ್ಯದ ಸ್ವಾರ್ಥತ್ಯಾಗವನ್ನು ಮಾಡುತ್ತಿರುವುದನ್ನು ಕಂಡು ಅವನು ಬೆಪ್ಪಾದನು

ತರುಣರು ತಮ್ಮ ಕರ್ತವ್ಯವನ್ನು ಮಾಡುತ್ತಿರಲು, ಅವರ ಮಾತಾಪಿತೃಗಳು ಕರ್ತವ್ಯ ಬಾಹಿರರಾಗುತ್ತಲಿಲ್ಲ. ಅವರಿಗೆ, ಸಾಮಾನ್ಯ ಎಲ್ಲ ಹಿರಿಯರಿಗಿರುವಂತೆ, ನವಶೋಧಗಳಲ್ಲಿ ನಂಬುಗೆಯಿರುವುದಿಲ್ಲ. ಆ ಕಾರಣದಿಂದ ಅವರು, ಈ ಗಾಳಿಗೋಪುರವನ್ನು ನಂಬಿ, ಕುಲಕ್ಷಯವಾಗುವುದನ್ನು ಕಾಣಬಲ್ಲರೇ? ತಮ್ಮ ಮಕ್ಕಳ ೭೭ ವರುಷಗಳ ಆಯುಃಪ್ರಮಾಣದ ಸ್ವಾರ್ಥತ್ಯಾಗಕ್ಕೆ ಅಡ್ಡಿಬರುವ ಧೈರ್ಯ ಅವರಿಗಿಲ್ಲವಾದುದರಿಂದ, ಸರಿಯಾದ ಕಾಲಕ್ಕೆ ತಮ್ಮ ಪಾಲಿನ ಕರ್ತವ್ಯವನ್ನು ಸಲ್ಲಿಸಲೆಂದು, ಪ್ರಜಾಧರ್ಮಪರಿಪಾಲನೆಗಾಗಿ, ತಮ್ಮ ಬಾಲಕಿಯರಿಗೆ ಲನೇ ವಯಸ್ಸಿನಲ್ಲೂ (ಕನಿಷ್ಠಪಕ್ಷಕ್ಕೆ) ಬಾಲಕರಿಗೆ ಗಳ ವಯಸ್ಸಿನಲ್ಲೂ — ಗಾರ್ಹಸ್ತ್ಯಧರ್ಮವನ್ನು ಕೊಡಿಸುವ ಶಾಸ್ತ್ರಮಾಡಿದರು ತ್ಯಾಗಜೀವನಕ್ಕೆ ಸಿದ್ಧರಾದ ಬಾಲಬಾಲಕಿಯರು ಪಿತೃವಾಕ್ಯವ

ನ್ನೆಂದೂ ಅಲ್ಲಗಳೆಯರು. ಈ ಧಾರಾಳ ಬುದ್ಧಿಯಿಂದ ಬಾಲಕಿಯರು ೧೨ನೇ ವಯಸ್ಸಿನಲ್ಲಿ ತಾಯಂದಿರಾಗಿ, ಬಾಲಕರು ೧೬-೧೮ರಲ್ಲಿ ತಂದೆಗಳಾಗಿ - ಮಾನವ ವಂಶಕ್ಕೆ ತಮ್ಮ ಕರ್ತವ್ಯವನ್ನು ಸಲ್ಲಿಸಿ-ತಮ್ಮ ೨೫ ವಯಸ್ಸಿನೊಳಗಾಗಿ ಈ ಭಾರದಿಂದ ನಿವೃತ್ತರಾಗುವರು. ಹಿರಿತನದ ಕರ್ತವ್ಯವನ್ನು ಕಿರಿಯರಾಗಿರುವಾಗಲೇ ಸಲ್ಲಿಸಬೇಕೆಂಬ ಇಂಥ ಆತುರವನ್ನು ಇನ್ನೆಲ್ಲೂ ಕಾಣಲಾರೆ! ಇದು ಎಂಥ ದೇವದೂತರನ್ನೂ ಮುಗ್ಧರನ್ನಾಗಿ ಮಾಡುವ ವಿಚಾರ.

ಇನ್ನು ಹಿರಿಯರ ಉಪದೇಶಕ್ಕೆ ಕಾರಣಾಂತರಗಳಿಂದ ಬೀಳಲಾರದ ಬಾಲಕರು ತಮ್ಮ ಕರ್ತವ್ಯವನ್ನು ಮರೆಯುವುದಿಲ್ಲ. ಹ್ಯಾಸ್ಕೂಲು ಕಾಲೇಜಿನಲ್ಲಿರುವಾಗ ಅವರೇ ಪರೀಕ್ಷೆಯನ್ನು—ಅವಿವಾಹಿತ ಗೆಳತಿಯರ ಸಹಾಯದಿಂದ ಪೂರೈಸಲೆತ್ನಿಸುವರು ಆದರೆ— ಕೆಲವರಿರುವರು. ಅವರಿಗೆ— ಸಂತತಿ ಪೋಷಣಾಶ್ರಮವು ಎಂದೂ ಸಲ್ಲುವುದಿಲ್ಲ. ಅಂಥವರು--ಶಕ್ತ್ಯಾನುಸಾರ ಸೇವೆಮಾಡಿ ಹೋಗುವರು. ಇದು ಹೇಗೆಂಬ ವಿಚಾರದಲ್ಲಿ ಹಿಂದೆ 'ನವತೇಜ' ಪತ್ರಿಕೆಯಿಂದಾರಿಸಿಕೊಟ್ಟ ಅಗ್ರಲೇಖನವನ್ನೋದಿದರಾಯಿತು. ನಿಜವಾಗಿ ಜನರು--ಮಾನವನ ಹಕ್ಕನ್ನು (ಹೊಣೆಯನ್ನಾಗದಿದ್ದರೂ) ಸ್ಥಾಪಿಸಲು ಬಲುಶ್ರಮವಹಿಸುತ್ತಿರುವರು. ಅವಕ್ಕಾಗಿ ದಣಿಯುವರು. ಆದರೆ ದಣಿದೆವೆಂದು ದುಡಿತದಲ್ಲಿ ಕಾಣಿಸದು.

* * * * *

ಬಾಲಕರ ವಿಷಯ ಇಷ್ಟು ಮಾತು ಹೇಳಿದೆವು. ಇನ್ನು ವೃದ್ಧರ ವಿಷಯ ಹೇಳಬೇಕೇನು?—ಎಂಬ ಪ್ರಶ್ನೆಯಿದೆ. ಅದು ಅನಾವಶ್ಯಕ. ವೃದ್ಧರೆಂದರೆ ೫೦ಕ್ಕೆ ಮಿಾರಿದ ವರು. ಅವರ ಸಂಖ್ಯೆ ಇರುವುದೆಷ್ಟು? ಅವರಾದರೂ— 'ಅಲ್ಪಸಂಖ್ಯಾಕರು ನಾವು, ನಮಗೆ ರಕ್ಷಣೆಬೇಕೆಂ'ದು ಕೇಳುವುದಿಲ್ಲ [Minority protection.). ಈಗ ನಡೆದಿರುವ ಸುಧಾರಣೆಯು ಹೀಗೆ ಸಾಗಿದರೆ ಮುಂದೆ ೩೦ ವಯಸ್ಸಿಗೆ ಮಿಾರಿದ ಸ್ವಾರ್ಥಿಗಳೇ ಇಲ್ಲದಾಗ ಬಹುದು.

ಇರಲಿ, ಪುರುಷರ ವಿಚಾರ ಹೇಳಿದ ಬಳಿಕ ಸ್ತ್ರೀ ಯರನ್ನು ಕುರಿತು ಒಂದೆರಡು ಮಾತುಗಳು ಬೇಡವೇ? ಈಗ ಭರತಖಂಡದಲ್ಲಿ ಕೆಲವು ಚಳವಳಗಾರರು ಸ್ತ್ರೀ ಸ್ವಾತಂತ್ರ್ಯವಿಲ್ಲವೆನ್ನುವರಾದರೂ ಅದು ನಿಜವೆಂದು ಕಾಣುವುದಿಲ್ಲ. ಸ್ವಾತಂತ್ರ್ಯವಿರುವುದೇತಕ್ಕೆ? ತಮ್ಮ ಧ್ಯೇಯದ ಕಡೆಗೆ ಸಾಗಲು. ಭಾರತೀಯರ ಧ್ಯೇಯ ವೆಂದು ಹಿಂದೆ ಹೇಳಿದಂತೆ, "ಭೂಮಿಗೆ ಭಾರ, ಕೂಳಿಗೆ ದಂಡ" ಆಗಬಾರದೆಂದು. ಈ ಗುರಿಯ ಕಡೆಗೆ ಸಾಗಲು ಅವರಿಗೆ ಯಥೇಷ್ಟ ಸ್ವಾತಂತ್ರ್ಯವಿದೆ. ಇನ್ನೇನು ಬೇಕು?

(೧) ಬೇಗ ತಾಯಂದಿರಾಗುವ ಅಧಿಕಾರ ನೀಡ ಲ್ಪಟ್ಟಿದೆ. (ಕೇವಲ ೧೦ ವರ್ಷದಲ್ಲೂ ಸಹ.)

(೨) ಊಟ ವ್ಯವಹಾರಗಳಲ್ಲಿ ಸಮಾನತೆಯಿದೆ.

(೩) ಪುರುಷನ ಕಾಮದೇವತೆಯನ್ನಾರಾಧಿಸುವ ಪೂರ್ಣಸ್ವಾತಂತ್ರ್ಯವಿದೆ.

(೪) ಊದು ಬತ್ತಿಯ ವಿಷಯ—ಅದನ್ನು ತಡೆದವರಿಲ್ಲ. ಅದು ಹೊಸದಾಗಿ ಬಂದ ಸಂಗತಿ. ಐರೋಪ್ಯ ಮಹಿಳೆಯರ ಆದರ್ಶವನ್ನು ಈ ವಿಚಾರದಲ್ಲಿ ಇವರಾದರೂ ಕಾಲಕ್ರಮೇಣ ಅನುಸರಿಸಬಹುದು. ಈಗಲೇ ಅಂಥವರಿಲ್ಲವೆಂದಲ್ಲ. ಆದರೆ ತೀರ ಕಡಿಮೆ. ಹೊಸ ಸುಧಾರಣೆಗಳ ಪ್ರಾರಂಭದಲ್ಲಿರುವುದೇ ಹಾಗೆ!

(೫) 'ಭೂಮಿಗೆ ಭಾರದ' ವಿಚಾರ—ಅವರ ತೂಕವಾದರೂ ೧೦೦ ರಾತಲಿಗೆ ಮಿಕ್ಕದು. ವಯೋನಿಯಮದಂತೆ ಪುರುಷರಿಗಿಂತ ಅವರು ಕನಿಷ್ಠ ೧೦ ರಾತ್ರಿಗಾದರೂ ಕಡಿಮೆಯಿರುವರು. ಭಾರವಾಗದಂತೆ, ಬೆಳಕು, ಗಾಳಿ, ವ್ಯಾಯಾಮ ಇವನ್ನು ಎಂದೇ ತ್ಯಜಿಸಿರುವರು. ಗಾಳಿಯಲ್ಲಿ ಸಂಚರಿಸಿದರೆ, ಭಾರವೇರಬಹುದೆಂದು ಅವರು ಮನೆಬಿಡುವಂತಿಲ್ಲ. ಅವರ ನಿವಾಸವು ಅಡುಗೆಮನೆ. ಅಲ್ಲಿ ಗಾಳಿಬೆಳಕುಗಳು ಕಡಿಮೆಯಾದರೂ ಧೂಳುಧೂಮಗಳು ಅನುಕೂಲವಾಗಿವೆ.

ಈ ವಿಷಯದಲ್ಲಿ ಪುರುಷರು ಸ್ತ್ರೀಯರಿಗೆ ಕಲ್ಪಿಸಿದ ಸೌಲಭ್ಯಗಳನ್ನು ಕಂಡರೆ ಅವರ ಧಾರಾಳ ಬುದ್ಧಿಯು ವ್ಯಕ್ತವಾಗುವುದು. "ಯತ್ರ ನಾರ್ಯಸ್ತು ಪೂಜ್ಯಂತೇ ತತ್ರ ರಮಂತೇ ದೇವತಾಃ" ಈ ಮಾತು ಅಕ್ಷರಶಃ ನಿಜ. ಇದನ್ನು ನೋಡಿ ಆನಂದಿಸುವುದಕ್ಕಲ್ಲವೇ ದೇವದೂತ ಮಂಡಲವು ಬಂದುದು.

ಇನ್ನು ಈ ಅಧ್ಯಾಯವನ್ನು ಬೆಳೆಸಬಾರದು. ಈಗಾಗಲೇ ನನ್ನ ವಾಚಕರಿಗೆ ಬೇಸರವಾಗಿರಬಹುದು.

ಮಾನಸಿಕ ಆಹಾರವನ್ನು ಮಾನವನು, ಅನರ್ಘ್ಯವಾಗಿ ಸೇವಿಸದೆ, ಯತೀಶ್ವರರ ಚಾಂದ್ರಾಯನ ವ್ರತದಂತೆ ಸ್ವೀಕರಿಸಬೇಕೆಂಬ, ನಿಯಮವನ್ನು ನಾನಾದರೂ ಏಕೆ ತಡೆಯಬೇಕು.

---

## ಪ್ರಕರಣ ೧೯.

## ಆರೋಗ್ಯ ಪಥದಲ್ಲಿನ ಹೆಗ್ಗುರುತುಗಳು.

ಈ ಪ್ರಕರಣದೊಂದಿಗೆ ಆರೋಗ್ಯಖಾತೆಯ ವಿಚಾರ ಮುಗಿಸುವ ಉದ್ದೇಶ ನನಗೆ. ಆದುದರಿಂದ ವಾಚಕರು—ಇನ್ನೆಷ್ಟು ಪುರಾಣವಿದೆಯಪ್ಪಾ ಎಂದು ಕ್ಲೇಶತಾಳುವ ಕಾರಣವಿಲ್ಲ.

ಆರೋಗ್ಯಪಥದಲ್ಲಿ ಮಾನವನು ಮಾಡಿದ, ಮಾಡುತ್ತಿರುವ, ಮಾಡಬೇಕೆಂದಿರುವ ಸುಧಾರಣೆಯ ಹೆಗ್ಗುರುತುಗಳನ್ನಿಷ್ಟೇ ಹೇಳುವೆವು. ಈ ವಿಚಾರದಲ್ಲಿ ಮಂಡಲದವರ ಕಣ್ಣಿಗೆ ಬಿದ್ದ ವೃತ್ತಪತ್ರಗಳ ವಿಚಾರ ಹೇಳುವೆವು. ವೃತ್ತಪತ್ರಗಳು ಮಾನವನ ಮಾನಸಿಕ ರಾಜ್ಯವನ್ನು ಬಿಂಬಿಸುವ ಕನ್ನಡಿಗಳೆಂಬುದಿಷ್ಟೇ ಅಲ್ಲ; ಶರೀರರಾಜ್ಯದ ಚಿತ್ರವೂ ಅದರಲ್ಲಿ ಹೊರಡುತ್ತಿದೆ. ಯಾವ ಉದ್ದೇಶದಿಂದಲೇ ಒಂದು ಪತ್ರಿಕೆ ಹೊರಡಲಿ—ಅದು ರಾಷ್ಟ್ರಸೇವೆ, ಸಮಾಜಸೇವೆ, ಸಾಹಿತ್ಯಸೇವೆ. ಇಂಥವುಗಳೇನೆ ಇದ್ದರೂ ಆ ಪತ್ರಿಕೆಯ ಸೇವೆಯ ಅಧಿಕಾಂಶವು ಈ ಧ್ಯೇಯಗಳಿಗಿಂತ ಮಿಗಿಲಾಗಿ ಆರೋಗ್ಯ

ಖಾತೆಗೆ ಸಲ್ಲುವುದು. ವೃತ್ತಪತ್ರಿಕಾಪುಟಗಳಲ್ಲಿನ ಪ್ರತಿ ಹತ್ತು ಪಟಕ್ಕೆ, ಓದುವ (ಲೇಖನ ಇತ್ಯಾದಿ) ವಿಷಯಗಳಿರುವುದು ನಾಲ್ಕು ಪುಟ. ಉಳಿದ ಆರು ಜಾಹೀರಾತಿಗಾಗಿ. ಅವುಗಳಲ್ಲೈದು ಕೇವಲ ಆರೋಗ್ಯ ಸಂಬಂಧದ ಜಾಹೀರಾತುಗಳು ಅವುಗಳಲ್ಲಿ — ಯಾವತ್ತು ರೋಗಗಳಿಗೂ ಔಷಧಗಳು ಕಾಣಸಿಗುವುವು. ಹೆಚ್ಚೇನು—ವಾಸ್ತವಿಕ ರೋಗಗಳಿಷ್ಟೇ ಅಲ್ಲ; ಕಾಲ್ಪನಿಕ ರೋಗಗಳಿಗೂ ಸಹ ವೈದ್ಯರ ರಾಮಬಾಣ ಸಮಾನ ಔಷಧಗಳಿವೆ. ಈ ನಾಗರಿಕ ಕಾಲದಲ್ಲಿ, ಬೇನೆಗಳ ಸಂಖ್ಯೆ ಹೆಚ್ಚಿದೆಯೆಂದೂ ಇನ್ನೂ ಹೆಚ್ಚುತ್ತಿದೆಯೆಂದೂ, ಮಾನವರೇ ಒಪ್ಪುವರು. ಸಮಾಜದಲ್ಲಿ ನಿತ್ಯೋಪಯೋಗಕ್ಕೆ ಬರುವ ಶಬ್ದಗಳ ಸಂಖ್ಯೆಗಿಂತ, ರೋಗಗಳ ಹೆಸರಿನ ಸಂಖ್ಯೆ ಅಧಿಕ. ಇಷ್ಟೆಲ್ಲಕ್ಕೂ ಚಿಕಿತ್ಸೆ ಸಿದ್ಧವಿವೆ. ಆಯುರ್ವೇದ, ಎಲೋಪತಿ, ಹೋಮೋಪತಿ, ರೋಗೋಪತಿ, ನರಳೋಪತಿ ಇತ್ಯಾದಿ ಹಲವು ಚಿಕಿತ್ಸಾ ಪದ್ಧತಿಗಳಿವೆ. ಔಷಧಗಳು, ತೀವ್ರ ಚಿಕಿತ್ಸಾಕಾರಿ "ಇಂಜೆಕ್ಷನ್" ಹಿಡಿದು, ಗುಳಿಗೆ, ಚೂರ್ಣ, ರಸ, ದ್ರಾವಕ, ವಾಯು, ನಾನಾರೂಪದಲ್ಲಿವೆ. ರೋಗಿಯು ಬೇಕಾದ್ದನ್ನಾರಿಸಬಹುದು. ಅವನಿಗಿಷ್ಟಬಂದ ರೂಪದಲ್ಲಿ, ಅಷ್ಟೇ ಅಲ್ಲ, ಇಷ್ಟ ಬಂದ ಬಣ್ಣದಲ್ಲೂ ಅವು ಸಿಗುವುವು. ಆರೋಗ್ಯದ ದೃಷ್ಟಿಯಿಂದ ಅನುಕೂಲವಿರುವ ಶ್ರೀಮಂತರು, ಈಗ ಆಹಾರಕ್ಕಿಂತ ಔಷಧವನ್ನು ಹೆಚ್ಚಾಗಿ ಸ್ವೀಕರಿಸುತ್ತಿರುವರು. ಅಂಥವರಿಗೆ ಮುಂದೆ ರೋಗನಾಟುವ ಸಂಭವವಿಲ್ಲವಂತೆ.

ಇತ್ತೀಚೆಗೆ ಹೊಸುದಾಳಗಳ (Vaccination & Inoculation) ಶೋಧನೆಯಾಗಿದೆ. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಸ್ಮೈಲಿಗೆ, ಕಾಲರಾ, ಟ್ರ್ಯಾಫ್ಯಾಡ್, ಕ್ಷಯ, ಬಹುಮೂತ್ರ, ಮೇಹ, ಫರಂಗಿ ಇತ್ಯಾದಿ ಗಳ ಬೇನೆಗಳಿಗಾಗಿ ದಾಕುಹಾಕುವ ಯೋಜನೆಯು ನಡೆದಿದೆ. ದಾಕುಹಾಕಿದ ಬಳಿಕವೂ ಈ ಬೇನೆಗಳು ಬರುವುದಾದರೆ, ತಿರುಗಿ ಹಾಕಿದರಾಯಿತು.

ಈ ಶೋಧನೆಯು ರಾಜ್ಯದಲ್ಲಿ ಇದೊಂದು ನೊಗಸು. ಯಾವುದೋ ದುಷ್ಟಶಕ್ತಿಯೊಂದು ದಿನ ಹೋದಂತೆ ರೋಗಗಳ ಸಂಖ್ಯೆಯನ್ನು ಬೆಳೆಯಿಸುತ್ತದೆ. ವೈದ್ಯರು (ಇವರ ಸಂಖ್ಯೆ ಜನತೆಗೆ ೨೦%ರ ನೆಲೆಯಲ್ಲಿದೆ) ಅದನ್ನೆಲ್ಲಾ ತಡೆಯಲು ಶೋಧನಡೆಯಿಸಿರುವರು. ಆದರೆ, ಬೇನೆಗಳ ಕಾರಣವನ್ನು ಅರಿತರೂ ಅದರ ನಿವಾರಣೆಗೆ ಯತ್ನಿಸುವುದಿಲ್ಲ. ಇದರ ಕಾರಣವಿಷ್ಟೆ; ಈಗ ಯುದ್ಧವಾಗುವುದೆಂದು ತಿಳಿಯಿರಿ. ಆಗ ಗಾಯ, ಮರಣಗಳು ಇದ್ದೇಇವೆ. ಅಲ್ಲಿ ಗಾಯಗೊಂಡವರಿಗೆ ಚಿಕಿತ್ಸೆ ನಡೆಯಿಸುವರು; ಆದರೆ ವೀರರು ಯುದ್ಧವನ್ನು ಇದಕ್ಕಂಜಿ ನಿಲ್ಲಿಸುವರೇ? ಅಂತೆಯೇ ನಿಸರ್ಗಕ್ಕೂ ನರನಿಗೂ ಆಗುತ್ತಿರುವ ಈ ನವನಾಗರಿಕ ಕಾದಾಟದಲ್ಲಿ, ನಿಸರ್ಗವು ಕೋಪಗೊಂಡು ಬೇನೆ ತರುವುದೆಂದು, ಅಂಜಿ, ನೈಸರ್ಗಿಕ ನಿಯಮಗಳಿಗೆ ತಲೆವಾಗುವುದೆಂ

ದರೆ ಮಾನವನಿಗೆಷ್ಟು ಲಜ್ಜೆಯಾಗಬೇಡ? ಅವನ ಸ್ವಾತಂ ತ್ರ್ಯವೆಲ್ಲಿ ಳಿಯಿತು? ಆದುದರಿಂದ ಅವನು ಮನಸ್ವಿ ವ್ಯವಹರಿಸುವನು; ಬೇನೆ ಬಂದರೆ ಚಿಕಿತ್ಸೆಮಾಡುವನು. ಎಂಥ ಶ್ವಾತ್ರ್ಯ ಸ್ವರ್ಗ!

ನಡುವೆ, ಜನರಲ್ಲಿ ವಿವಾದಕ್ಕೆ ಗುರಿಯಾದ ಒಂದು ಆರೋಗ್ಯಸಮಸ್ಯೆಯು ವಿಚಾರ. ಅದು ಮದ್ಯಪಾನ. ಜನರಲ್ಲಿ ಒಂದು ಪಕ್ಷದವರು—ಅದು ಒಳಿತು; ಶಾಂತಿಕರ; ದಣಿದುಬಂದ ಬಡವರ ದೇಹಶ್ರಮ, ಮನೋಶ್ರಮ ಗಳು ಅದರಿಂದ ಕಡಿಮೆಯಾಗುವುವು—ಎಂದು ತಿಳಿಯು ವರು ನೀರಿನ ಬದಲು ಅದನ್ನು ಉಪಯೋಗಿಸ ತೊಡಗಿರುವರು. ಇನ್ನೊಂದು ಪಕ್ಷದವರು—ಅದು ಕೆಟ್ಟದು; ಅದರಿಂದ ಆಯುಷ್ಯ ಹಾನಿಯಿದೆ; ಜನರು ನೀತಿಭ್ರಷ್ಟರಾಗುವರು—ಎಂದು ವಾದಮಾಡುವರು. ಈ ಪ್ರಶ್ನೆಯು ಕೌನ್ಸಿಲಿನ ವರೆಗೂ ಹೋಯಿತು. ಮೊದ ಲಿನ ತಂಡದವರು ಇನ್ನು ಮುಂದೆ, ಸಾರ್ವಜನಿಕ ಬಾವಿಗೊಂದರಂತೆ ಸಾರ್ವಜನಿಕ ಹೆಂಡದಂಗಡಿಗಳಿರ ಬೇಕು ಎಂದಿರುವರು. ಎರಡನೇ ಪಕ್ಷದವರು ಇದ್ದ ಅಂಗಡಿಗಳನ್ನು ತಗೆಯಬೇಕೆಂದಿರುವರು. ಎರಡೂ ಪಕ್ಷ ಗಳು ಸರಿಸಮವಿವೆ. ಪಾನವಾದಿಗಳು ಅನ್ನುವುದಿಷ್ಟ- "ಕೆಲಸಮಾಡಿದರೆ, ಉಸಿರಾಡಿದರೆ, ದೇಹಾಣುಗಳು ಸಾಯುವುವು. ಇವು ಸಾಯುವುವೆಂದರೆ ಮರಣ ಸಮೀಪ ಎಂದರ್ಥ. ಮರಣತಪ್ಪದು. ಹೀಗಿರಲು. ಬದುಕಿರುವಾಗಲೇ ಸುಖಿಸಿ ಸಾಯುವುದೊಳಿತ

ಲ್ಲವೇ?" ನಾಗರಿಕತೆ ಹೆಚ್ಚಾದಂತೆ ಪಾನ ವಿರೋಧಿಗಳ ಸಂಖ್ಯೆ ತಗ್ಗಬಹುದೆಂದಿದ್ದರೂ ಈಗಣ ಮಟ್ಟಿಗೆ ಅವರು ಸರಿಸಮರು. ನಡುವೆ ಇದೆ ಸರಕಾರ. ಸರಕಾರಕ್ಕೆ ಇದರಿಂದ ಆಯವಿದೆ. ಅವರು ಇಬ್ಬರಿಗೂ ಅಸಮಾಧಾನವಾಗದೆ, ತಮ್ಮ ಕೆಲಸ ಸಾಗುವಂತೆ ಒಂದುಪಾಯ ಹೂಡಿರುವರು. ಮದ್ಯದಂಗಡಿಗಳಿಂದ ಮದ್ಯಪಾನ ಬೆಳೆಯಿಸುವ "ಅಬಕಾರಿ" ಖಾತೆ ಇದ್ದೇ ಇದೆಯಷ್ಟೆ. ಇನ್ನೊಂದು ಪಂಗಡದವರ ಸಂತುಷ್ಟಿಗಾಗಿ "ಕುಡಿಯಬೇಡಿ" ಎನ್ನುವ ಸಂಸ್ಥೆಯೊಂದು ತೆರೆದಿರುವರು. ಒಂದು ಪಂಗಡದವರಿಗೆ ಕ್ರಿಯೆಯಿಂದ ತೃಪ್ತಿ; ಇನ್ನೊಂದು ಪಂಗಡದವರಿಗೆ "ವಾಕ್ಕಿ"ನಿಂದ ಸಂತುಷ್ಟಿ. ವಾಕ್ಕಾಯವೆರಡಾಯಿತು. ಇನ್ನು ಮೂರನೆಯದು: ಮನಸ್ಸು. ಸರಕಾರವು ಒಂದು ಯಂತ್ರ. ಅದಕ್ಕೆ ಸ್ವತಃ ಮನಸ್ಸೆಲ್ಲಿ? ಇದ್ದ ವಾಕ್ಕಾಯಗಳನ್ನು ಸರಿ ಹಂಚಿಯಾಯಿತು. ಆದರೆ ಮಧ್ಯೆ ಆರ್ಥಿಕ ಪಾಲುಗಾರಿಕೆ ಬಂದಿದೆ. ಪಾನವಿರೋಧಿಗಳು ತಮಗಾಗಿ, ಅಬಕಾರಿಗೆ ವ್ಯಯಿಸಿದಷ್ಟೇ ಹಣ ಬೇಕು ಎಂದಿರುವರು.

ಆದರೆ ಸರಕಾರದಲ್ಲಿ ಹಣವಿಲ್ಲದ ಕಾರಣ—ಹೀಗೊಂದು ಸೂಚನೆಮಾಡುತ್ತಿದೆ. ಪಾನದಿಂದ ರಾಜಾಯವು ಬೆಳೆದರೆ ಮುಂದೆ ಅದರಲ್ಲಿ ಸರಿ ಅರ್ಧವನ್ನು ಪಾನವಿರೋಧಿಗಳಿಗೆ ಕೊಡುವೆವೆಂದು.

"ವಿಲಾಯತಿಯವರು ಕುಡಿಯುತ್ತಿರುವುದನ್ನು

ಕಂಡು ಹಿಂದೀಯರು ಪಾನವಿರೋಧದಲ್ಲಿ ಹಣ ಹಾಳು ಮಾಡುವುದನ್ನು ಕಂಡರೆ ಸಖೇದಾಶ್ಚರ್ಯವಾಗುವುದು" ಎಂದು "ದಿ ಸರ್ವೆಂಟ್" ಎಂಬ ಪತ್ರಿಕೆಯು ಅಂದಿತ್ತು.

*       *       *       *       *

ಈಗ ಹೆಗ್ಗುರುತುಗಳ ವಿಚಾರ:—ಒಂದನೆಯದು ಮರಣನಿರೋಧ; ಎರಡನೆಯದು—ಕ್ಷುಧಾನಿರೋಧ. ಮರಣವೆಂಬುದೊಂದಿದ್ದುದರಿಂದ ಆಯುಷ್ಯದಲ್ಲಿ ತ್ಯಾಗ ಮಾಡುವ ಪ್ರಸಂಗವಿದೆ. ಮರಣವೇ ಇಲ್ಲದಿದ್ದರೆ ಪ್ರಾಪಂಚಿಕರು ಎಷ್ಟೊ ಆಯುಸ್ಸನ್ನು ವ್ಯಯಿಸಿ, ತಮ್ಮ ಶೋಧನೆ ಸುಧಾರಣೆಗಳಿಗೆ ಮುಂದಾಗಬಹುದಷ್ಟೆ. ಇದರಿಂದ ನರರು ಸಾಯಲು ಅಂಜುವರೆಂದಲ್ಲ. ಈಗಿರುವವರನ್ನು ಬಿಟ್ಟರೆ ಹಿಂದೆ ಇದ್ದವರೆಲ್ಲ ಹುಟ್ಟಿ ಸತ್ತಿದ್ದರು. ಏನೋ, ಸಾಯುವ ಕ್ಷಣದಲ್ಲಿ ಸ್ವಲ್ಪ ಭೀತಿಯಾಗಿದ್ದಿರಬಹುದು. ಅದು ದೊಡ್ಡ ವಿಷಯವಲ್ಲ. ಎಂಥ ವೀರನೂ ಹಾದಿಯಲ್ಲಿ ಹೋಗುವಾಗ, ಒಮ್ಮೆಗೇ ಒಂದು ಹಕ್ಕಿಯ ಚೀರುವಿಕೆಯು ಕೇಳಿದರೆ, ತಬ್ಬಿಬ್ಬಾಗುವುದುಂಟು ಕಾರಣ, ಅದು ಆಕಸ್ಮಿತವಾಗಿ ಬಂದುದರಿಂದ. ಹಾಗೇ, ಕೊನೆಯ ತನಕ ಸಾವಿದೆಯೆಂದು ಕಾರ್ಯದಲ್ಲರಿಯದ ನರನಿಗೆ ಫಕ್ಕನೆ ಸಾವು ಬಂದರೆ ಭೀತಿಯಾಗದಿರುವುದೇ? ಆದರೆ ಸತ್ತಬಳಿಕ ಅವನಿಗೆ ತಿರುಗಿ ಆ ಅಂಜಿಕೆ ಇಲ್ಲ.

ಇರಲಿ, ಈ ಕೆಲಸ ಹೇಗೆ ಸಾಧನೆಗೊಳ್ಳಬಹು

ದೆಂಬ ಬಗ್ಗೆ ಒಬ್ಬ ವಿದ್ಯುತ್‌ವಿಜ್ಞಾನಿಯ ಕಲ್ಪನೆ ಹೀಗಿದೆ. ಕೆಲವು ಯಂತ್ರಗಳಿಂದ ವಿದ್ಯುತ್ ಶಕ್ತಿಯನ್ನು ಒಡಲು ಮತ್ತು, ಶ್ವಾಸಕೋಶಗಳಿಗೆ ಕೊಟ್ಟು ಅವುಗಳು ಯಾವಾಗಲೂ ಬಡಿಯುವಂತೆ ಮಾಡಿದರೆ ಸಾವುಬಾರದು--ಎಂದು. ಆದರೆ ಇನ್ನೂ ಅದು ಶೋಧನೆಯಲ್ಲೇ ಇದೆ ಕಾರ್ಯಕ್ಕೆ ಬರಲಿಲ್ಲ.

ಆಯುರ್ವೇದಿಗಳು ಸಂಜೀವನ ಕಡ್ಡಿಯನ್ನು ಹುಡುಕುತ್ತಿರುವರು ಆದರೆ ಹನುಮಂತನು ಅದಿರುವ ಸ್ಥಳದ ಗೊತ್ತುಗುರಿಗಳನ್ನು ಸ್ವಾರ್ಥದಿಂದ ತಿಳಿಸದಿದ್ದುದರಿಂದ ಬರೀ ಹುಡುಕಾಟ ನಡೆದಿದೆ.

ಕೆಲವು ಪಾಶ್ಚಾತ್ಯ ವೈದ್ಯರು ಈ ಕೆಲಸದಲ್ಲಿ ಮುಂದರಿದಿರುವರು. ಒಬ್ಬ ವೈದ್ಯನು--ಒಂದು ಅಮೂಲ್ಯ ಔಷಧಿಯನ್ನು ಕಂಡು ಹಿಡಿದಿರುವನು ಅದರ ಇಂಜೆಕ್ಷನ್‌ನಿಂದ ಮಾನವನ ಶರೀರಾಣುಗಳು ಕೆಡುವುದೇ ಇಲ್ಲವಂತೆ. ಆದರೆ ಚಿಕಿತ್ಸೆಗೆ ೧೦,೦೦,೦೦೦. ಪವನುಗಳಂತೆ. ಅವನ ಔಷಧವನ್ನು ಇತರರಿಗೆ ಅವನು ಕಾಣಗೊಡಿಸಲು ಸಹ ಇಲ್ಲ. ಒಮ್ಮೆ, ಸತ್ತಂತಾದ ಕಪ್ಪೆಯೊಂದನ್ನು ಕೆಲವು ಪ್ರಮುಖ ವೈಜ್ಞಾನಿಕರ ಮುಂದೆ ಬದುಕಿಸಿ ತೋರಿಸಿದನು. ಆಗಲೇ ಅವನ ಕಡೆಗೆ ಹಲವು ಪ್ರಶಂಸಾ ಪತ್ರಗಳು ಬಂದುವು. ವೈದ್ಯನಿಗೆ ಈ ದಂಡತೆತ್ತು ಚಿರಂಜೀವಿಯಾಗಲು ಅಮೇರಿಕದ ಕೋಟ್ಯಾಧಿಪತಿ ಮಿ॥ ಸಿಲ್ವರ್‌ಟನ್ ಎಂಬವನು ಬಂದನು. ಅವನ ವಯಸ್ಸು ೬೦ ಇತ್ತು. ಆದರೆ ವೈದ್ಯನ ಚಿಕಿತ್ಸೆಯಿಂದ

ಒಮ್ಮೆಗೇ ೨೦ ವಯಸ್ಸಿನವನಂತಾಗಿ ಮರಳಿದನು ಮ ನೆಗೆ ಬರಲು ಅವನ ಮಗ ಗೋಲ್ಡ್ ಟನ್‌ನಿಗೆ ತಂದೆಯು ಗುರುತು ಸಿಗಲಿಲ್ಲ! ಅವನಿಗೆ ಸಿಲ್ವರ್‌ಟನ್‌ನಿಗೆ ಡ್ರೈ ಮುಂಡ್‌ಟನ್ ಎಂಬ ೩೦ ವಯಸ್ಸಿನ ಮಗನಿದ್ದನು. ಅವನೆಂದೇ ಭ್ರಾಂತನಾದನು! ಬಳಿಕ ಮಾತಿನಿಂದೆಲ್ಲ ತಿಳಿಯಿತು. ಆಗ ಅವನೂ, ಅವನ ಮಗನೂ ವೈದ್ಯನಿಂದ ಚಿಕಿತ್ಸೆಮಾಡಿಸಿಕೊಂಡರು. ಆದರೆ ಒಂದು ವಿಚಿತ್ರ ವಾಯಿತು. ಸಿಲ್ವರಟನ್ನನು (ಮೊದಲಿನ ವಯಸ್ಸು ೫೦) ೨೦ ವಯಸ್ಸಿನವನಂತಾದನು; ಡ್ರ್ಯಾಮುಂಡನು ೨ ವರು ಷದ ಬಾಲಕನಂತಾದನು!

ಗೋಲ್ಡಟನ್ನ್‌ನು ಮರಳಿ ಬಂದವನು, ಯೌವನ ವನ್ನು ತಾಳಲಾರದೆ ನಾಲ್ಕಾರು ಮದುವೆಯಾದನು. ಅವನೆಡೆಗೆ ೨,೩೦೦,೦೦೦,೦೦೦,೦೦೦ ವಿವಾಹದ ಮ ನವಿಗಳು ಬಂದಿದ್ದುವು. ಕೆಲವು ೬೦ ವಯಸ್ಸಿನ ತರು ಣಿಯರಿಂದಲೂ ಇತ್ತು. ಅವನೊಡನೆ ವಿವಾಹವಾದರೆ ಇವನಂತ ತಿರುಗಿ ತಾರುಣ್ಯ ಬಂದೀತಲ್ಲ ಎಂಬಾಸೆ!

ಈ ಮೂರು 'ಟನ್'ರ ಕಥೆ ಕೇಳಿ ಶ್ರೀಮಂತರೆಲ್ಲ ಆ ವೃದ್ಯನ ಬಳಿಗೋಡಿದರು. ಚಿಕಿತ್ಸೆ ಪಡೆದರು. ಎಲ್ಲರೂ ತರುಣರೋ, ಮಕ್ಕಳೋ, ಮಗುಗಳೋ ಆಗಿ ಬಂದಿರುವರು. ಇವರೆಲ್ಲರಲ್ಲಿ ಈಗ ಅಷ್ಟಿಷ್ಟು ಉತ್ಸಾ ಹವಲ್ಲ ಮೊದಲು ೨ ರಾತ್ಲು ಉಣ್ಣುತ್ತಿದ್ದವರು ಈಗ ೨೦ ರಾತ್ಲು ತಿಂದರೂ ತೃಪ್ತಿಯಿಲ್ಲ. ಎಲ್ಲಾ ಕ್ರಿಯೆಗ ಳಲ್ಲೂ ಅವರ ಚಟುವಟಿಕೆ ಕನಿಷ್ಠ ೧೧೦ ಪಾಲಿಗೆ ಏರಿತು.

ಇದನ್ನು ಕಂಡು ಹಿಂದುಸ್ಥಾನದಿಂದ ಕೆಲವು ವೃದ್ಧರಾಜರು ವಿಲಾಯತಿಗೋದಿ ಚಿಕಿತ್ಸೆ ಮಾಡಿಕೊಂಡು, ತರುಣರಾಗಿ, ಅಲ್ಲೇ ಮದುವೆಯಾಗಿ ನೆಲಸಿಬಿಟ್ಟರುವರು.

ಶ್ರೀಮಂತರೆಲ್ಲ ಚಿಕಿತ್ಸೆ ಪಡೆದಾಗ ಔಷಧದ ಧಾರಣೆಯನ್ನು ಡಾ। ಕಾಂಕರರ್ F. G. C. I. D. E. F. L. T. S., etc. etc. ರವರು, ಬಡವರ ಸಲುವಾಗಿ ೧೦,೦೦೦ ಪವನಿಗೆ ತಗ್ಗಿಸಿದರು. ಇನ್ನಷ್ಟು ಪ್ರಯೋಗಗಳಾದವು. ಹೀಗೆ ಒಂದು ವರುಷದಲ್ಲಿ ಸಾವಿರಾರು ಜನರಿಗೆ ನವಜೀವನ ಬಂದಿತು. ಹಿಂದುಸ್ಥಾನದಿಂದ ಹೋದವರೆಂದರೆ ಹತ್ತೆಂಟು ಮಂದಿ ದೇಶೀಯ ಅರಸರು ಮಾತ್ರ.

ಈಗ ಪ್ರಯೋಗದ ಧಾರಣೆ ೧೦೦೦ ಪವನಿಗೆ ಇಳಿದಿದೆ ಎನ್ನುವಾಗಲೇ ಒಂದು ಹೊಸ ಸುದ್ದಿ ಹೊರಟಿದೆ. ಚಿಕಿತ್ಸೆ ಹೊಂದಿದವರೆಲ್ಲ ಒಬ್ಬೊಬ್ಬರಾಗಿ ನಾನಾ ತರದ ಶರೀರ, ಮನೋವೇದನೆಗಳಿಗೆ ಗುರಿಯಾಗಿ ಸಾಯುತ್ತಿರುವರೆಂದು. ಇದಕ್ಕೆ ಮೊದಲು ಬಲಿಯಾದವರು—"ಟನ್‌ತ್ರಯರು." ನಿನ್ನೆ ದಿನದ ಪತ್ರಿಕೆಯಲ್ಲಿತ್ತು—ಡಾ। ಕಾಂಕರರನ್ನು ಈ ಕಾರಣದಿಂದಲೇ ದಸ್ತಗಿರಿ ಮಾಡಿರುವರೆಂದು. ಈಗ ಉಳಿದ ಇಂಥ ಯಾವತ್ತು ಶ್ರೀಮಂತ ತರುಣವೃದ್ಧರಿಂದ ಕೂಗು ಹೊರಟಿದೆ.

ಒಮ್ಮೆ ಡಾ। ಕಾಂಕರನ ಚಿಕಿತ್ಸೆ ನಿರುಪಯೋಗವೆನಿಸಿದರೂ, ಡಾ। ಡೆತ್‌ಲೆಸ್ ಎಂಬವನ ಪ್ರಯೋಗ

ಗಳು ಯಶಸ್ವಿಯಾಗುವ ಧೋರಣೆಯಿದೆಯೆಂದು ವದಂತಿ.

*  *  *  *  *

ಈಗ ಕ್ಷುಧಾ ನಿವಾರಣೆಯ ವಿಚಾರ. ಈ ವಿಚಾರ ಚಿಕಿತ್ಸೆಮಾಡಬೇಕೆಂದು ಇದುವರೆಗೆ ಯಾವನೊಬ್ಬ ಮರುಳನಿಗೂ ಹೊಳೆದಿರಲಿಲ್ಲ. ಡಾ| ಕಿಲ್ಲರ್ ಎಂಬ ವರು – ಮಾನವನ ಸಮಯವು ಆಹಾರೋತ್ಪತ್ತಿಯಲ್ಲಿ ಅತಿಯಾಗಿ ಹಾಳಾಗುತ್ತದೆ— ಎಂಬಕಾರಣದಿಂದ ಹಸಿ ವಿಲ್ಲದಂತೆ ಮಾಡುವ ಯತ್ನದಲ್ಲಿರುವರು. "ಕಲ್ಲು ಗಳು ಹಸಿವಿಲ್ಲದೆ ಒದುಕಬಲ್ಲವಾದರೆ ಮಾನವನೇ ಕಾಗಬಾರದು?" ಎಂದವರ ತರ್ಕ. ಇವರಿಗೂ ಯ ಶಸ್ಸಿನ ಬೆಳಕು ಈಗಾಗಲೇ ಕಾಣಸಿಕ್ಕಿದೆಯಂತೆ. ಇವರ ಚಿಕಿತ್ಸೆಯು, ಮಿದುಳು, ಹೃದಯ, ಎಲುಬು, ಈ ಮೂ ರಕ್ಕೆ. ಸದಾ ಶ್ರಮಿಸಬೇಕಾದ ಇವುಗಳ ದೆಸೆ ಯಿಂದ ಹೊಟ್ಟೆಗೆ ತೊಂದರೆ. ಹಸಿವಿಲ್ಲದಂತೆ ಮಾಡ ಬೇಕಾದರೆ–ಅನಾವಶ್ಯಕವಾಗುವ ಪಚನೇಂದ್ರಿಯಗಳ ನ್ನೆಲ್ಲಾ, ಶಸ್ತ್ರಪ್ರಯೋಗದಿಂದ ತೆಗೆದುಹಾಕಿ ಮಾನವ ನಿಗೆ ಅವನ್ನೂ ಹೊರುವ ಶ್ರಮ ಉಳಿಸಬೇಕೆಂದು ಇನ್ನೊಂದು ವಿಚಾರ.

ಇದನ್ನು ಕಂಡು—"ದಿ ಹ್ಯೂಮರಿಸ್ಟ" ಎಂಬ ಪತ್ರಿಕೆಯು—"ಕಲ್ಲಿನಂತೆ ಆಹಾರ ಬೇಡದ ಮಾನ ವನು ಕಲ್ಲಿನಂತೆ ಚಲಿಸದೆ ಇರಬೇಕಾದೀತೋ ಏನೋ"

ಎಂಬೊಂದು ಮಾತನ್ನು ತನ್ನ ಹಾಸ್ಯಲಹರಿಯಲ್ಲಿ ಪ್ರಕಟಿಸಿದನು.

## ಪ್ರಕರಣ ೨೦.

## ಆರ್ಥಿಕ ವಿಚಾರಣಾ ಮಂಡಲ.

### ಹಿಂದುಸ್ಥಾನದಲ್ಲಿ 'ಅರ್ಥ'ವಿಲ್ಲವೆನ್ನುವವರಾರು?

ಎಲ್ಲ ಮಂಡಳದವರ ಕೆಲಸಗಳಿಗಿಂತ ಇವರ ಕೆಲಸ ತೀರಸುಲಭವಾಯಿತು. ಮೈಸೂರು ನಗರದಲ್ಲೇ ಅವರಿಗೆ ಸಾಕಷ್ಟು ಅನುಭವ ದೊರೆಯಿತು ಲಕ್ಷ್ಮಿಯ ಅಧ್ಯಕ್ಷತೆಯಲ್ಲಿ ಚಂದ್ರಕುಬೇರರು ಸಂತರ್ಪಣೆಯ ಸಂತೆ ಮುಗಿದ ಬಳಿಕ ಬಹಳ ಆತುರದಿಂದ ಕೆಲಸತೊಡಗಿದರು. ಸಂತರ್ಪಣೆಗೆ ಹಣವನ್ನೊದಗಿಸಿದ ಧರ್ಮಪ್ರಕಾಶ ಚನ್ನಪ್ಪನವರ ಹೆಸರು ಅವರ ಕಿವಿಗೆ ಮೊದಲು ಬಿತ್ತು. ಲಕ್ಷ್ಮಿಗೆ ಈ ಲಕ್ಷ್ಮೀಪುತ್ರರನ್ನು ಕಂಡು ಆನಂದವಾಯಿತು. ಅವಳು ಅವರ ಮನೆಯನ್ನು ಸಂದರ್ಶಿಸಬೇಕೆಂಬ ಆಸೆ ತೋರಿದಳು. ಚನ್ನಪ್ಪನವರು ಆ ವಿಷಯದಲ್ಲಿ ಸಿದ್ಧ. ಸೋಮವಾರ ಬೆಳಗಿನ ಏಳು ಘಂಟೆಗೆ ಬರುವುದೆಂದು ನಿಶ್ಚಯವಾಯಿತು. ಧರ್ಮಪ್ರಕಾಶರು ಮೊದಲಿನ ದಿನ ತೀರ ಅವಸರದಿಂದ ಮನೆಗೆ ಹೋದರು. ಯಾವತ್ತು ಸಿದ್ಧತೆಯನ್ನು ತೀವ್ರದಿಂದ ಮುಗಿಸಬೇಕೆಂದು ಅವರ ಉದ್ದೇಶವಾಗಿತ್ತು. ಆದರೆ ನಡುಹಾದಿಯಲ್ಲಿ ಏಜಾ

ಪುರದಿಂದ ಒಬ್ಬ ಭಾರಿವ್ಯಾಪಾರಿಯು ಭೇಟಿಯಾದನು. ಅವನು ಇವರ ಮಂಡಿಯಲ್ಲಿ ಜೀನಸುಗಳ ಖರೀದಿಗೆ ಬಂದವನು. ಇಂಥ ಭಾರಿ ಗಿರಾಕಿಯು ಆಗಮನವಾಗಲು ಅವರು ತಮ್ಮ ಉದ್ದೇಶವನ್ನು ಮರೆತು ಅಂಗಡಿಗೆ ತೆರಳಿದರು. ರಾತ್ರಿ ೧೨ ಘಂಟೆಯು ತನಕ ಖರೀದಿಯು ಕಸವಿಸಿಗಳು ನಡೆದುವು. ರಾತ್ರಿ ಮನೆಗೆ ಬಂದು ಊಟಮಾಡಿ ಚನ್ನಪ್ಪನವರು ನಿದ್ರಿಸುವಾಗ—೨ ಘಂಟೆ! ಸರಿ ಬೆಳಗಿನ ೭ ಘಂಟೆಗೆ ಏಳುವ ರೂಢಿ ಇಂದು ತಪ್ಪಿತು. ಇತ್ತ ಮನೆಯಾಳುಗಳಿಗೆ ಅತಿಥಿಗಳಾಗಮನದ ಸುದ್ದಿಯನ್ನು ಸಹ ಹೇಳಿರಲಿಲ್ಲ. ಅವರು ಏಳು ಘಂಟೆಗೆ ಸರಿಯಾಗಿ ಮನೆಯ ಧೂಳಿಯನ್ನು ಹಾರಿಸಲು ತೊಡಗಿದರು. ಅದೇ ಏಳು ಘಂಟೆಗೆ ಸರಿಯಾಗಿ ಲಕ್ಷ್ಮೀಮಂಡಲವು ಬಂದಿತು. ಒಳಗೆ ಒಮ್ಮೆಗೇ ಹೋಗಲು ಸಾಹಸವಾಗಲಿಲ್ಲ. ಅವನ್ನು ಭಾರಿಮನೆಯ ಮುಂದೆ ನಿಂತರು. ಮನೆಯೊಳಗಿನಿಂದ ರಾಶಿ ರಾಶಿ ಧೂಳು ಹೊರಬರುತ್ತಿತ್ತು. ನಿಂತವರು ಅಚೀಚೆಗಿನ ಮನೆಗಳನ್ನು ನೋಡತೊಡಗಿದರು ಅಲ್ಲೆಲ್ಲ ಭಿಕ್ಷುಕರ ಸಾಲೇ ನಿಂತಿತ್ತು. ಆದರೆ ಈ ಮನೆಯ ಮುಂದೆ ಒಬ್ಬನೂ ಇದ್ದಿರಲಿಲ್ಲ. ಇದನ್ನು ಕಂಡು ಮಂಡಲದವರಿಗಾಶ್ಚರ್ಯವಾಯಿತು; ಪ್ರಾಯಶಃ ರಾಯರು ಭಿಕ್ಷುಕರಿಗೆ ಮಾಸಾಶನವನ್ನು ಕೊಡುತ್ತಿರಬೇಕೆಂದು ತಿಳಿದರು. ಅಷ್ಟರಲ್ಲಿ ಪರವೂರಿನ ಒಬ್ಬ ಭಿಕ್ಷುಕನು ರಾಯರ ಮನೆಯ ಹಿತ್ತಿಲಿಗೆ ಕಾಲಿ

ಕ್ಕಿದನು. ಕೂಡಲೇ ಉಳಿದವರು—"ಅವರೇನು ಕೊಡುತ್ತಾರೆ." ಎಂದರು. ಲಕ್ಷ್ಮಿಗೆ ಸೋಜಿಗವೆನಿಸಿತು. ಇಷ್ಟಕ್ಕೆ ೭॥ ಘಂಟೆಯಾಯಿತು. ಧರ್ಮಪ್ರಕಾಶರು ಕಣ್ಣುಹಿಚುಕಿಕೊಂಡು ಮನೆಯ ಮುಂದೆ ನಿಂತರು. ಆಗಲೂ ಅವರಿಗೆ ಮಂಡಲದವರ ನೆನಪಿದ್ದಿಲ್ಲ; ಈಗ ಅವರೇ ನಿಂತುದನ್ನು ಕಂಡು ಎದೆಜಗ್ಗೆಂದಿತು. ಓಡೋಡಿ ಬಂದರು. 'ಒಳಗೆ ಕೆಲಸದಲ್ಲಿದ್ದೆ; ಬಂದು ಬಹಳ ಹೊತ್ತಾಯಿತೇ? ಕ್ಷಮಿಸಿರಿ' ಎಂದರು. ಒಮ್ಮೆಗೇ—'ನಾಗಪ್ಪ, ಸುಬ್ಬ, ವೆಂಕಟ, ರಾಮು, ಮುನಿಸಾಮಿ'—ಎಂದು ಹತ್ತೆಂಟು ಆಳುಗಳನ್ನು ಕರೆದು ಅವರ ಕಿವಿಯೊಳಗೆ ಊದಿ ಮಂಡಳದವರ ಬಳಿಗೆ ಬಂದು—'ನಮ್ಮ ತೋಟಕ್ಕೆ ಹೋಗಿ ಬರೋಣ' ಎಂದರು. ಸರಿ; ಅರ್ಧ ಮೈಲಿ ದೂರದಲ್ಲಿರುವ ತೋಟಕ್ಕೆ ಮೋಟಾರಿನಲ್ಲಿ ಕುಳಿತು ಹೋದರು. ಅಲ್ಲಿ ಆ ಫಲಭರಿತ ತೋಟದ ಒಳಗೆ ಸಂಚರಿಸಿದ್ದಾಯಿತು. ಕೆಲವು ಆಳುಗಳು ಅಲ್ಲಿನ ಹಣ್ಣುಗಳನ್ನು ಕೊಯ್ದು, ಕೆಲವು ಗಿರಾಕಿಗಳಿಗೆ ವಿಕ್ರಯಮಾಡುತ್ತಿದ್ದರು. ಧರ್ಮಪ್ರಕಾಶರು ಅದನ್ನು ಕಂಡು—'ಅವರನ್ನು ಕರೆದು ಹಣ್ಣನ್ನೆಲ್ಲಾ ಕೂಡಲೆ ಮನೆಗೆ ಒಯ್ದು ಮುಟ್ಟಿಸು' ಅಂದರು. ಸರಿ, ಗಿರಾಕಿಗಳು ನಿಂತಲ್ಲೆ ಸ್ತಬ್ಧರಾದರು.

ತೋಟ ನೋಡಿಯಾಯಿತು. ತಿರುಗಿ ಮನೆಗೆ ಮರಳಿದರು. ಇನ್ನು ಹೆಚ್ಚು ಹೊತ್ತು ಕಳೆಯುಲು ಮಾರ್ಗವಿಲ್ಲ; ಮನೆಯ ಕಡೆಗೆ ಮರಳಿದರು. ಬಾಗಿಲಿನೊ

ಳಗೆ ಕಾಲು ಹಾಕುವ ವೇಳೆಯಲ್ಲಿ, ಒಳಗೆ ಆಳುಗಳು ಧವಸ ಧಾನ್ಯ, ಉಳ್ಳಗಡ್ಡೆ ಆಲುಗಡ್ಡೆಗಳನ್ನು ಅತ್ತಿತ್ತ ಸೇರಿಸಿ, ಸ್ಥಳವನ್ನು ಚೊಕ್ಕವಾಡುವುದರಲ್ಲಿ ದ್ದರು. ಕೊನೆಯ ಎರಡು ವಸ್ತುಗಳು ಕೊಳೆತು ಚೆನ್ನಾಗಿ ನಾರುತ್ತಿದ್ದುವು. ಹಾದಿಯಲ್ಲಿ ಬರುವಾಗ, ಮಂಡಲವವರಿಗೆ ಏನೋ ದುರ್ವಾಸನೆ ಬಂದಿತ್ತು. ಆವ ರದರ ಪರಿಶೀಲನೆಗಾಗಿ ಅತ್ತಿತ್ತ ನೋಡಿದರು. ನಾತವು ಹಾದಿಯ ಬಳಿಯದಾಗಿರದೆ, ಬಂಡಿಯೊಳಗಿದ್ದಂತಿತ್ತು. ಆಗ ಚಂದ್ರನ ದೃಷ್ಟಿಯು ಧರ್ಮಪ್ರಕಾಶರ ಉಡುಗೆಯ ಮೇಲೆ ಬಿತ್ತು ಅದು ದಿವ್ಯವರ್ಣವನ್ನು ತಾಳಿತ್ತು; ಸುಗಂಧವೂ ಅದರಿಂದಲೇ ಬರುತ್ತಿದ್ದಿರಬೇಕು. ಆವ ಸರದಲ್ಲಿ ರಾಯರು, ತಮ್ಮ "ಹೋಸ್ ಡ್ರೆಸ್ಸ"ನ್ನು ಬದ ಲಾಯಿಸಲು ಮರೆತಿದ್ದರು.

ಮನೆಯಲ್ಲಿ ಧರ್ಮಪ್ರಕಾಶರು ಅತಿಥಿಗಳಿಗೆ ಹ ಣ್ಣುಹಂಪಲನ್ನಿತ್ತು ತುಂಬಾ ಉಪಚರಿಸಿದರು ಬಳಿಕ ತಮ್ಮ ದಿವಾನಖಾನೆಗೆ ಒಯ್ದರು ಏನು ರಾಜರೀವಿ ಯದು! ಎಲ್ಲಿ ನೋಡಿದರೂ ಗೋಡೆಯಲ್ಲಿ, ಧರ್ಮ ಪ್ರಕಾಶರ,-ರೂಪಚಿತ್ರ, ತೈಲಚಿತ್ರಗಳೇ ತುಂಬದ್ದುವು. ಸರಿ! ಅಂದಿಗೆ ಭೇಟಿ ಮುಗಿದು ಲಕ್ಷ್ಮಿಯು ಮರಳಿದಳು. ಮರಳುವಾಗ-"ಕೋಪಿಸಬೇಡಿ, ತಮ್ಮ ಉತ್ಪತ್ತಿ? ಹೇ ಗಿದೆ" — ಎಂದು ಕೇಳಿದಳು. "ಹೆಚ್ಚಿಲ್ಲ, ವರುಷಕ್ಕೆ ಸರಾ ಸರಿ ೪ ಲಕ್ಷದ ಮುನಾಫೆ ಹಿಡಿಯಬಹುದು. ಅಂದರು.

ಎಲ್ಲರೂ, ಚಾಮುಂಡಿ ಶಿಬಿರಕ್ಕೆ ಹೊರಟರು.

ಅವರಲ್ಲಿಗೆ ಮುಟ್ಟುದ ಅರ್ಧ ತಾಸಿನಲ್ಲಿ. ಧರ್ಮಪ್ರಕಾಶರ ಆಳೊಬ್ಬನು ಓಡೋಡಿ ಬಂದು ಕುಬೇರನು ಬಿಟ್ಟು ಹೋದ ಚಿತ್ತ್ರವನ್ನು ಕೊಟ್ಟನು ಆಗ ಲಕ್ಷ್ಮಿಯೂ ಬಳಿಯಲ್ಲಿದ್ದಳು. ಅವಳು—"ಹೂಂ ನೀನು ಬಂದುದು ಒಳಿತಾಯಿತು. ನಿನಗೆ ರಾಜ್ಯರಲ್ಲಿ ಎಷ್ಟು ಸಂಬಳ ಸಿಗುತ್ತೆ?" ಎಂದು ಕೇಳಿದಳು "ತಿಂಗಳಿಗೆ ೧೦ ರೂಪಾಯಿಗಳು." ಎಂದುತ್ತರ ಬಂದಿತು

ಲಕ್ಷ್ಮಿ:— ಊಟಕೊಟ್ಟೇ?

ಆಳು:— ಊಟ ಮನೆಯಲ್ಲಿ

ಲಕ್ಷ್ಮಿ:—ಮನೆಯಲ್ಲಾರಾರಿರುವರು?

ಆಳು:—ನನ್ನ ಹೆಂಡತಿ ಮುತ್ತಾರು ಜನ ಮಕ್ಕಳಿರುವರು.

ಲಕ್ಷ್ಮಿ:— ಬೇರೆ ದುಡಿಯುವವರು ಕುಟುಂಬದಲ್ಲಿರುವರೇ.

ಆಳು:— ಇಲ್ಲವೆಂದಿಲ್ಲ. ನನ್ನಹೆಂಡತಿಗೆ ನೆರಮನೆ ಚಾಕರಿಯಿಂದ ತಿಂಗಳಿಗೆ ೩ ರೂಪಾಯಿ ಸಿಗುವುದು.

ಲಕ್ಷ್ಮಿ:—ಒಟ್ಟಗೆ ೧೩ ರೂಪಾಯಿಗಳು ಜೀವನಕ್ಕೆ ಸಾಕೇ?

ಆಳು:— ಸಾಲವೆಂದರೆ ಕೊಡುವವರಾರು?

ಲಕ್ಷ್ಮಿ:—ನಿನ್ನಶ್ರೀಮಂತ ಧನಿಯಲ್ಲಿ ಹೇಳಿಕೊಳ್ಳಬೇಕು.

ಆಳು:—ಹಾಗೆ ನಾಲಿಗೆ ಉದ್ದಮಾಡಿದರೆ—ಇದ್ದ ವೇತನವೂ ಹೋದೀತು.

ಈ ಎಲ್ಲ ಘಟನೆಗಳ ಮೇಲಿಂದ— ಮಂಡಲದವ ರಿಗೆ ಧರ್ಮಪ್ರಕಾಶರ ಮರ್ಜಿಯು ಆಳವೇ ತಿಳಿಯದಾ ಯಿತು ದಾನ ಮಾಡುವುದಿಲ್ಲವೆನ್ನಲೇ? ವಿಲಾಯತಿ ಯಲ್ಲಿ ನಾಯಿ ಸಾಕುವ ಸಂಸ್ಥೆಗಳಿಗೆ ಸಹ ವಂತಿಗೆ ಕೊಟ್ಟಿರುವರು!

* * * * *

ಮೈಸೂರಲ್ಲಿ ಮಂಡಲದವರ ಎರಡನೇ ಕಾರುಭಾರ ವೆಂದರೆ—ನಗರ ಸಂಭ್ರಮಣ ಎರಡು ಮೂರು ದಿನ ಗಳ ತನಕ ಬೆಳಗಿಂದ ಸಂಜೆಯತನಕ ತಿರುಗಿದರು ವಿದ್ಯುತ್‌ದೀಪಮಾಲಿಕೆ, ಬಂಗ್ಲೆಗಳು, ಅರಮನೆಗಳು, ಬಾಗ್‌ಗಳು, ರಸ್ತೆಗಳು, ಬೆಟ್ಟಗಳು—ಎಲ್ಲವನ್ನೂ ಕಂಡ ದ್ದಾಯಿತು. ಪ್ರತಿಯೊಂದೂ ಶುಚಿತ್ವಸೊಗಸುಗ ಳಿಂದ ಮೆರೆಯುತ್ತಿದ್ದವು. ಒಬ್ಬರು ಇದಕ್ಕೆ ಅಮರಾ ವತಿಯೆಂದರು; ಇನ್ನೊಬ್ಬರು ಅಯೋಧ್ಯೆಯೆಂದರು, ಮೂರನೆಯವರು - ಲಂಕೆಯೆಂದರು ಅವರ ಮೈ ಸೂರು ನಿವಾಸದ ಕೊನೆಯ ದಿನವನ್ನು ಅರಮನೆಯ ದರುಶನಕ್ಕಾಗಿ ಕಾದಿರಿಸಿದರು. ಆ ದಿನ ಯಾವನೋ ದೇಶೀಯ ರಾಜಕುಮಾರನು ಬರುವನೆಂದು ಅರಮನೆ ಯಲ್ಲಿ ದೀಪಗಳಿಂದ ಜ್ಯೋತಿ ಉರಿಯುತ್ತಿತ್ತು. ಆ ನೋಟವನ್ನು ಕಂಡು - ಲಕ್ಷ್ಮಿಗೆ ವೈಕುಂಠಕ್ಕೆ ಮರ ಳುವ ಇಚ್ಛೆ ಸಹ ಇಲ್ಲದಾಯಿತು. ಅರಮನೆಯ ಒಳಗಿನ, 'ಡ್ರಾಯಿಂಗರೂಮು'ಗಳು, ದರ್ಬಾರು ಮಂಟ ಪಗಳು— ಸುವರ್ಣರೇಖಿತ ಸ್ತಂಭರಾಜಗಳು—ಏನೇ

ನು! ಉಕ್ಕಿನ ಕಂಬಗಳು ಅನೇಕದಿಂದ ಎಕವಾಗಿ ಬಂದುವು. ಈಗ ಬಂದು ಹೋಗುವ ಅತಿಥಿಗಳಿಗಾಗಿ ದೊಡ್ಡೊಂದು ಅರಮನೆಯಾಗುತ್ತಿದೆ. ಅರಮನೆಯ ಮೋಟಾರುಗಳ ಮಾಲೆಯಂತೂ ಉದ್ದವಿದೆ. ದಸರೆಯಲ್ಲಂತೆ! ಆ ವೈಭವದ ಮೆರವಣಿಗೆ ಇಂದ್ರನನ್ನು ನಾಚಿಸುವುದಯಂತೆ . . . .

ಅರಮನೆಯ ಸುದ್ದಿ ಹೇಳುವಾಗ ಬೇರೆ ಅರಸು ಮಕ್ಕಳ ಸುದ್ದಿಹೇಳಿದರೆ ನಷ್ಟವಿಲ್ಲವಷ್ಟೆ. ಹಟ್ಟಿನ ರಾಜರಿಗೂ, ಅವರ ಕುಮಾರ, ಕುಮಾರಿಯರಿಗೂ ಹಿಂದುಸ್ಥಾನದ ಹವೆಗಳೇ ಒಗ್ಗುವುದಿಲ್ಲ. ಎಷ್ಟೋ ಜನರಿಗೆ ಇಲ್ಲಿನ ಪತ್ನಿಯರೂ ಒಗ್ಗುವುದಿಲ್ಲ. ಹೀಗಾಗಿ ವರುಷದಲ್ಲಿ ೩೬೫ ದಿನ ಬಿಟ್ಟು ಉಳಿದ ದಿನಗಳನ್ನು ಅವರು ಸ್ವದೇಶದಲ್ಲಿ ಕಳೆಯುವರು ಈ ಅರಸು ಮಕ್ಕಳಿಗೆ ಲಂಡನ್, ಪ್ಯಾರಿಸ್ ನಗರಗಳಲ್ಲೂ ಸಹ ಅರಮನೆಗಳಿವೆ, ಆಸ್ತಿಗಳಿವೆ. ಇವರು ವಿದೇಶಗಳಿಂದ ಸ್ವದೇಶಕ್ಕೆ ಬರುವ ಯೋಚನೆಯಾದರೆ–ಬರುವಾಗ ಅಪೂರ್ವ ಒಡವೆಗಳನ್ನು ತರುವರು. ಹಲವರು—ಶ್ವೇತಕುಮಾರಿಕೆಯರನ್ನು ತರುವರು ಕೆಲವರು ೧೦;೨೦,೦೦೦ ಪವನು ಬೆಲೆಯ ನಾಯಿಗಳನ್ನೋ, ಅದರಿಮ್ಮಡಿ ಬೆಲೆಯ ಜೂಜುಕುದುರೆಗಳನ್ನೋ ತರುವರು. ಇತ್ತೀಚೆಗೆ, ಅಳುಮುಂಡಿ ಮಹಾರಾಜರು, ೩೦,೦೦,೦೦೦ ಬೆಲೆಯ ರತ್ನಖಚಿತ ಪಾಯಿಖಾನೆಯೊಂದನ್ನು ವಿಲಾಯತಿಯಲ್ಲಿ ಮಾಡಿಸಿರುವರು. ಅದರ ಜೋಡಣೆಯ

ಕೆಲಸ ಮಾತ್ರ ಅಳುಮುಂದಿ ರಾಜಧಾನಿಯಲ್ಲಾಗು ವುದು. ಇನ್ನು ವ್ಯಾಸರಾಯರ ಆಗಮನವು ಈ ರಾಜ ಕುಮಾರರ ರಾಜ್ಯಗಳಿಗಾಯಿತೆಂದರೆ ಆಗ ಸುವರ್ಣ ವೃಷ್ಟಿಯೇ ಆಗುವುದು. ಕಳೆದ ಬಾರಿ ಲಾರ್ಡ್ ಎಡಮಂಟ್‌ರವರು ಬಂದಾಗ ದೊರೆತಾ ರಾಜ್ಯದ ಅರಸರು—ತಮ್ಮ ರಾಜ್ಯದಲ್ಲಿನ—"ನಕ್ಷತ್ರ ಮಾಲಾ" ಎಂಬ ಜಲಪಾತವನ್ನು ಶೃಂಗರಿಸಲು ಆರು ನೊನ್ನೆ ಗಳನ್ನು ವ್ಯಯಿಸಿದ್ದರಂತೆ. ಇಂಥ ಶ್ರೀಮಂತ ಅರಸರ ಪ್ರಜೆಗಳಾಗುವುದೆಂಥ ಭಾಗ್ಯ!

ಲಕ್ಷ್ಮಿದೇವಿಯು ಆತುರದಿಂದ ಈ ವಿಷಯವನ್ನು ತಿಳಿದಾಗ ಅವಳ ಗಮನಕ್ಕೆ ಕೆಲವು ಸುದ್ದಿಗಳು ಹೊಡೆ ದುವು. ಇಂಥ ದೊರೆಗಳ ಮೇಲಿನ ಮಮತೆಯಿಂದ ಅವರ ಪ್ರಜೆಗಳು (ರಾಜಭಕ್ತಿಯಿಂದ,) ವರುಷಕ್ಕೆ ೩೦೦ ಏಕಾದಶಿಗಳನ್ನು ಮಾಡುವರೆಂದು.

ಮಿಕ್ಕ ಹಿಂದುಸ್ಥಾನದ ಪ್ರಜೆಗಳು—ಇಷ್ಟು ತ್ಯಾ ಗಿಗಳಲ್ಲ. ಅವರ ಪಾಲಿಗೆ ಕೇವಲ ೨೭೦ ಏಕಾ ದಶಿಗಳು ಬರುವುವು.

* * * * *

ಮೈಸೂರಿಂದ ಅವರ ಪ್ರಯಾಣ ಬೆಂಗಳೂರಿಗೆ ಸಾಗಿತು. ಅಲ್ಲಿನ ಮತ್ತು ಭರತಖಂಡದ ಇತರ ನಗರ ಸಂಚಾರಗಳ ದೆಸೆಯಿಂದ ಅವರಿಗೆ ವಿದ್ಯಾರ್ಥಿಗಳ ಮೇಲೆ ತುಂಬಾ ಗೌರವವುಂಟಾಯಿತು. ಬೆಂಗಳೂರು ಬಾಬುಗಳ ಸಿಲ್ಕಿನ ಕೋಟುಪಾಂಟುಗಳು; ಹುಬ್ಬಳ್ಳಿ

ನೆಟ್ಟರ ಜರತಾರಿ ಮುಂಡಾಸುಗಳು, ಮುಂಬಯಿ ವಿದ್ಯಾರ್ಥಿವೀರರ ಅಪ್‌ಟುಡೇಟ್ ಡ್ರೆಸ್ಸುಗಳು, ಮಂಗಳೂರವರ ಬೆಡಗಿನ ಎರಡೆದೆ ಕೋಟುಗಳು— ಹಿಂದೀಯರು ಬಡವರಲ್ಲ ಎಂಬ ಭರವಸೆಯನ್ನುಂಟ ಮಾಡಿದುವು. ಗಾಂಧಿ ಎಂಬಾತನ – ಬಡತನದ ಕುರಿತಾದ ಕಾಲ್ಪನಿಕ ಸ್ವಪ್ನವಾರ್ತೆಯು ಸುಳ್ಳು ಎಂಬ ಬಗ್ಗೆ ಈ ತರುಣವೀರರು ಕೊಡುತ್ತಿರುವ ಈ ಉಡು ಗೆಯ ಉತ್ತರವೇ ಸಾಕು ಹಿಂದೀಯರಿಗೆ ಊಟ ಕ್ಕಿಲ್ಲವೆಂಬ ಮಾತನ್ನು–ಒಬ್ಬ ಪಾರೋಜಿಯು ಹೇಳಿ ದ್ದರೆ ಅವನ (Poverty and Un British Rule in India)—ಗ್ರಂಥವನ್ನು ಸುಡಲು ಈ ವಿದ್ಯಾರ್ಥಿಗಳ ಕಾಪಿಕ್ಯಾಬ್ ಅಕೌಂಟು ಬೂಕುಗಳು ಸಾಕು.

ಮೊನ್ನೆ ಮೊನ್ನೆ ಪ್ರ್ಯಾನಾನ್ಸ ಮೆಂಬರರಂದಿದ್ದರು.— ಹಿಂದೀಯರು ವರುಷಾವಧಿ ೩೮ll ಕೋಟಿ ಚಿನ್ನಬೆಳ್ಳಿಗ ಳನ್ನು ಆಭರಣಗಳಿಗಾಗಿ ವಿದೇಶಗಳಿಂದ ತರಿಸುತ್ತಿರುವ ರೆಂದು. ಹಿಂದುಸ್ಥಾನದಲ್ಲಿ "ಕೋಲಾರ"ದಂಥ ಗಣಿಗ ಳಿರುತ್ತ ತಿರುಗಿ ಚಿನ್ನ ತರಿಸುವುದೆಂದರೆ ಎಂತಹ ಕುಬೇ ರರಿರಬೇಕು? ಅಷ್ಟೇ; ಅಲ್ಲಿ ಅವರ ದಾನಧರ್ಮದ ಬು ದ್ಧಿಯಾದರೂ ವಿಶೇಷ! ವಿದೇಶಗಳಿಗೆ ವಾಣಿಜ್ಯರೂಪ ದಿಂದ ೨೦೦ ಕೋಟಿ ರೂಪಾಯಿಗಳಿಗೂ ಮಿಕ್ಕಿ ಸಲ್ಲಿಸು ವರು! ಅವರಿಗೆ ಕ್ಷಾತ್ರಧರ್ಮದ ಮೇಲಿರುವ ಅಭಿ ಮಾನಕ್ಕಾಗಿ ಅವರು ವ್ಯಯಿಸುತ್ತಿರುವ ಹಣವೆಷ್ಟು— ಸ್ವಲ್ಪವೇನು? ಸ್ವತಃ ಅವರಲ್ಲಿ ವೀರತ್ವ ಇಲ್ಲದಿದ್ದರೂ

ಕ್ಷತ್ರಿಯಧರ್ಮದ ಮೇಲೆ ಅಭಿಮಾನ ಬಹಳ. ಅದ ಕ್ಕಾಗಿ ರಾಜ್ಯದಲ್ಲಿ, ಪ್ರತಿವರುಷ ಮುಕ್ಕಾಲುಪಾಲು ಹಣವು ಸೇನೆಗಾಗಿ ವ್ಯಯವಾಗುತ್ತಿದೆ.

ಒಬ್ಬೊಬ್ಬ ರಾಜಾಧಿಕಾರಿಗಳಿಗೆ ವೇತನವೆಷ್ಟು! ಅ ಮೇರಿಕ, ಜಪಾನದೇಶಗಳು ಶ್ರೀಮಂತ ದೇಶವೆನಿಸಿ ದ್ದರೂ ಅಲ್ಲಿನ ಅತಿ ಹೆಚ್ಚಿನ ಅಧಿಕಾರಿಗಳಿಗೆ ಸಹ ಇಲ್ಲಿನ ವ್ಯಾನರಾಯರ ಸಂಬಳ ಭತ್ಯೆಗಳಿಲ್ಲ. ಇನ್ನು ಹಿಂದೀ ನೌಕರರಿಗೇ ಚೆನ್ನಾಗಿ ಧನದುಪಯೋಗ ತಿಳಿಯುದೆಂದು, ದೊಡ್ಡ ಅಧಿಕಾರಕ್ಕೆ ಶ್ವೇತ ಮುಖಿಗಳೇ ಬರುವರು.

ದೇಶದಲ್ಲಿ ಸಂಪತ್ತೆಂದರೆ ಬರೇ ಧನವೊಂದೇ ಅಲ್ಲ; ಜನವೂ ಅಹುದು. ಹಿಂದುಸ್ಥಾನದಲ್ಲಿ ಜಗತ್ತಿನ ಜನ ಸಂಖ್ಯೆಯ ಐದನೇ ಒಂದಂಶವಿದೆ. ಇದರ ದಾನದ ಲ್ಲಾದರೂ ಅವರ ಔದಾರ್ಯ ಕಡಿಮೆಯಿಲ್ಲ. ೧೯೧೪- ೧೯೧೮ರ ವರೆಗೆ ಯುರೋಪಿನಲ್ಲಿ ಘೋರ ಯುದ್ಧವಾಯಿ ತಷ್ಟೆ. ಕೇವಲ ನ್ಯಾಯಕ್ಕಾಗಿ ನಡೆದ ಈ ಹೋರಾಟ ದಲ್ಲಿ ಅಪಾರ ಧನ ವ್ಯಯವಾಯಿತು! ೧॥ ಮಿಲಿಯದಷ್ಟು ಜನವ್ಯಯವಾಯಿತು. ಹಿಂದುಸ್ಥಾನವು ಇದರಲ್ಲಿ ನಾಕಷ್ಟು ದೊಡ್ಡ ಭಾಗವನ್ನು ವಹಿಸಿದ್ದಲ್ಲದೆ, ಅದೇ ಸಮಯ ದೊಡ್ಡದಾದ ಜನದಾನದ ಯೋಚನೆಯೊಂ ದನ್ನೂ ಮಾಡಿತು. ದೇಶಕ್ಕೆ ಸುಖವಾಗಲೆಂದು ಒಂದೇ ವರುಷದಲ್ಲಿ-ಇನ್ಫ್ಲುಯೆಂಜಾ ಬಂದಿತೆಂಬ ನೆವದಿಂದ ೬ ಮಿಲಿಯ ಜನದಾನ ಮಾಯಿತು. ಈಗಾದರೂ, ಜನದಾನವು ಭರತಖಂಡದಲ್ಲಿ ತುಂಬಾ ನಡೆಯುತ್ತಿದೆ.

ಆದರೆ ಕೆಲವು ಚಳವಳಿಗಾರರಿರುವರು—ಅವರು ಹಿಂದುದೇಶವು ಬಡದೇಶವೆಂದೂ, ಹಿಂದೀಯರಿಗೆ ದಿನ ಒಂದರ ಸರಾಸರಿ ೧ ಆಣೆ ೭ ಪೈ ಉತ್ಪನ್ನವೇ ಸರಿಯೆಂದೂ ಕೂಗುತ್ತಿರುವರು. ಅಮೇರಿಕದವರಿಗೆ ದಿನಕ್ಕೆ ೩ ರೂಪಾಯಿಗಳಷ್ಟಿದೆಯಂತೆ. ಅದನ್ನು ತೆಗೆದುಕೊಂಡು ನಾವೇನು ಮಾಡಬೇಕು? ಹಿಂದುಸ್ಥಾನವು ಧರ್ಮಕ್ಷೇತ್ರ. ಕಾಂಚನವು ಧರ್ಮಬುದ್ಧಿಗೆ ಹಾನಿ ತರುವುದು. ಆ ನಿಮಿತ್ತ ಜನರು ಅದನ್ನು ಕಡಿಮೆಯಾಗಿ ಅದರ ಉಪಯೋಗಮಾಡುತ್ತಿರುವರು. ಅವರಿಗೆ—ಐರೋಪ್ಯರಂತೆ ಚಂದ್ರನಲ್ಲಿ ಚಿನ್ನವಿರಬೇಕು; ಅಲ್ಲಿಯ ತನಕ ವಿಮಾನ ಓಡಿಸಿದರೆ ಹೇಗೆ—ಎಂಬ ಆಸೆ ಉಂಟಾಗಿಲ್ಲ!

ಅಲ್ಲಿ ಇಲ್ಲಿ ಅಪೂರ್ವವಾಗಿ ಮಂಡಳದವರಿಗೆ ಈ ದೇಶದಲ್ಲಿ ಸುಧಾಮರು ಸಿಗಲಿಲ್ಲವೆಂದಲ್ಲ. ಧರ್ಮಪ್ರಕಾಶರ ಮನೆಯಲ್ಲಿ ಅವರ ಆಳಿದ್ದಂತೆ ಮುಂಬಯಿಯಲ್ಲಿ ಮುಷ್ಕರಹಿಡಿದ ೧॥ ಲಕ್ಷ ಮಂದಿ ಗಿರಣಿಯಾಳುಗಳನ್ನು ಕಂಡರು. ಔಧ್ರದೇಶದಲ್ಲಿ ಗಳಿಗೆ ಎಣಿಕೆ ಹಾಕುತ್ತಿದ್ದ ಅಸ್ಥಿಪಂಜರಗಳನ್ನು ಕಂಡರು. ಕುತೂಹಲದಿಂದ—ಮಿರುಗುವ ಶಾಲಾಭಟರ (ವಿದ್ಯಾರ್ಥಿಗಳ) ಹಿರಿಯರು ಹಲವರನ್ನು ಸಂದರ್ಶಿಸಿದರು. ಅವರಿಗೆ ವರುಷಕ್ಕೆ ಒಟ್ಟು ೨೦೦ ರೂಪಾಯಿ ಉತ್ಪನ್ನವಿಲ್ಲದಿದ್ದರೂ, ಸಾಲಮಾಡಿಯಾದರೂ ತಮ್ಮ ಅಭಿಮನ್ಯುಗಳ ಸಲುವಾಗಿ ತಿಂಗಳಿಗೆ ೪೦ ರೂಪಾಯಿಯವರೆಗೆ

ವ್ಯಯಿಸುತ್ತಿರುವರು. ಕಾರಣ, ಅದೊಂದು ವ್ಯಾಪಾರ; ಮುಂದೆ ಅವರು ದೊಡ್ಡ ನೌಕರರಾಗಿ ತಿಂಗಳಿಗೆ ೧೦೦—೨೦೦ ದುಡಿಯಬಹುದೆಂದು ಆಸೆ. ಹೀಗೆ, ಓದಿ ವಿದ್ಯಾವಂತರಾಗಿ ತಿಂಗಳಿಗೆ ೨೪×೩೦ರ ವರೆಗೆ ದುಡಿಯುವ ಬಿ. ಎ. ಪಾಸಾದ ವೀರರು ಹಿಂದುಸ್ಥಾನದಲ್ಲಿ ಲಕ್ಷಾಂತರವಿರುವರು ಮಂಗಳೂರು ಜಿಲ್ಲೆಯ ಲಕ್ಷ್ಮೀಪುತ್ರರ ಕಾರ್ಖಾನೆಗಳಲ್ಲಿಯೇ ಪ್ರತಿಯೊಂದು ವರುಷಕ್ಕೆ S S L. Cಯವರಿಂದ ಹಿಡಿದು B. A. ಯವರ ತನಕ ೧೦೦೦ಕ್ಕೆ ಮಿಕ್ಕಿ ಭಾವೀಶ್ರೀಮಂತರು ತಯಾರಾಗುವರು ಇವರು ಪ್ರತಿ ದಿನ ೧೨ ತಾಸಿಗೂ ಮಿಕ್ಕಿ ಅರ್ಥಕ್ಕಾಗಿ (ಸಿದ್ರಿ) ದುಡಿದರಾಯಿತು. ಆಗ ೨೪×೩೦ರ ಮಾಸಿಕ ವೇತನವು ಇವರಿಗೆ ತಪ್ಪದೆ ಸಿಗುವುದು.

ಉಪಸಂಹಾರದಿಂದ ನಾವು ಹೆದ್ದನ್ನೆವು. ಮುಂದಿನವರ ಮನಸ್ಸಿಗೆ ಆರ್ಯಾವರ್ತ ಮತ್ತು ದ್ರಾವಿಡ ಭೂಮಿಗಳ ಸಿರಿಸಂಪತ್ತುಗಳು ಬಂದುವು. ಹಿಂದುಸ್ಥಾನದಲ್ಲಿರುವ ಎರಡು ವರ್ಗದ ಜನರಿಂದಲೂ ಅಪರಿಮಿತ ತೃಪ್ತಿಯಾಯಿತು ಮೊದಲನೆಯ ತರಗತಿಯವರು ಅರಮನೆಯ ನಿವಾಸಿಗಳು ಅವರ ವಿಷಯ ಬಡತನದ ಚರ್ಚೆಬರಲು ಕಾರಣವೇ ಇಲ್ಲ. ಅವರ ಬಗ್ಗೆ ವಿಲಾಯತಿಯ ಎಷ್ಟೋ ಮಹಿಳೆಯರು ಪ್ರಶಂಸಾಪತ್ರವಿತ್ತಿರುವರು. ಇನ್ನುಳಿದವರ ವಿಚಾರ ಅವರ ಸಂಖ್ಯೆ ತೀರ ಕಡಿಮೆ. ಹೆಚ್ಚೆಂದರೆ ಅವರು–೧೦೦.೦೦೦,೦೦೦,೦೦೦ಕ್ಕೆ

೯೯·೯೯೯ರಷ್ಟಿರಬಹುದು. ಶ್ರೀಮಂತರ ಸಂಖ್ಯೆಯು ೧೨೦ ಸ್ಥಾನಗಳಿಗೆ ಹಾರುವಾಗ ಇವರ ಸಂಖ್ಯೆ ಐದಕ್ಕೆ ಮೀರುವುದಿಲ್ಲ. ಈ ಅಲ್ಪಸಂಖ್ಯಾಕರು ಶ್ರೀ ಕೃಷ್ಣನ ಭಕ್ತರು. ಒಮ್ಮೆ ಅವನ ಪತ್ನಿಯಾಗಿದ್ದ ಲಕ್ಷ್ಮಿದೇವಿಗೆ ಈ ಸುಧಾಮರನ್ನು ಕಂಡು ಅತೃಪ್ತಿಗೊಳ್ಳುವ ಕಾರಣ ವೇನಿದೆ? ಅಧ್ಯಕ್ಷರಿಗೆ ತೃಪ್ತಿಯಾಯಿತೆಂದರೆ ಉಳಿದ ಸದಸ್ಯರಿಗೆ ತೃಪ್ತಿಯಾಗಲೇ ಬೇಕು; ಇದು ಎಂಥೆಂಥ ಕೌನ್ಸಿಲು, ಎಸೆಂಬ್ಲಿಗಳಲ್ಲೂ ಇರುವ ಸಂಗತಿ. ಈ ನಿಯಮಕ್ಕನುಸರಿಸಿ ಚಂದ್ರಕುಬೇರರು ತೃಪ್ತರಾದರು.

ಅವರು ತೃಪ್ತಿಯಿಂದ ತುಂಬಿ ತಮ್ಮ ವರದಿಯ ಲೇಖನವನ್ನು ಹಿಂದುಸ್ಥಾನವನ್ನು ಬಿಡುವ ಮೊದಲೇ ಬರೆಯುವ ನಿರ್ಧಾರ ಮಾಡಿದರು. ಉತ್ತರ ಹಿಂದುಸ್ಥಾನವನ್ನೆಲ್ಲಾ ಸಂಚರಿಸುವ ಯೋಜನೆಯಾಯಿತು. ಕಲ್ಕತ್ತಾ ನಗರವನ್ನು ನೋಡಿದರು, ಗಿರಣಿ ಸುಧಾಮರನ್ನು ಕಂಡರು; ಕಾಶಿ, ಪ್ರಯಾಗಗಳಿಗೆ ಬಂದರು. ಕಾಂಚನ ಭಕ್ತ ಮಂಡರನ್ನು ಕಂಡರು; ಆಗ್ರಾದ "ತಾಜಮಹಲ"ನ್ನು ಕಂಡು ಬೆಪ್ಪಾಗಿ ನಿಂತರು ಅದರ ರಚನೆಯು ಮೇಲಿಂದ ಇದು, ಇದೇ ಇಸವಿಯ ಮಂದಿರವೆಂದು ನಿರ್ಧರಿಸಿ, ಅದರ ಬೆಲೆಯನ್ನೆಣಿಕೆ ಹಾಕಿ ವರದಿಯಲ್ಲಿ ನೇರಿಸಿಕೊಂಡರು. ಮುಂದೆ ವಾಯುವ್ಯದತ್ತ ಕಡೆ ತೆರಳಿದರು. ಆಗ ಆ ಪ್ರಾಂತದ ಅರಸುಗಳು, ದಶಂಬರದ ನೆಕೆಯನ್ನು ತಾಳಲಾರದೆ ವಿಲಾಯತಿಗೆ ಹೋಗಿದ್ದರು. ಹೀಗಾಗಿ ಮೇಲಿಂದ ಮೇಲೆ ಆ ದೇಶದ ಗಿಡ

ಮರಗಳ ಸಂಪತ್ತನ್ನು ಕಂಡು, ಜನರೂ ಹೀಗೇ ಸೊಂಪಿನವರಿರಬೇಕೆಂದು ಊಹಿಸಿ ದೇಹಲಿಗೆ ಮರಳಿದರು. ಹಳೆ ದೇಹಲಿಯನ್ನು ಕಂಡರು. ಮನಸ್ಸಿಗೆ ಬೇಸರವಾಯಿತು. ಕೊನೆಗೆ ನವದೇಹಲಿಗೆ ಬಂದರು. ಅಲ್ಲಿನ ದೊಡ್ಡ ಅರಮನೆಯೊಂದರ ಮುಂದೆ ಕಾಲುನೀಡಿಕೊಂಡು "ಇದು ಚಿನ್ನದ ನಾಡಾದ ಹಿಂದುಸ್ಥಾನಕ್ಕೆ ಒಪ್ಪಿದ ಕವಿತೆ" — ಎಂದು ವರದಿಯನ್ನು ಬರೆದು ಮುಗಿಸಿದರು.

## ಪ್ರಕರಣ ೨೧.

## ವಿದ್ಯಾ.

ಮೂರು ಮಂಡಳಿಗಳ ಕಾರ್ಯಗಳ ಸಿಂಹಾವಲೋಕನವನ್ನು ಮಾಡಿದ್ದಾಯಿತು. ಈಗುಳಿದುದು ಕೊನೆಯದೆನಿಸಿದ ವಿದ್ಯಾಮಂಡಳದವರ ಕಲಾಪಗಳು. ಸರಸ್ವತಿಯು ಅಧ್ಯಕ್ಷೆ, ವಾಲ್ಮೀಕಿ ವಿಶ್ವಕರ್ಮರು ಸದಸ್ಯರು ಮಾನವನ ಸಾರ್ವತ್ರಿಕ ಬೆಳವಣಿಗೆಯೇ ವಿದ್ಯೆಯೆಂದು ಅವರ ಅಭಿಮತವಾಗಿತ್ತು. ಆದರೆ ಮಾನವರ ಶಾಲೆಗಳನ್ನು ಕಂಡು ಅವರು ತಮ್ಮ ಅಭಿಪ್ರಾಯವನ್ನು ಸುಧಾರಿಸುವ ಪ್ರಯತ್ನಮಾಡಿಕೊಂಡರು. ಅವರ ಪ್ರಾಚೀನಾಶ್ರಮಗಳ ಕಲ್ಪನೆಯಾಗಲಿ, ಗೃಹಶಿಕ್ಷಣದ ಕಲ್ಪನೆಯಾಗಲಿ ನಾಶವಾಗಿ ಅವರು ಶಾಲಾ ಕಾಲೇಜುಗಳನ್ನೂ ಅವುಗಳಿಂದ ಪಾರಂಗತರಾಗಿ ಬಂದ ಪರಾಕ್ರಮಿಗಳನ್ನೂ, ಕಾಣಬೇಕಾಯಿತು. ವಿದ್ಯೆಯು ಮಾನ

ವನ ಶಾರೀರಿಕ, ಮಾನಸಿಕ, ನೈತಿಕ ಸಂಸ್ಕರಣವೆಂದು ಸರಸ್ವತಿ ತಿಳಿದಿದ್ದಳು ಇದೇ ಉದ್ದೇಶದಿಂದ ಅವಳು ತನ್ನ ಗೆಳೆಯರೊಂದಿಗೆ ಸಾವಿರಾರು ಶಾಲಾ ಕಾಲೇಜು ಗಳನ್ನು ತಿರುಗಿದಳು ಅವರಿಗೆ ವಿದ್ಯಾರ್ಥಿಗಳೆಂದರೆ ದೊಡ್ಡ ತಲೆಯಿದ್ದು, ಉಳಿದ ಅವಯವಗಳಿಲ್ಲದಂತಹ ನವೀನ ಜಂತುಗಳೆಂಬ ತಿಳುವಳಿಕೆಯಾಯಿತು. ಈ ಕಾರಣದಿಂದ ಅವರು ಕೇವಲ ಬುರುಡೆಗಳ ಪರಿಶೀಲ ನೆಗೆ ಹೋದರು. ಇಲ್ಲದ ವಸ್ತುವನ್ನು ಹುಡುಕಲು ವ್ಯಯಿಸುವ ವೇಳೆಯು ವ್ಯರ್ಥವಲ್ಲವೇ? ಇನ್ನೆರಡನೆಯ ದಾಗಿ ಸೈತಿಕ ಬೆಳವಣಿಗೆಯ ಜವಾಬುದಾರಿಯನ್ನು ಧಾರ್ಮಿಕಮಂಡಲದವರಿಗೆ ಹಂಚಿದರು. ಶಾರೀರಿಕ ಬೆಳವಣಿಗೆಯಿದ್ದರೆ, ಆರೋಗ್ಯಮಂಡಲದವರು ಪರಿ ಶೀಲಿಸುವರು. ಹೀಗೆಂದು ಮೂರು ಹೊರೆಗಳಲ್ಲಿ ಎರ ಡನ್ನಿಳಿಸಿದರು.

ಮಾನಸಿಕ ಶಿಕ್ಷಣದ ವಿಚಾರ. ಇದು ಎಲ್ಲರ ಮಟ್ಟಿಗೆ ಬೇಕಾಗುವ ಪರೀಕ್ಷೆಯಲ್ಲ. ಭರತಖಂಡ ದಲ್ಲಿ ಸೇಕಡಕ್ಕೆ ೯೭ ಮಂದಿ, ಸರಸ್ವತಿಯೊಡನೆ ವೈರ ಕಟ್ಟಿಕೊಂಡಿದ್ದರು. ಹೀಗಿರುವುದರಿಂದ ಅವರು ಅವಳ ಮೋರೆ ನೋಡುವಂತಿಲ್ಲ. ಉಳಿದ ೩% ರಷ್ಟು ಜನ ರನ್ನು ಕಾಣುವ ವಿಚಾರ. ಅದೊಂದು ಮಹತ್ವದ ಸಂಗತಿಯಲ್ಲವಾಗಿ ತೋರಿತು.

ಕೆಲಸತೊಡಗಿದ ಪ್ರಾರಂಭದಲ್ಲಿ ಪ್ರಾಥಮಿಕ ಶಾಲೆ ಗಳನ್ನು ಸುತ್ತತೊಡಗಿದರು. ಹುಡುಗನು ಬಂದೊಡನೆ,

'ಅ. ಆ' - "ಅಳಿಲು—ಆನೆ", ಈ ಶಿಕ್ಷಣ ನಡೆಯು ತ್ತಿತ್ತು. ಶಾಲೆಯಲ್ಲಿ ಕುಳಿತ ಹುಡುಗನ ಶರೀರಕ್ಕೆ ಅಕ್ಷರ, ಅಂಕಗಳನ್ನೆಲ್ಲಾ ತಿನ್ನಿಸಬೇಕೆಂದು ಉಪಾಧ್ಯಾಯರ ಪಟ. ಶರೀರವು ಎಷ್ಟೋ ಬಾರಿ, ಅಲ್ಲೇ ತೂಕಡಿಸುವುದು; ಆಕಳಿಸುವುದು. ಇದನ್ನು ಎಚ್ಚರಗೊಳಿಸಲು ದಯಾಳು ಉಪಾಧ್ಯಾಯರು ನಮ್ಮ ಚಿಕ್ಕ ಬೆತ್ತದಿಂದ ಆ ಶರೀರಗಳಿಗೆ ಸಂಭಾವನೆ ಮಾಡುವರು. ಆಗ ಹೊರಗೆ ಸಂಚಾರಕ್ಕೆ ಹೋದ ಮನಸ್ಸು ಶರೀರದಲ್ಲಾದ ತಳಮಳವೇನೆಂದು ವಿಚಾರಿಸಲು ಬರುವುದು. ಕೆಲವು ಮನಸ್ಸುಗಳು ತೂಕಡಿಕೆಯಲ್ಲಿ—ಮನೆ, ತಿಂಡಿ, ಗೆಳೆಯರು, ಆಟ, ಕೂಟ— ಇವುಗಳ ನೆನಪು ಮಾಡುತ್ತಿರುವುವು. ಆಕಳಿಸುವ ಶರೀರಗಳ ಮನಗಳಿಗೆ ತಾವೆಲ್ಲಿರುವೆವೆಂದೇ ತಿಳಿಯದು. ಇನ್ನು ಉಳಿದ ಮನಗಳು ಈ ಸಮಯದಲ್ಲಿ ಬೋರ್ಡು ಸ್ಲೇಟುಗಳ ಮೇಲೆ ಅರ್ಥವಾಗದಿರುವ ನಿರ್ಜೀವ ಗೆರೆಗಳ ಕಡೆಗೆ ಗಮನವಿರಿಸಲಾರದೆ, ಹೊರಗೆ ಮರದಲ್ಲಿ ಓಡುತ್ತಿರುವ ಅಳಿಲನ್ನೋ, ಸುತ್ತಲಿನ ಹಸುರು ಹಚ್ಚೆಯನ್ನೋ, ದಾರಿಯಲ್ಲಿ ಹೋಗುತ್ತಿರುವ ರೈತರನ್ನೋ, ಬಳಿಯಲ್ಲೇ ದನಮೇಯಿಸುತ್ತಿರುವ ಬಾಲಕರ ಆಟಗಳನ್ನೋ, ನಿರೀಕ್ಷಿಸುತ್ತಿರುವುವು. ಅಲ್ಲೇ ತಲ್ಲೀನವಾದ ಆ ಮನಗಳಿಗೆ ಉಪಾಧ್ಯಾಯರೆಂದರೆ ಯಮನ 'ತಿದ್ದಿದ ಆವೃತ್ತಿ' ಗಳಿರಬೇಕೆಂದು ಕಾಣಿಸುವುವು. ಆದರೂ ಅವೂ 'ಅ ಆ' ಎಂದೋ, 'ಆರು ಎಂಟ್ಲ ನಾಲ್ವತ್ತೆಂಟು' ಎಂದೋ—

ಖಡ್ಗಮೃಗಕ್ಕೆ ಕಾಲೆಷ್ಟು ಎಂದೋ ಗುರುದಕ್ಷಿಣೆ ಸಲ್ಲಿಸಿ, ಗುರುವಿನಿಂದ ಪ್ರಸಾದ (ಬೆತ್ತದಿಂದ) ಪಡೆದು, ಶಾಲೆ ಮುಗಿಯುವ ವೇಳೆಯನ್ನು ನಿರೀಕ್ಷಿಸುವುವು. ಇಷ್ಟರೊಳಗೆ ಉಪಾಧ್ಯಾಯರಿಗಾದರೂ ತಮ್ಮ ಪೇಚಿನಲ್ಲಿ ಊದುಬತ್ತಿ, ಹೊಗೆಸೊಪ್ಪಿನ ಚೂರ್ಣ ಮೊದಲಾದುವುಗಳಿಲ್ಲದಿದ್ದರೆ ಹಗಲನ್ನೇ ರಾತ್ರಿ ಮಾಡುತ್ತಿದ್ದರು! ಸರಿ, ಸಾಲೆ ಬಿಟ್ಟಿತೆಂದರೆ—"ಹೋ" ಎಂಬ ಸ್ವಾತಂತ್ರ್ಯ ಜಯಘೋಷವು ಬಾಲಕರ ಬಾಯಿಂದ ಹೊರಡುವುದು. ತಿರುಗಿ ಮಧ್ಯಾಹ್ನ ಎರಡು ಘಂಟೆಯ ತನಕ ಅವರಿಗೆ ಸ್ವರಾಜ್ಯ ಆ ಬಳಿಕ ತಿರುಗಿ ಬಾಲಕರ ದೊಡ್ಡಿಯು ಸಂಜೆ ಐದರ ತನಕ ಸಾಗುವುದು ಬಾಲಕರಿಗೀಗ ಇನ್ನೂ ಹೆಚ್ಚಿನ ವಿರಾಮ. ಹಾದಿಯುದ್ದಕ್ಕೂ ಅವರು, ಕುಣಿದಾಡಿ ಬಡಿದಾಡಿಕೊಂಡು ಮನೆಗೆ ಸಾಗುವರು. ತೀರ ಹಸಿವಾಗಿದ್ದರೆ ಒಂದು ಮೈಲಿ ದೂರವೂ ಹತ್ತು ನಿಮಿಷದಲ್ಲಿ ಸಾಗುವುದು. ಅದಿಲ್ಲದಿದ್ದರೆ, ಸಂಜೆ ೫ ಘಂಟೆಗೆ ಹೊರಟ ಬಾಲಕರು ೨ ಫರ್ಲಾಂಗು ದೂರವಿರುವ ಮನೆಗೆ ಅತಿ ಕಷ್ಟದಿಂದ ೭ ಘಂಟೆಯೊಳಗೆ ಸೇರುವರು. ಕಾರಣ, ಮನೆಯೆಂಬುದು ನೂರಾರು ಬಾಲಕರ ಪಾಲಿಗೆ, ಸಾಲೆಯ ಮಲತಾಯಿ.

ಮನೆಗೆ ಹೋದಬಳಿಕ ಅವರು ತಿರುಗಿ ಪುಸ್ತಕವನ್ನು ತೆರೆದರೇನೆ ಅವರು ಯೋಗ್ಯ ಹುಡುಗರು. ಅದಿಲ್ಲದೆ ಅವರ ನಾಲಿಗೆಯಿಂದ ಒಂದಕ್ಷರ ಹೊರಟರೆ, ಇಲ್ಲವೆ ಕೈಕಾಲು ಚಲಿಸಿದರೆ, ಬೆನ್ನಿನ ಮೇಲೆ ವ್ಯಾಘ್ರ

ರೇಖೆಗಳು ಬರುವುವು. ಹಿರಿಯರ ಕಲ್ಪನೆಯಂತೆ, ಹುಡುಗರು ಸದಾ ಸಮಾಧಿಸ್ಥರಾಗಿರಬೇಕು.

ನೇಕಡ ೯೦ರಂತೆ ಮಕ್ಕಳನ್ನು ಶಾಲೆಗೆ ಕಳುಹಿಸು ವವರು ಮಕ್ಕಳ ತಂಟೆ ಸಹಿಸಲಾರದೆ ಹಾಗೆ ಮಾಡು ವರು. ಇಂಥ ವಾತಾವರಣದಲ್ಲಿ ಅವರು ನಾಲ್ಕಕ್ಷರ ಗಳನ್ನು ಕಲಿತು, ಸ್ವಲ್ಪ ಗಣಿತದಲ್ಲಿ ಪಾರಾಂಗತರಾದರೆ, ಅಷ್ಟೇ ಯಥೇಚ್ಛವೆನಿಸುವುದು. ಬಳಿಕವರು ಕೇವಲ ೧೦ ವರುಷದವರಾದರೂ ದೊಡ್ಡವರಂತೆ, ಕಾಯಕಷ್ಟ ಗಳನ್ನು ಮಾಡಬೇಕಾಗುವುದು. ಇದು ಸುಧಾಮರ ಮಕ್ಕಳ ಪಾಡು. ಇನ್ನು ಶ್ರೀಮಂತರ ಮಕ್ಕಳಾದರೂ ಇದೇ ಸ್ಥಿತಿಯನ್ನು ಮೀರಿಲ್ಲ. 'ಓದಿನಿಂದಾಗುವು ದೇನು?'—'ಸುಮ್ಮನ ಓದಿನಲ್ಲಿ ಹಣವ್ಯಯಿಸಿ, ಸತ್ತು ಬಿಟ್ಟರೆ ಎಲ್ಲವೂ ವ್ಯರ್ಥ'—ಎಂಬ ಕಲ್ಪನಗಳು ಅವ ರಿಗೆ. ಹೀಗಾಗಿ ಈ ಸರಸ್ವತಿ ಪುತ್ರರಲ್ಲಿ ೩% ರಷ್ಟು ಮಂದಿ ನಗರಗಳನ್ನು ಸೇರಿ ಎತ್ತರ ಶಾಲೆಗಳ ಶಿಕ್ಷಣಕ್ಕ ಮುಂದಾಗುವರು ಒಮ್ಮೆಗೇ ಅವರ ತಲೆಯೊಳಗೆ ಗಣಿತ, ಓದು, ಬರಹ, ದೇಶಭಾಷೆ, ಆಳುವವರ ಭಾಷೆ, ವಿಜ್ಞಾನ, ಖಗೋಳ, ಭೂಗೋಳ, ಇತಿಹಾಸ ವೊದ ಲಾದುವುಗಳು ತುಂಬಿಸಲ್ಪಡುವುವು. ಇವುಗಳಿಗೆಲ್ಲಾ ಕೋವಿದರು ಬರೆದ ಗ್ರಂಥಗಳಿವೆ. ಅವುಗಳಲ್ಲಾ— ಪಠ್ಯಪುಸ್ತಕ, ಓದಿಯೇ ತೀರಲು (ತೀರು=ಸಾಯು?) ಬೇಕಾದ ಪುಸ್ತಕ; ಉಪಪಠ್ಯಪುಸ್ತಕಗಳು, (ಕೇವಲ ಪರೀಕ್ಷಾಸಮಯದಲ್ಲಿ ಚೆನ್ನಾಗಿ ಓದಬೇಕಾದ ಪುಸ್ತಕ

ಗಳಿವು) ಎಂದಿವೆ. ಇವುಗಳಲ್ಲಿ ಬಾಲಕರ ಜೀವನಕ್ಕೆ ನಿಕಟ ಸಂಬಂಧವಿರುವ ಒಂದು ವಿಷಯ ಬಿಟ್ಟು ಮಿಕ್ಕುಳಿದ ಎಂಥ ಪ್ರೌಢ ಜ್ಞಾನವೂ ಸಿಗುವುದು. ಇವುಗಳ ತೂಕದಿಂದಲೇ ಬಾಲಕರ ಮನೋಶಿಕ್ಷಣವು ಎಷ್ಟು ಸಾಗುವುದೆಂದು ಊಹಿಸಬಹುದು ಅದಕ್ಕಾಗಿ ತಯಾರಿಸಿದ ಕೋಷ್ಟಕವನ್ನು ಪರಿಶೀಲಿಸಿರಿ.

| ಪ್ರಾಯ | ಫಾರ್ಮ* | ಹುಡುಗರ ತೂಕ | ಪುಸ್ತಕಗಳ ತೂಕ |
|---|---|---|---|
| ೧೧ | ೧ | ೫೨ ರಾತ್ಲು | ೪೦ ರಾತ್ಲು |
| ೧೨ | ೨ | ೫೫ " | ೫೦ " |
| ೧೩ | ೩ | ೫೮ " | ೬೦ " |
| ೧೪ | ೪ | ೬೦ " | ೮೦ " |
| ೧೫ | ೫ | ೬೫ " | ೧೦೦ " |
| ೧೬ | ೬-SSLC | ೭೦ " | ೧೨೦ " |

*ಫಾರ್ಮ = Form = ರೂಪ = ಅವತಾರ = ಜನ್ಮ.

ಅಂದರೆ ಒಂದೊಂದು ತರಗತಿಯು ಒಂದೊಂದು ಜನ್ಮದಂತೆ 'ಎಂದರ್ಥ'. ಈ ಕೊನೆಯ ತರಗತಿಯವರ ಪುಸ್ತಕದ ತೂಕವನ್ನು ೧೨೦ ರಿಂದ ೧೪೦ ರಾತ್ಲುಗಳಿಗೆ ಏರಿಸುವ ನವಸುಧಾರಣೆಯೊಂದು ನಡೆದಿದೆ.

ಹೀಗೆ ೧೬ ವರುಷಗಳು ಸಂದರೆ ಅವರು ೧೫೦೦ ರೂಪಾಯಿಯ ವರದಕ್ಷಿಣೆಗೂ, ೧೨ ರೂಪಾಯಿ ಮಾಸಾಶನದ ಸರಕಾರಿ ನೌಕರಿಗೂ (ಸಿಕ್ಕಿದರೆ ಮಾತ್ರ)

ಅರ್ಹರಾಗುವರು. ಇವರಲ್ಲಿ ೧೦೦೦ ಮಂದಿ ಪರೀಕ್ಷೆಗೆ ಕುಳಿತರೆ ೩೦೦ ಪಾಸಾಗುವರು. ೧೦೦೦ ಪಾಸುಗಳಿಗೆ ೩೦ ಮಂದಿ ಕಾಲೇಜನ್ನೇರುವರು, ೨೦ ಮಂದಿ ನೌಕರರಾಗುವರು. ಉಳಿದವರು ತಂಡುಲಧ್ವಂಸಮಂಡಳದ ಗೌರವ ಸದಸ್ಯರು. ಇದಕ್ಕೂ ಪ್ರವೇಶ ಸಿಗದವರು ಸುಧಾಮ ಮಂಡಲಕ್ಕೆ ಸೇರುವರು.

ಕಾಲೇಜು. ಕೈಯಿಂದ ಈಜುವುದನ್ನು ಮರೆತು ಕಾಲಿಂದೀಜತೊಡಗಿದರೆ ಕಾಲೇಜು ಆಗುವುದು. ಇಲ್ಲಿ ಇವರು ಎರಡು ವರುಷ ಮಧ್ಯ ಬಾಯಿಹಾಕುವವರಾಗಬೇಕು (Intermediate); ಬಳಿಕ–ದಿಗ್ರಿ ಹೊರಲು ಬರುವದು. ಇವರ ಓದಿನ ಪ್ರಮಾಣವು–ತೀರ ಹೆಚ್ಚಿನದ್ದೇ. ಇವರ ಭವಿಷ್ಯ ಹೀಗಿದೆ: ಮಧ್ಯೆ ಬಾಯಿಹಾಕುವವರ ವರದಕ್ಷಿಣೆ ೩೦೦೦. ವೇತನ (ಸಿಕ್ಕಿದರೆ ಮಾತ್ರ) ೩೦.

ಬಿ ಎ.—ಗಳಿಗೆ ವರದಕ್ಷಿಣೆ ೪೦೦೦ಕ್ಕೆ ಮೇಲ್ಪಟ್ಟು; ವೇತನ ೬೦. ಇವರಾದರೂ ವೇತನದ ಮೇಲಿದುರಾಭಿಮಾನವಿರಿಸದೆ ೧೫ ರೂಪಾಯಿಗಳಿಗೂ ಸಿಗುತ್ತಲಿರುವರು. ಆದರೆ ಈ ವ್ಯಾಸಂಗದ ಒಂದು ಶೋಭೆಯು ಸರಸ್ವತಿಗೆ ತೀರಾ ಮನಸ್ಸಿಗೆ ಬಂತು. "ವಿದ್ಯೆಯನ್ನು ವಿದ್ಯೆಗಾಗಿ ಕಲಿಯಬೇಕಂತೆ." ಇವರೆಲ್ಲರೂ ಆ ಮಾದರಿಯವರೇ—ಕಾರಣ, ಯಾರೊಬ್ಬರಿಗೂ "ಏಕೆ, ಕಲಿಯುತ್ತಿರುವಿ" ಎಂಬ ಪ್ರಶ್ನೆಗೆ ಉತ್ತರ ಕೊಡಲುಬಾರದು. ಆದರೂ ಕಲಿಯುತ್ತಿರುವುದೆಂದರೆ ಎಂಥ ಕರ್ಮ ಸನ್ಯಾಸ?

ಇನ್ನು ಕಲಿತ ಜ್ಞಾನವನ್ನಾದರೂ, ಕಲಿತುದಕ್ಕಿಂತಲೂ ತೀವ್ರದಲ್ಲಿ ಮರೆಯುವ ಅಪೂರ್ವ ಜ್ಞಾಪಕ ಶಕ್ತಿಯು ಇವರಿಗಿದೆ.

ಜನರು ಕೇವಲ ಹೊಟ್ಟೆ ಪಾಡಿಗೇ ಬದುಕುವುದೆಂದರೆ ಮಾನಸಿಕ ಜೀವನಕ್ಕೆ ಅಪಮಾನವೆಂಬುದರಿಂದ ಸರಕಾರದವರು ತಮ್ಮ ಶಿಕ್ಷಣ ಕ್ರಮದಲ್ಲಿ ಕೈಗಾರಿಕೆಯ ಶಿಕ್ಷಣವನ್ನು ಕೊಡುವ ಸಾಹಸ ಮಾಡಲು ಮನಸ್ಸಿಲ್ಲದವರಾಗಿದ್ದಾರೆ.

ಇನ್ನು ಈ ಮಾನವ ಜಗದಲ್ಲಿ ವಿದ್ಯಾರ್ಜನೆಗೆ ಗುರುಸೇವೆಯಂತಹ ಕಠಿಣ ತಾಪಗಳಿಲ್ಲ. ಕಾಸಿದ್ದವನು ತಲೆಯಿಲ್ಲದಿದ್ದರೂ ಕಲಿಯಲು ಬರುತ್ತದೆ.

ಎಂದು ನರನು ಶಾಲಾ ಕಾಲೇಜುಗಳಿಂದ ಹೊರಬರುವನೋ ಅಂದಿಗೆ ಅವನ ವಿದ್ಯೆಯು ಮುಗಿಯಿತು. ಅಲ್ಲಿಂದ ಮರೆಯುವ ಸಂಗತಿಗಳಿರಬೇಕೇ ವಿನಹ ಕಲಿಯುವ ವಿಷಯಗಳಿಲ್ಲ. ಆದರೆ ಕೆಲವು ಚಳವಳಗಾರರು, ಭ್ರಾಂತಿನಿಂದ ಸಾಯುವ ತನಕ ಕಲಿಯುವಿಕೆಗೆ ವಿಶ್ರಾಂತಿಯಿಲ್ಲವೆಂದು ತಿಳಿಯುವರು. ಅವರ ದೆಸೆಯಿಂದ ಪುಸ್ತಕಗಳು, ವರ್ತಮಾನ ಪತ್ರಗಳು, ಎಲ್ಲಾ ಹೊರಡುತ್ತಿವೆ. ಆದರೆ ಇವಾದರೂ 'ಓದಲಾರೆವೆಂಬ' ವಿದ್ಯಾವಂತರ ಸತ್ಯಾಗ್ರಹ, ದೃಢ ಪ್ರತಿಜ್ಞೆಗಳ ಮುಂದೆ ಎಲ್ಲಿ ನಿಲ್ಲಬೇಕು? ಇಂಥ ಪಣತೊಟ್ಟ ದೇಶಗಳಲ್ಲಿ ಕರ್ಣಾಟಕ ಪ್ರಾಂತವು ತೀರ ಮುಂದಾಳು. ಆದರೆ ಇಂಥವರಲ್ಲೂ ಕೆಲವು ಕುಮತಿಗಳಿರುವರು. ಅವರಿಗೆ

ವಿದ್ಯಾರ್ಥಿ ಜೀವನದ ಓದುವಿಕೆಯ ವ್ಯಸನವನ್ನು ಬಿಡಲು ಬರುವಂತಿಲ್ಲವಾದುದರಿಂದ ಅವರು ಈ ಉಭಯ ಅತಿಗಾಮಿಗಳಿಗೂ ಸಿಟ್ಟಾಗಬಾರದೆಂದು "ನಾವು ಹಣವ್ಯಯಿಸಿ ಓದುವುದಿಲ್ಲ"—ಎಂಬ ಪ್ರತಿಜ್ಞೆ ಹೊರುವರು.

ಇಷ್ಟರವರೆಗೆ ಅರ್ವಾಚೀನ ಶಿಕ್ಷಣಪದ್ಧತಿಯನ್ನು ಹೇಳಿದೆವು. ಆದರೆ ಎಲ್ಲರೂ ಇದಕ್ಕ ಮರುಳಾಗಿಲ್ಲ. ಅವರಲ್ಲಿ ಪೂರ್ವಾಭಿಮಾನ ಹೋಗದಿದ್ದುದರಿಂದ ಅವರು ಗೀರ್ವಾಣಶಿಕ್ಷಣಕ್ಕ ಅವಕಾಶಕೊಟ್ಟಿರುವರು. ಅವರಿಗೂ ಮಠ, ಶಾಲೆ, ಕಾಲೇಜುಗಳಿವೆ. ಶಿರೋಮಣಿ, ತುಳಸೀಮಣಿ, ಘಂಟಾಮಣಿ ಇತ್ಯಾದಿ ಬಿರುದುಗಳಿವೆ. ಇವರಲ್ಲಿ—ಎರಡು ವರ್ಗದವರಿರುವರು. ಒಂದು ವರ್ಗದವರು (ಇವರ ಸಂಖ್ಯೆ ೧೦೦ಕ್ಕೆ ೯೦) ಯಾವ ಬಗೆಯ ನಿಘಂಟೂ ಇಲ್ಲದೆ ಹಲವು ಶಾಸ್ತ್ರಗಳ ಪಾಠ ಮಾಡಿ ವಿದ್ವನ್ಮಣಿಗಳೋ, ಬ್ರಹ್ಮಶ್ರೀಗಳೋ ಆಗುವರು. ಉಳಿದರ್ಧದವರು ಕಾವ್ಯ, ನಾಟಕ ಓದಿ—ಮಣಿಗಳಾಗುವರು. ಈ ಎರಡು ವರ್ಗದವರಲ್ಲೂ ಕೆಲವು ನಿಷ್ಠೆಗಳಿರುತ್ತವೆ. ಅವರು ತಮ್ಮ ಸಾಲೆಗಳ ಹೊಸ್ತಿಲನ್ನು ಮೊದಲನೆ ಬಾರಿ ಸೇರುವಾಗಲೇ ಈ ಕೆಳಗಣ ಪ್ರತಿಜ್ಞೆಗಳನ್ನು ಹೊರುವರು.

೧. ಸಂಸ್ಕೃತದಲ್ಲಿರುವುದೆಲ್ಲ ಶಾಸ್ತ್ರ. ಅದನ್ನು (ಬೇರೆಯವರು, ಅನುಕೂಲವಾದರೆ ತಾವು) ವಿಚಾರಬಾರದು.

೨. ದೊಡ್ಡ ಗ್ರಂಥಗಳೆಲ್ಲಾ ಗ್ರಂಥಕರ್ತನ ಹೆಸರಿಲ್ಲದಿದ್ದಲ್ಲಿ ವ್ಯಾಸ ಪ್ರಣೀತವಾದುವುಗಳು. ತೀರ ದೊಡ್ಡ ಗ್ರಂಥಗಳಾದರೆ ದೈವ ಪ್ರಣೀತವಾದುವು.

೩. ನಾನಿನ್ನು, ಈ ಗ್ರಂಥ ಪ್ರಮಾಣಗಳನ್ನು ನನ್ನ ಮಿದುಳನ್ನುಪಯೋಗಿಸಿ ಅಪಮಾನಿಸುವುದಿಲ್ಲ.

ಅವರು ವಿದ್ಯಾವಂತರಾಗಿ ಹೊರಗೆ ಬರುವಾಗಲಾದರೂ ಈ ಉಚ್ಚ ಧ್ಯೇಯಕ್ಕೆ ಶಿರವಾಗಿ ಬರುವರು ಇದೇ ಮಾದರಿಯಲ್ಲಿ ಕೆಲವು ಉರ್ದು ಶಾಲೆಗಳಿವೆಯಂತೆ. ಆದರೆ ಹಿಂದುಗಳಾದವರು ಮುಸಲ್ಮಾನರ ಶಾಲೆಗಳಿಗೆ ಹೋಗುವುದರಿಂದ ಅವರ ಶಾಸ್ತ್ರಾರ್ಥಗಳು ತಿಳಿದು, ಜಾತಿಭಂಗವಾದೀತೆಂದು ಅವರ ಚತುರ್ಮುಖಿಯು ಸೂಚಿಸಿದ ನಿಮಿತ್ತ—ಇವರು ಪ್ರವೇಶಮಾಡಲಿಲ್ಲ.

ಆದರೆ ಒಂದು ವಿಚಾರ ನಿಜ. ಈ ವಿದ್ಯಾರಣ್ಯದಲ್ಲಿ ೧೦—೧೪ ವರುಷಗಳ ವಾಸಮಾಡದಿದ್ದರೂ, ಅವನಲ್ಲಿ ಸಾಕಷ್ಟು ಲಕ್ಷ್ಮೀಪ್ರಸಾದವಿದ್ದರೆ, ಅವನು ತೀರ ಹೆಚ್ಚಿನ ವಿದ್ಯಾವಂತನೆನಿಸಿಕೊಳ್ಳುವನು. ಎಂಥೆಂಥ ಪಂಡಿತರೂ ಅವನ ಮುಂಪೆ ತಲೆವಾಗುವರು. ಈ ಕಾರಣದಿಂದ ಹಲವರ ಮನಸ್ಸು ಸರಸ್ವತೀ ಪ್ರಸಾದಕ್ಕೂ ಮಿಗಿಲಾಗಿ ಲಕ್ಷ್ಮೀಪ್ರಸಾದದ ಕಡೆಗೆ ಹೆಚ್ಚಾಗಿ ಹರಿಯುವುದು. ಇದನ್ನು ಲಕ್ಷ್ಮೀಪತಿಯ ನಾಭಿ ಕಮಲದಲ್ಲಿ ಹುಟ್ಟಿದ ಬ್ರಹ್ಮನ ಪತ್ನಿಗೆ ಖಂಡಿಸುವ ಸಾಹಸ ಬರಲಿಲ್ಲ.

## ಪ್ರಕರಣ ೨೨.

## ವಾಲ್ಮೀಕಿಯ ಓಡಾಟ.

ವಿದ್ಯಾ ಮಂಡಲದಲ್ಲಿ, ಸಾಹಿತ್ಯಲೋಕವನ್ನು ವಿಚಾರಿಸುವ ಕೆಲಸವಿದೆ. ಅದರಲ್ಲಿ ವಾಲ್ಮೀಕಿಯು ಪ್ರಸಿದ್ಧನೆಂಬ ತಿಳುವಳಿಕೆಯಿಂದ ದೇವದೂತ ಗಣವು ವಾಲ್ಮೀಕಿಯ ಹೆಸರನ್ನು ಸೂಚಿಸಿದುದು. ಆವನಲ್ಲಿ ತಾನೊಬ್ಬ ಸಾಹಿತ್ಯವಿಶಾರದ, ಕವಿಕುಲಕಂಠೀರವನೆಂಬ ತಿಳುವಳಿಕೆಯುಂಟಾಗಿರಬೇಕು. ಆದರೆ, ಆವನ ಕಾಲದ ಪರಿಸ್ಥಿತಿಯೇನು? ಇಂದಿನ ಪರಿಸ್ಥಿತಿಯೇನು? ಆಗ ಏನು, ಒಟ್ಟು ಹತ್ತೆಂಟು ಗ್ರಂಥಗಳಿದ್ದುವೋ ಇಲ್ಲವೋ, ಅವೂ ಕೆಲವೊಂದು ಮಂದಿಯ ಗಂಟಲಲ್ಲಿ. ಆದರೀಗ ಸಾಹಿತ್ಯರಾಜ್ಯದಲ್ಲಿ ಅಂಥ ಗಿಳಿಗಳಿಲ್ಲ; ಇರಬೇಕೆಂದು ಹೇಳಿದರೂ ಶಕ್ಯವಿಲ್ಲ. ಪುಸ್ತಕಗಳ ಸಂಖ್ಯೆಯು ಒಂದೆರಡೇ! ಭರತಖಂಡದಲ್ಲಿ ವಾಲ್ಮೀಕಿ ಕಾಲದ ಗೀರ್ವಾಣ ಗ್ರಂಥಗಳ ಬೆಳವಣಗೆಯಿಲ್ಲದಿದ್ದರೂ ಉಳಿದ ಗ್ರಂಥಗಳು ನಾಕಷ್ಟಿವೆ ಭಾಷೆಯಾದರೂ ಒಂದೆರದೇ? ಹೀಗಾಗಿ ಆವನು ಬಹು 'ವಜೀತಿ'ಗೆ ಬಂದನು ಚತುರ್ಮುಖಿಯನ್ನು ಬಿಟ್ಟು ಶತಮುಖಿಯು ಬಂದರೂ ಸಾಗುವ ಕೆಲಸವಲ್ಲ. ಅದನ್ನು ಕಂಡೇ ಸರಸ್ವತಿಯು—"ವಾಲ್ಮೀಕಿ, ಈ ಒಂದು ಭಾರ ನಿನ್ನ ತಲೆಯ ಮೇಲೆ" ಎಂದಳು. ಅಧ್ಯಕ್ಷರ ಆಜ್ಞೆ; ಶಿರಸಾವಹಿಸುವುದೇ ಸರಿ.

ಈ ಪ್ರಸಂಗದಿಂದ ತಪ್ಪಿಸಿಕೊಳ್ಳಲು, ಸುಲಭೋಪಾಯವನ್ನು ಅವನು ಹಿಡಿಯಬೇಕಾಯಿತು ಅದಕ್ಕಾಗಿ ತನ್ನ ಚತುರ್ಮುಖಿಯೊಡನೆ ಕೆಲವು ಪ್ರಶ್ನೋತ್ತರಗಳನ್ನು ಮಾಡತೊಡಗಿದನು

ವಾಲ್ಮೀಕಿ:— ಭರತಖಂಡದಲ್ಲಿನ ಭಾಷೆಗಳೆಷ್ಟು!

ಚ. ಮುಖಿ:— ಪ್ರಾಮುಖ್ಯವಾಗಿ ಇಂಗ್ಲಿಷು, ಹಿಂದಿ, ಬಂಗಾಲಿ, ಮರಾಠಿ, ತೆಲುಗು, ತಮಿಳು, ಕನ್ನಡ, ಮಳಯಾಳವೆನ್ನಬಹುದು.

ವಾಲ್ಮೀಕಿ:— ಇವುಗಳಲ್ಲಿ ಯಾವ ಯಾವ ಭಾಷೆಯಲ್ಲಿ ಎಷ್ಟೆಷ್ಟು ಗ್ರಂಥಗಳಿರಬಹುದು.

ಚ. ಮುಖಿ:—(ಮಾತಾಡದಾದನು ಅವನಿಗದೆಲ್ಲಿ ತಿಳಿಯಬೇಕು.)

ವಾಲ್ಮೀಕಿ:— ಏಕೆ, ಮೌನವಾದಿರಿ?

ಚ. ಮುಖಿ:— ಇವೆ ಬಹಳ; ಸಂಖ್ಯೆ ಹೇಳಿ ತೀರದು. ಆದರೆ, ಮುಖ್ಯವಾಗಿ ಇಂಗ್ಲಿಷು ಗ್ರಂಥಗಳೇ ಅಧಿಕ. ಇತರ ಭಾಷೆಗಳಿಗೆ ಬಂದ ಅರ್ವಾಚೀನ ಸ್ಫೂರ್ತಿಯು ಇದರಿಂದಲೇ.

ವಾಲ್ಮೀಕಿ:— ಇದು ನಾಡಭಾಷೆಯೇ.

ಚ. ಮುಖಿ:— ಅಲ್ಲ. ಆದರೆ ಶಾಸಕರದು.

ವಾಲ್ಮೀಕಿ:— ಅದರ ಪ್ರಚಾರ ಬಹಳ ಇರಲು ಕಾರಣ?

ಚ. ಮುಖಿ:— ಎಂಥ ಪ್ರಶ್ನೆ ನಿಮ್ಮದು? ಯಥಾ ರಾಜಃ ತಥಾ ಪ್ರಜಾಃ.

ವಾಲ್ಮೀಖಿ:—ಇರಲಿ, ಆ ಭಾಷೆಯಲ್ಲೆಷ್ಟು ಗ್ರಂಥ ಗಳಿರಬಹುದು?

ಚ. ಮುಖಿ:—ಅದಕ್ಕೆ ಮಿತಿಯೇ ಇಲ್ಲ.

ಹೀಗೆಂದು ಆವನಿಗೆ ಚತುರ್ಮುಖಿಯು ಕೊನೆ ಮರ, ಬಡೋದೆ ಮೊದಲಾದಲ್ಲಿನ ಪುಸ್ತಕ ಭಂಡಾರ ಗಳನ್ನು ತೋರಿಸಿದನು. ವಾಲ್ಮೀಕಿಯ ಪಿತ್ತವೆಲ್ಲಾ ಕೆದರಿತು ಬಂದ ಕೆಲಸವು ಆತ್ಮಸಾಕ್ಷಿಗೆ ಸರಿಯಾಗಿ ಸಾಗಲು ಇಂಗ್ಲಿಷು ಕಲಿಯುವುದು ತೀರ ಆವಶ್ಯವೆನಿ ಸಿತು. ಚತುರ್ಮುಖಿಯು ಬಳಿ ಕುಳಿತು ಕೆಲವು ಸಮಯ ವ್ಯಾಸಂಗಮಾಡಿದನು ದೈವೀ ಮಿದುಳಿನ ಬಲದಿಂದ ತೀವ್ರ ಓದುವುದಾಯಿತು. ಬಳಿಕ ದೇಶದ ಒಂದು ಪ್ರಸಿದ್ಧ ಪುಸ್ತಕ ವಿಕ್ರಯಾಲಯಕ್ಕೆ ಹೋದನು. ಅಲ್ಲಿ—"ತೀರ ಜನಪ್ರೀತವಾಗಿರುವ ಗ್ರಂಥಗಳನ್ನು ಕೊಡಿರಿ" ಎಂದನು. ಅವನ ಮುಂದೆ ಮ್ಯಾನೇಜರನು ಒಂದು ೫೦೦೦ ಪುಟದ ಕೆಟಲಾಗನ್ನು ಇರಿಸಿದನು. ಏನು ತಿಳಿದಿದೆಯೆಂದು ಆರಿಸಬೇಕು? "ನೀವೇ ಆರಿಸಿ ಕೊಡಿರಿ. ನಿಮ್ಮಲ್ಲಿ ಹೆಚ್ಚಿಗೆ ಖರ್ಚಾಗುತ್ತಿರುವ ಪುಸ್ತ ಕಗಳನ್ನು ಕೊಡಿರಿ"—ಎಂದನು. ವ್ಯವಸ್ಥಾಪಕನು ತನ್ನ ಜಾಣ್ಮೆಯನ್ನೆಲ್ಲಾ ಉಪಯೋಗಿಸಿ ೩,೦೦೦,೦೦೦,೦೦೦ ಪ್ರತಿಗಳಿಗೂ ಹೆಚ್ಚಾಗಿ ಮುದ್ರಣಗೊಂಡ ಪುಸ್ತಕಗಳ ಹೊರೆಯೊಂದನ್ನು ಮಾಡಿದನು. ವಾಲ್ಮೀಕಿಯು ಹಣ ಕೊಟ್ಟು ಅವನ್ನು ಅತಿ ಆತುರದಿಂದ ಕೊಂಡುಕೊಂ ಡು ಮನೆಗೆ ಬಂದನು ಇನ್ನು ತನ್ನದೊಂದು "ಓದು

ಮನೆ" ಯಾಗದೆ ನಿರ್ವಾಹವಿಲ್ಲೆಂದು ಮಂಗಳೂರಿಗೆ ಬಂದು, ಅಲ್ಲಿ ಒಂದು ಮನೆಯನ್ನು ಬಾಡಿಗೆಗೆ ಕೊಂಡು, ಅವುಗಳ ಕದಗಳನ್ನೆಲ್ಲಾ ಮುಚ್ಚಿಸಿ ತಾನು ಒಳಗೆ ಕುಳಿತು ಬಾಗಿಲು ಹಾಕಿಸಿಬಿಟ್ಟು ಪರಿಶ್ರಮಕ್ಕೆ ತೊಡಗಿದನು.

ಹೀಗೆಂದರೆ, ವಾಚಕರು–ಊಟ 'ಆಹಾರ'–ಎಂದು ನಡುವೆ ಬಾಯಿಹಾಕಬಹುದು. ಅವನು ತಪಸ್ವಿ ಯೆಂಬುದು ಅದಕ್ಕೆ ಉತ್ತರ.

ತಂದ ಪುಸ್ತಕಗಳ ಹೆಸರನ್ನು ಒಂದೊಂದಾಗಿ ನೋಡತೊಡಗಿದನು. ರೈನಾಲ್ಡನ Loves of the Harem; Mysteries of the Court of London; ಇತ್ಯಾದಿ ಪುಸ್ತಕಗಳು, ಮಿಸ್। ಲೌವ್‌ಡೇಲಳ–Pretty Backs; Oh, One Kiss & no more Oh, Woman–ಎಂಬ ಗ್ರಂಥಗಳನ್ನು, ಮಿ। ಬಾರ್ಬರ ಬೆನೆಟ್‌ನ–The Garden of Youth; The Pleasures of Youth; Youth; Behold Her — ಎಂಬ ಗ್ರಂಥಗಳಿದ್ದವು ಇನ್ನು ಹತ್ತೆಂಟು ಪತ್ತೆದಾರಿ ಕಥೆ ಗಳಿದ್ದುವು ಇವೆಲ್ಲವುಗಳಿಗಿಂತಲೂ ಅತಿ ಹೆಚ್ಚಾಗಿ ಮುದ್ರಿತವಾದ ಪುಸ್ತಕಗಳೆಂದರೆ—Sex in Natures Garden; Get Rid of the Family Burden; Marriage a nuisance ಎಂಬವುಗಳು ಆದರೆ ಈ ಯಾವತ್ತು ಗ್ರಂಥಗಳ ಸಂಖ್ಯೆಯು ಲಂರಷ್ಟಾಗುವುದಾ ದರೂ ಬೆಲೆ ಕೇವಲ ೬೦ ರೂಪಾಯಿಗೆ ಮೀರಲಿಲ್ಲೆಂಬು ದರಿಂದ ಜತೆಯಲ್ಲಿ ಸ್ವಲ್ಪ ಹೆಚ್ಚಿನ ಬೆಲೆಯ ಪುಸ್ತಕಗ

ಳನ್ನು ನೇರಿಸಿದ್ದನು. ಅವುಗಳಲ್ಲಿ ಹಾರ್ಕೆನನ— Redemption; The Playhouse; The Spoiled garden ಎಂಬಿತ್ಯಾದಿ ನಾಟಕಗಳೂ, "The Cup of Tears", "Were I the Master" – ಎಂಬೆರಡು ಕಾದಂಬರಿಗಳೂ, ಇನ್ನು ಡಾ। ಗ್ರೇವಿಸ್‌ನ–"Let me weep for you" – ಎಂಬ ಗ್ರಂಥ ಮೊದಲಾದುವುಗಳಿದ್ದುವು. ಹಾರ್ಕೆನನನ್ನು ಅವನ ಗ್ರಂಥಗಳ ದೆಸೆಯಿಂದ ಅವನ ದೇಶೀಯರು ಕೊಲೆ ಮಾಡಿದ್ದರು ಗ್ರೇವಿಸ್ ನೀಗ ತನ್ನ ಸರಕಾರದವರ ಕಟ್ಟಪ್ಪಣೆಯಿಂದ ರಾಜ್ಯಭ್ರಷ್ಟನು. ಇವರ ಸಾಲಿನ ಮೂರನೆ ಗ್ರಂಥಕರ್ತನಿರುವನು. ಅವನ ಹೆಸರು ಪಿಕೂಟ. ಈ ಪುಸ್ತಕಗಳ ರಾಶಿಯಲ್ಲಿ "The Mad Trio" ಎಂಬಿನ್ನೊಂದು ಗ್ರಂಥವಿತ್ತು. ಹೆಸರಿನ ಮೇಲಿಂದ ವಾಲ್ಮೀಕಿಯು ಅದನ್ನು ಮೊದಲು ಎತ್ತಿಹಿಡಿದನು. ನೋಡಹೋಗಲು ಅದು ಮೇಲಿನ ಮೂವರ ಗ್ರಂಥಗಳ ಮೇಲೆ ಮಿ। ಬ್ರಾಡ್‌ಶಾ ಎಂಬ ವಿದ್ವಾಂಸನ ತುಲನೆಯಾಗಿತ್ತು. ಆ ಗ್ರಂಥದಲ್ಲಿ ಬ್ರಾಡ್‌ಶಾನ ಚಿತ್ರವೂ ಇತ್ತು. ಚಿತ್ರದ ಕೆಳಗೆ "ಅತಿ ಶ್ರೇಷ್ಠ ಸಾಹಿತ್ಯ ತುಲನಾಕರ್ತ" – ಎಂದಿತ್ತು.

ಅವನ ಅಭಿಪ್ರಾಯವೇನೆಂದು ನೋಡುವ ಕುತೂಹಲವಾಯಿತು. ಪುಸ್ತಕದ ೫೦೦ ಹಾಳೆಗಳನ್ನು ಅಂದೇ ಮುಗಿಸಿದನು ಅದರಲ್ಲಿ ಈ ಮೂವರು ಹುಚ್ಚರನ್ನು ಎಷ್ಟು ನಿಂದಿಸಬೇಕೋ ಅಷ್ಟು ನಿಂದೆಗಳಿದ್ದುವು. "ಇವರು ಬದುಕಿರುವಾಗಲೇ ಸಾವಿನ ಆಚೆಗೆ ಇಣಕುವವರು;

ಬದುಕುವುದು ಸಾವಿನ ಚಿಂತೆಗಾದರೆ, ಬದುಕಬೇಕೇಕೆ?" ಎಂದು ಅವರ ಧ್ಯೇಯವನ್ನೂ ಖಂಡಿಸಿ ಒಂದು ಭಾಗ ಅವರ ಪಾತ್ರ, ಭಾವ, ಕಥೆಗಳನ್ನು ಖಂಡಿಸಿ ಇನ್ನೊಂದು ಭಾಗ. ಅದರಲ್ಲಿ–"ಮನಸ್ಸು ತೀರ ಭ್ರಾಂತವಾದರೆ ಆಗ ಇಂಥ ವಿಚಾರಗಳು ಹೊರಡುವುವು ಇವರ ಪಾತ್ರಗಳಲ್ಲಿ ಯಥಾತ್ಮಿಕತೆಯಿಲ್ಲ (Realism). ಈ ಭೂತಪ್ರೇತಗಳ ಕಥೆಯು ಬದುಕಿರುವವರ ಸಲುವಾಗಿ ಬರೆದುದಲ್ಲ. ಕಾರಣ ಅಂಥ ಮಾನವರು ನಮ್ಮಲ್ಲಿ ಜೀವಿಸಿಲ್ಲ"— ಎಂಬ ಎರಡನೇ ಭಾಗವಿದೆ. ಒಟ್ಟಾರೆ ಅವರ ಶೈಲಿ ಕ್ರಮಗಳನ್ನು ನಿಂದಿಸಲಾರದೆ - "ಆಹಾ! ಇಂಥ ಲೇಖನ ಶಕ್ತಿಯು ಹುಚ್ಚರ ಕರದಲ್ಲಿ ಸಿಗಬೇಕೇ?"— ಎಂದಿರುವನು.

ಈ ವಿಮರ್ಶೆಯನ್ನೋದಿ, ಆ ಗ್ರಂಥಗಳನ್ನೋದುವ ಆತುರವಾಯಿತು. ಆದರೆ ಬ್ರಾಡಶಾನಂತೆ— ಅವುಗಳನ್ನು ನಿಂದಿಸುವ ಮನವು ಅವನಿಗಾಗಲಿಲ್ಲ. ಹೆಚ್ಚೇನು, ಓದಿ ಅವನ ಕಣ್ಣಿಂದ ಆನಂದಭಾಷ್ಪಗಳೇ ಸುರಿದುವು. ಇವು ಕೋಟಿಗಟ್ಟಲೆಯಿಂದ ವಿಕ್ರಯವಾಗಿರಬೇಕೆಂದು ಪ್ರಥಮ ಹಾಳೆಯನ್ನು ನೋಡಿದರೆ- ಪುಸ್ತಕದ ಮುದ್ರಣವು ೧೭೫೫ರಲ್ಲಿ ಆಗಿತ್ತು. ಅದೂ ಎಷ್ಟು ಪ್ರತಿಗಳು? ೨೦೦೦ ಮಾತ್ರ. ಇನ್ನೂ ಖರ್ಚಾಗದೆ ಉಳಿದವೆ!

ಇದನ್ನು ಕಂಡೊಡನೆ ತೀರ ಹೆಚ್ಚು ಖರ್ಚಾದ ಪುಸ್ತಕಗಳನ್ನು ತೆರೆಯತೊಡಗಿದನು. Sex in nat-

ures Garden, Get Rid of the family burden.
ಎಂಬ ಗ್ರಂಥಗಳನ್ನು ತೆರೆದನು. ಅವುಗಳಿಗೂ ಬ್ರಾಡ
ಶಾನ ಮುನ್ನುಡಿಗಳಿದ್ದುವು. ಒಬ್ಬನೇ ಲೇಖಕನು.
ಮುನ್ನುಡಿಯಲ್ಲಿ-"ಇಂಥ ಗ್ರಂಥಗಳಿಗೆ ಮುನ್ನುಡಿ ಬರೆ
ಯುವುದೆಂದರೆ ಅಪೂರ್ವ ಆನಂದ ಈ ಗ್ರಂಥವನ್ನು
ಕುರಿತು ತುಲನೆಯೆಂದರೆ, ಮ್ಯಾಕಲ್ ಎಂಜೆಲೋವಿನ-
ವಿಗ್ರಹಗಳಿಗೆ ಮಸಿ ಬಳಿದಂತೆ! ಓದಿದರೆ ವಿಷಯವು
ಶಾಸ್ತ್ರೀಯವೆಂದು ಹೊಳೆಯಬಹುದಾದರೂ ಲೇಖಕರು
ಅದಕ್ಕೆ ಕಾವ್ಯದ ಶಾಲನ್ನು ಹೊದೆಸಿರುವರು. ವಿಷಯ
ಗಳನ್ನು ಆಧುನಿಕ ವಿಚಾರಶೀಲನು ಪರಿಶೀಲಿಸಲೇ ಬೇ
ಕಾದುದು. ಮಿ॥ ಹೆವನ್‌ಸ್ಟಿನನ ಲೇಖನದಲ್ಲಿ ಉಜ್ವಲತ
ಯಿದೆ, ಸ್ಫೂರ್ತಿಯಿದೆ, ನಾವೀನ್ಯವಿದೆ, ಮಾಧುರ್ಯ
ವಿದೆ; ವಿಷಯದಲ್ಲಿ ಪ್ರೌಢತೆಯಿದೆ, ವಿವೇಕವಿದೆ; ರಚ
ನೆಯಲ್ಲಿ ಅತ್ಯದ್ಭುತ ಸೊಗಸಿದೆ"-ಎಂದು ಬರೆದಿರುವನು.

ವಾಲ್ಮೀಕಿಯು ಓದಿ ಓದಿ ನಿದ್ರಿಸಿದನು. ತಿರುಗಿ
ಮುಂದರಿಸಿದನು. ಹಟಮಾರಿಯಂತೆ ಮುಗಿಸದೆ ಬಿಡ
ಲಿಲ್ಲ "ಇದನ್ನು ಶುಕಮುನಿಯು ಓದಬೇ
ಕೆಂದು"—ಉದ್ಗಾರತೆಗೆದನು. ಅವನ ಕಣ್ಣುಗಳಿಂದ
ಭಾಷ್ಪಗಳುದುರಿದುವು "ಆಹಾ! ಸರಣಿ ರಚನೆಗಳೆಲ್ಲ
ರಂಭೆಯ ಸೌಂದರ್ಯ ಸಾಹಸಗಳಂತಿವೆ!"—ಎಂದು
ಅಬ್ಬರಿಗೊಂಡನು. ನಂತರ ಉಳಿದ ಪುಸ್ತಕಗಳ
ಪಾರಾಯಣವು ಸಾಗಿತು ಆ ಪುಸ್ತಕಗಳನ್ನೆಲ್ಲಾ ಒಂದರ
ಮೇಲೊಂದಿರಿಸಿ, ಅವು ಪಾರದರ್ಶಕವೆಂಬ ಭಾವನೆ

ಯಿಂದ ತನ್ನ ಕಲ್ಪನಾಪ್ರಪಂಚದಲ್ಲಿ ಇರಿಸಿ, ಸಿರೀಕ್ಷಿಸಿದನು. ಆಗ "ನಾರಿ, ನೀನಿಂದು ನರರ ನಾರಾಯಣಾನು." ಎಂಬ ದೃಶ್ಯವು ಅವನಿಗೆ ಕಾಣಿಸಿತು. ಮಾನವನ ಊಹೆ, ಭಾಷಾಸರಣಿ, ರಚನಾಶಕ್ತಿಗಳೆಲ್ಲವು ಈ ಸತ್ಯವನ್ನು ಚಿತ್ರಿಸಲು ಶ್ರಮಿಸುತ್ತಿದ್ದಂತೆ ಕಂಡಿತು.

ಪತ್ತೇದಾರಿ ಕಾದಂಬರಿಗಳಲ್ಲಿ — ನರರ ಇದೇ ಅಧಿಷ್ಠಾತ್ರಿಯ ಕೈಗೂಸಾಗಿ ಸುವರ್ಣದ ಬೊಂಬೆಯೊಂದಿದ್ದಂತೆ ಕಂಡಿತು.

ಅವನು ನಾಟಕಗಳನ್ನು ತೆಗೆದನು, ಕಾದಂಬರಿಗಳನ್ನು ತೆಗೆದನು, ಕವಿತೆಗಳನ್ನೋದಿದನು ಎಲ್ಲವುಗಳಲ್ಲಾ ಸಂಚರಿಸಿದ ಶಕ್ತಿಯೊಂದೇ.

ಸರಿ ಅವನ ಓದುಮನೆಯ ಬಾಗಿಲು ತೆರೆಯಿತು. ತಿರುಗಿ ಅವನು ಅದೇ ಪುಸ್ತಕವಿಕ್ರಯಾಲಯಕ್ಕೋಡಿದನು. ಈಗ ಪುಸ್ತಕಗಳನ್ನು ಕೊಳ್ಳುವುದಕ್ಕಲ್ಲ. ಗಿರಾಕಿಗಳನ್ನು ನೋಡುವುದಕ್ಕೆ. ಗಿಳಿ ವಯಸ್ಸಿನಿಂದ, ಯಮರಾಯನ ಅತಿಥಿಗಳ ವರೆಗೂ ಗಿರಾಕಿಗಳಿದ್ದರು. ಶಾಲಾ ಹುಡುಗರಿಗೆ ಅಂಥ ಪುಸ್ತಕಗಳಿದ್ದರೆ ಅನ್ನ ಬೇಡ, ನಿದ್ರೆ ಬೇಡ; ಹೆಚ್ಚೇನು, ಅವರ ಪಠ್ಯಪುಸ್ತಕಗಳಲ್ಲಿ ಕೆಲವು ಆ ಮಾದರಿಯವಿದ್ದುವು.

ಈಗ ವಾಲ್ಮೀಕಿಯ ದೃಷ್ಟಿಯು ಪುಸ್ತಕಾಲಯಗಳಿಗೆ ಹರಿಯಿತು! ಅವನು ಕೂನೆಮರಾ ಮುಂತಾದ ಪುಸ್ತಕಾಲಯಗಳಲ್ಲಿ ಕಾಲಕಳೆಯತೊಡಗಿದನು. ಅಲ್ಲಿ, ಹಾರ್ಕರ್ನ್, ಪಿಕೊಟ, ಗ್ರೇವಿಸರವರ ಗ್ರಂಥಗಳನ್ನಿರಿ

ಸಿದ್ದ ಸ್ಥಳದಲ್ಲಿ ಮಾನವೀಹಸ್ತವು ತಿರುಗಿ ಸಂಚರಿಸಿ ದಂತ ಕಾಣಲಿಲ್ಲ. ಆದರೆ ಕೆಲವು ಪುಸ್ತಕಗಳನ್ನು ತೆರೆದರೆ—ಅಲ್ಲಿಂದಿಲ್ಲಿಯವರೆಗೂ ಕೆಂಪುಗೆರೆಗಳನ್ನು ಹಾಕಿದ್ದರು ಹಾಗೆ ಗೆರೆ ಹಾಕಿದ ಒಂದೆರಡು ಭಾಗ ಗಳನ್ನೋದಿದನು; ಮುಂದೋದುವ ಆಸೆ ಆ ವೃದ್ಧನಿ ಗಾಗಲಿಲ್ಲ. ಒಂದು ಮೂಲೆಯಲ್ಲಿ ಅವನ ರಾಮಾ ಯಣದ ಆಂಗ್ಲಭಾಷಾ ಭಾಷಾಂತರವಿದ್ದಿತು. ಹೋಗಿ ತೆಗೆದುಕೊಂಡನು. ಮೊದಲಿನ ಹಾಳೆಯ ಮೇಲೆಯೇ ಪ್ರಥಮ ಲೇಖಕನ ವಿನಂತಿಯು ಇದ್ದಿತು. "For God's sake don't waste your time over this silly book [ದೇವರ ಸಲುವಾಗಿ ನಿಮ್ಮ ಸಮಯ ವನ್ನು ಇಂಥ ಹುಚ್ಚು ಪುಸ್ತಕದ ಮೇಲೆ ವ್ಯಯಿಸಬೇಡಿ) ಎಂದಿತ್ತು. ಪುಸ್ತಕವನ್ನು ಕಾಣಲು, ಮಿಕ್ಕವರು ಈ ಬುದ್ಧಿವಾದವನ್ನು ಅನುಸರಿಸಿದಂತೆಯೂ ಕಂಡಿತು! ಆಗವನಿಗೆಷ್ಟಾನಂದವಾಗಿರದು, ಅವನ, ಲೇಖಕನೆಂಬ ಅಹಂಕಾರವು ಭಸ್ಮವಾಯಿತು

ವಾಲ್ಮೀಕಿಯು ನೋಡಹೋದ ಇನ್ನೊಂದು ಸ್ಥಳ ವೆಂದರೆ—"Brodies Club" ಎಂಬ ಪ್ರಸಿದ್ಧವಾಚ ನಾಲಯ. ಅಲ್ಲಿ ಹಲವು ಉತ್ಕೃಷ್ಟ ಮಾಸಿಕಪತ್ರಿ ಗಳು ಬರುವವೆಂದು ಕೇಳಿದ್ದನು ಅಲ್ಲಿಹೋಗಿ ಆ ಸಚಿತ್ರ ಮಾಸಿಕಪತ್ರಿಗಳನ್ನು ತಿರುವಿದನು. ಎಲ್ಲೆ ಲ್ಲಿಯೂ "ನೈಸರ್ಗಿಕ ಉದ್ಯಾನಪ್ರಿಯರದೇ ವಿಚಾರ."—ಅವೇ ಚಿತ್ರಗಳು. ಅವುಗಳೊಳಗಿನ ಚಿಕ್ಕ ಕಥೆಗಳನ್ನು

ಮುಸವಣಿಯು ಓಡಿದನು. ಇವಾದರೂ ಆ ಜನಪ್ರೀತ ಗ್ರಂಥಗಳ ಅನುಕರಣೆಯಲ್ಲಿ ಅವಕ್ಕೂ ಒಂದು ಹೆಜ್ಜೆ ಮುಂದರಿದಿದ್ದವು. ಅವುಗಳಿಗೆ ಚಿತ್ರರಾಜನು ಜೀವ ಕಳೆಯನ್ನು ಕೊಟ್ಟಿತ್ತು

ಅಲ್ಲಿಗೆ ವಾಲ್ಮೀಕಿಯು. "ದಣಿದೆ" — ಎಂದನು!

## ಪ್ರಕರಣ ೨೩.

# ಕಲಾ ರಾಜ್ಯದಲ್ಲಿ ವಿಹಾರ.

ಈ ಪ್ರಾಚೀನ ಯುಗದ ದೇವತೆಗಳ ಎಣಿಕೆಯಲ್ಲಿ ಮಾನವನ ವಿದ್ಯೆಯು ಕಲಾಜ್ಞಾನವಿಲ್ಲದೆ ಪೂರ್ಣವಾಗದು ಎಂದಿತ್ತು. ಈಗಾದರೂ ಇಲ್ಲವೆಂದಲ್ಲ. ಉಭಯತರೂ ಕಲೆಯೆಂದರೆ ಸೌಂದರ್ಯೋಪಾಸನೆಯೆಂದೇ ಎಣಿಸುವರು ಆದರೆ ಅವರಿಬ್ಬರೂ ಕೂಡುವರೋ ಎಂಬ ಸಂಶಯವು ನಮಗಿದೆ. ವಿಶ್ವಕರ್ಮನು ಹಿಂದೀಯರ–ಶಿಲ್ಪ, ಚಿತ್ರಕಲೆ, ವಾಸ್ತುಶಿಲ್ಪಗಳನ್ನು ಪರಿಶೀಲಿಸಲು ಮುಂದಾದನು; ಸರಸ್ವತಿಯು ತನಗೆ ಸಮ. ಪ್ರಿಯವೆನಿಸಿದ ನಾಟ್ಯಕಲೆ, ಗಾಯನ, ನರ್ತನ ಇವುಗಳ ವಿಚಾರ ಗಮನವೀಯತೊಡಗಿದಳು. ಭರತಖಂಡದಲ್ಲಿ, ವಿಶೇಷವಾಗಿ ಅಲ್ಲದಿದ್ದರೂ, ಇವುಗಳಿಗೆ ಜನರ ಬೆಂಬಲ ಸಾಕಷ್ಟಿತ್ತೆಂದೂ ಅವರಿಗೆ ಅನುಭವವಾಯಿತು ಜನರಿಗೆ ನಾಟಕ, ನರ್ತನ, ಸಿನೆಮಾ [' ಇದೊಂದು ಬಗೆಯ ಛಾಯಾ ನಾಟಕವಂತೆ' ಎಂದು

ಅದನ್ನು ನೋಡುವ ಮೊದಲು ಸರಸ್ವತಿಯು ಟಿಪ್ಪಣಿ ನಡೆದಿತ್ತು) ಇವುಗಳಿಗೂ, ಆಗಾಗ ಸಂಗೀತ ಬೈಠಕು ಗಳಿಗೂ ಕೊಡುವ ಪ್ರೋತ್ಸಾಹ, ತೂಗಾಡಿಸುವ ತಲೆ– ಇವುಗಳನ್ನು ಕಂಡು, ಪ್ರತಿ ಮನೆಯಲ್ಲಿ ತೂಗುತ್ತಿರುವ, ಪ್ರತಿ ಸಿಗರೇಟು ಕರಡಿಗೆಯಲ್ಲಿ ಅಂಟಿರುವ, ಬಂಣದ ಬರಹಗಳನ್ನು, ಕಂಡು ದೂರದಿಂದಲೇ ಅವರು ಹಿಂದೀಯ ರನ್ನು ಕೊಂಡಾಡತೊಡಗಿದ್ದರು. ಆದರೆ ದೂರದಿಂದಲೇ ತೃಪ್ತಿಯಾಗುವ ಕಣ್ಣುಗಳು ಅವಲ್ಲ. ನಿಕಟವರಿ ಚಯದ ಆವಶ್ಯಕತೆಯನ್ನು ಅವರು ಕಂಡರು.

ವಿಶ್ವಕರ್ಮನ ಸವಾರಿಯು ಈ ಕೆಲಸಕ್ಕಾಗಿ ಅಖಿಲಭಾರತವರ್ಷದ ಸಂಚಾರ ಕಾರ್ಯಕ್ರಮವನ್ನು ಕೈಕೊಂಡಿತು. ಅಜಂತ, ಸಂಚಿ, ವೇರೂಳ, ಹಳೇ ಬೀಡು, ಬೇಲೂರು, ಶ್ರೀರಂಗ, ಜಗನ್ನಾಥ, ಆಬು, ಖಜುರಾಹೋ, ಪಟ್ಟದ ಕಲ್ಲು ಮೊದಲಾದ ಸ್ಥಳಗಳನ್ನು ತಿರುಗಿದನು. ಆನಂದಿಸಿದನು. ಹಲವು ಭಗ್ನಾವಸ್ಥೆ ಯಲ್ಲಿದ್ದುದನ್ನೂ, ಕಾಲನ ಕರಕ್ಕೆ ಸಿಲುಕಿ ಜೀರ್ಣ ವಾದುದನ್ನೂ, ಅವನ್ನು ಅದೇ ಸರಣಿಯಲ್ಲಿ ಮುಂದರಿ ಸದೆ ಇದ್ದುದನ್ನೂ ಕಂಡು ಸ್ವಲ್ಪ ವ್ಯಥೆಯಾಯಿತು ಆದರೆ ಈ ಸ್ಥಳಗಳನ್ನೆಲ್ಲ ಸಂದರ್ಶಿಸಿದವನು ಅವುಗಳ ಕಾಲನಿರ್ಣಯದ ಗೊಡವೆಗೆ ಹೋಗದಿರಲಿಲ್ಲ. ಅವು ಗಳು ೧೨–೧೩ ಶತಮಾನದೊಳಗಿನವು ಎಂದು ತಿಳಿದು - ಇವುಗಳ ಕೀರ್ತಿ ಈಗಿನವರಿಗೇಕೆ? ಎಂದು ನಿರ್ಣಯಿಸಿ ದನು. ಅದಕ್ಕೆ ಇನ್ನೊಂದು ಬಲವಾದ ಕಾರಣವಿತ್ತು.

ಇಂಥ ಹಲವು ಸ್ಥಳಗಳಿಗೆ ಜನರ ಗಮನನಿರ್ಗಮನಗಳು ಸಾಕಷ್ಟಿಲ್ಲ. ಇನ್ನು ಕ್ಷೇತ್ರಭೂಮಿಯಲ್ಲಿ ಇಂತಹ ಮಂದಿರಗಳಿದ್ದರೆ, ಅಲ್ಲಿಗೆ ಬರುವ ಯಾತ್ರಿಗಳು— ಅವನ್ನು ಕಂಡೂ ಕಾಣದ ಕುರುಡರಂತೆ ಹಣ್ಣುಕಾಯಿ ಮಾಡಿಕೊಂಡು ಹೊರಡುವರು. ಪ್ರಾಯಶಃ ಅವರ ಅಭಿರುಚಿ ಭಿನ್ನವಾಗಿರಬೇಕೆಂದು ತಿಳಿದನು. ಇವುಗಳ ವಿಷಯದಲ್ಲಿ ಅವನರಿತ ಒಂದು ಸ್ವಾರಸ್ಯವೆಂದರೆ, ದಕ್ಷಿಣ ಹಿಂದುಸ್ಥಾನದ ಗುಡಿಗಳಲ್ಲಿ ಅರ್ಧಾಂಶಕ್ಕೆ ಮಿಕ್ಕಿದುವು ಪಾಂಡವರ ರಚನೆಯೆಂದು! ಕರ್ಣಾಟಕದ ಗುಡಿಗಳೆಲ್ಲ ಯಾರೋ ಒಬ್ಬ ಜಕಣಾಚಾರಿಯದಂತೆ! ಗುಡಿಗಳ ಎದುರು ಶಿಲಾಶಾಸನದಲ್ಲಿ ಕಟ್ಟಿದಕಾಲ ಕಟ್ಟಿದವರ ಹೆಸರಿದ್ದರೂ, ಜನರು ಅವನ್ನು ಹಟಹಿಡಿದು ಓದಲಾರರು ಅವರು ಪಾಂಡವರಿಗೆ ಮತ್ತು ಆ ಜಕಣನಿಗೇ ಅದರ ಶ್ರೇಯಸ್ಸನ್ನು ಒಪ್ಪಿಸುವರು. ಸ್ವರ್ಗಲೋಕದ ವಿಶ್ವಕರ್ಮನಿಗೆ, ಪಾಂಡವರಿಗೆ ಕಲ್ಲು ಕೆಲಸದ ಜ್ಞಾನ ಇಲ್ಲೆಂದು ಗೊತ್ತು. ಒಮ್ಮೆ ಗೊತ್ತಿದೆಯೆಂದು ತಿಳಿಯುವ; ಅವರು ಕ್ರಿಸ್ತಪೂರ್ವದಿಂದ ೧೩ನೆಯ ಶತಮಾನದ ತನಕ ತಿರುಗಿ ಭರತಭೂಮಿಗೆ ಬಂದರೇನು!— ಎಂಬ ಸಂಶಯ. ಜನರ ಈ ಬಲವಾದ ನಂಬುಗೆಯ ಮುಂದೆ ಅವನ ಮನವು ಅಸ್ಥಿರವಾಗಿ ಅವನು— ಧರ್ಮರಾಯನಿಗೆ "ನೀನು ನಿನ್ನ ನರಕದಿಂದ ಕಿರಿಯ ಪಾಂಡು ಸಹೋದರರು ನಾಲ್ವರನ್ನು ಬಿಟ್ಟುಬಿಟ್ಟುದುದು ಯಾವ ತಾರೀಖಿಗೆ?"— ಎಂದು ಪ್ರಶ್ನೆಮಾಡಬೇ

ಕೆಂದಿರುವನು. ಹಾಗೆಯೇ ಈ ಜಕಣನು ಆರೆಂಟು ಶತಮಾನಗಳ ತನಕ ಬದುಕಿದ ಮಾನವಜೀವಿ ಯೆಂದು ಕಂಡಿತು. ಕಲಿಯುಗದಲ್ಲಿ ಮಾನವರಾಂಗೂ ೧೦೦ ವರುಷಕ್ಕಿಂತ ಹೆಚ್ಚಿನ ವಾಯಿದೆ ಕೊಡದ ಯಮ ರಾಯನು ಇವನಿಗೆ ೮೦೦ ವರುಷದ ಆಯುಃಪ್ರಮಾಣ ವನ್ನು ಕೊಟ್ಟನೆಂತು? — ಎಂಬುದಿನ್ನೊಂದು ಪ್ರಶ್ನೆ. ಎಲ್ಲಾದರೂ ಚಿತ್ರಗುಪ್ತನು ಇವನ ಲೆಕ್ಕಾಚಾರವನ್ನು ಬರೆದಿರಿಸಲು ಮರೆತನೇ? — ಎಂಬ ಸಂಶಯು.

ಈ ಪ್ರಾಚೀನ ವಾಸ್ತುಯುಗವನ್ನು ಕಂಡ ಅವನು ಮಧ್ಯಕಾಲೀನ ಭಾರತದ ಮಂದಿರಗಳನ್ನು ಕಾಣಹೊರಟನು. ದಿವಾನಿಖಾಸ್, ತಾಜಮಹಾಲ, ಮೋತಿಮಜೀದ್, ಪಂಚಮಹಾಲ್, ಗೋಲಗುಮ್ಮಟ, ಇತ್ಯಾದಿ ಕಟ್ಟಡಗಳನ್ನು ಕಾಣತೊಡಗಿದನು. ಅವ ನಿಗೆ ಅಲ್ಲಿ ಹಿಂದೂಯವನ ಐಕ್ಯತೆಯು ಕಾಣಿಸಿತು. ಅದಕ್ಕೂ ಮಿಗಿಲಾಗಿ, ಅವನಿಗೆ ಹೊಳೆದ ಸಂಗತಿ ಯೆಂದರೆ, ಜನರು ಅನಾವಶ್ಯಕವಾದ ಧಾರ್ಮಿಕ ಭ್ರಾಂತಿನಲ್ಲಿ ಕೈಹಾಕದೆ, ರಾಜಕೀಯ ವಾತಾವರಣದಲ್ಲಿ ಸಂಚರಿಸಿರುವರೆಂದು. ಹಲವು ಅರಮನೆಗಳನ್ನು ಕಂಡ ನು. ಜನರಲ್ಲಿ ಧರ್ಮದ ಅಮಲಿಲ್ಲವೆಂದು ತಿಳಿಯಿತು. ಆದರೆ ಈ ರಾಜಶ್ರೀವಿಯ ಮಂದಿರಗಳಲ್ಲಿ ಕೇವಲ ಕೆಲ ವೊಂದು ವ್ಯಕ್ತಿಗಳ ವಿಲಾಸಕ್ಕಾಗಿ–ದುಡಿದವರ ದುಡಿಸಿ ದವರ ಸ್ಥಿತಿಯನ್ನೆಣಿಸಿಕೊಂಡನು. ಈ ಮಂದಿರ ಗಳಿಂದಲೂ ಅವನು ಅಸಂತುಷ್ಟನಾಗಲಿಲ್ಲ. ಆದರೆ ಇವೂ

ಅರ್ವಾಚೀನವಲ್ಲ. ಅವನಿಗೆ ಬೇಕು 'ಈ ಮಿತಿ'ಯ- (Up-to-date) ವಸ್ತುಗಳು! ಅದಕ್ಕಾಗಿ ಚಳಿಗಾಲಕ್ಕೆ ಹಿಂದುಸ್ಥಾನದ ಹವೆ ಸಹಿಸದೆ ವಿಲಾಯತಿಗೆ ಹೋಗು ವವರ ಅರಮನೆಗಳನ್ನು ಕಾಣುವ ಇಚ್ಛೆಯಾಯಿತು ಮೈಸೂರು, ಇಂದೋರು, ಬಡೋದೆಗಳೆಂದು ಸುತ್ತಿ ದನು ನವದೇಹಲಿಯನ್ನೂ ಕಂಡನು. ಇನ್ನು ಕಲ್ಕ ತ್ತೆಯ ವಿಕ್ಟೋರಿಯ ಮೆಮೋರಿಯಲ್ ಹಾಲನ್ನೂ ಕಂಡನು. ಅಂಥಿಂಥ ನೂರಾರು ಸ್ಥಳಗಳನ್ನು ಕಂಡನು. ಕಂಡುಕಂಡು ಬೇಸತ್ತು ಒಂದು ದಿನ ಅವನು, ವಿಂಧ್ಯದ ತೊಪ್ಪಲೊಂದರಲ್ಲಿ ಕುಳಿತು ಈ ಮಂದಿರಗಳ ಕಲ್ಪನಾ ಸಾಲನ್ನಿರಿಸಿಕೊಂಡನು. ಬಳಿಯಲ್ಲಿ, ಪ್ರಾಚೀನ ಯು ಗದ, ಮಧ್ಯಕಾಲದ ಮಂದಿರಗಳ ಪಂಕ್ತಿಗಳನ್ನಿರಿಸಿದನು. ಕೊನೆಗೆ ಎರಡು ಮಂದಿರಗಳ ಸಾಲಿನಿಂದ ಕಣ್ಣನ್ನು ಹಿಂದೆಗೆದು ಈ ಸಮಿತಿಯ ಮಂದಿರಗಳ ಚಿಂತನೆ ಮಾಡ ತೊಡಗಿದನು! ಆಗ ಅವನ ಮನವು ಅವನನ್ನು ಒಮ್ಮೆ ಇಂಗ್ಲಾಂಡಿನಲ್ಲಿರಿಸಿತು. ಒಮ್ಮೆ ಅಮೇರಿಕಕ್ಕೊಯ್ಯಿತು ಒಮ್ಮೆ ಗ್ರೀಸಿಗೂ, ಇನ್ನೊಮ್ಮೆ ರೋಮಿಗೂ ಪುಟ್ಟಿಸಿತು. ಅವುಗಳೆಲ್ಲ ಭರತಖಂಡದಲ್ಲಿದ್ದಂತೆ ಅವನಿಗೆ ಕಾಣಿಸ ಲಿಲ್ಲ. ಕೆಲವು ಅರಮನೆಗಳ ಕಮಾನು, ಗೋಪುರ ಗಳನ್ನು ಕಂಡು—ಇವು ಹಿಂದುಸ್ಥಾನದ್ದಿರಬಹುದೇ, ಎಂದು ಯೋಚಿಸಲು, ಇನ್ನುಳಿದ ಭಾಗಗಳು ಇನ್ನಾ ವುದೋ ದೇಶದ ನೆನಪನ್ನು ತಂದುಕೊಟ್ಟವು ಆಗನನು ತಿಳಿದನು. ಪ್ರಾಯಶಃ ಬಿರುಗಾಳಿಯೊಂದು ಹಲವು

ದೇಶಗಳ ಮೇಲೆ ಬೀಸಿ, ಅಲ್ಲಲ್ಲಿನ ವಸ್ತುಗಳ ಒಂದೊಂದು ಚೂರನ್ನು ಕಿತ್ತು ತಂದು, ಇಂಥ ವಿನಾಯಕಶಿಲ್ಪಕ್ಕೆ ಕಾರಣವಾಗಿರಬೇಕು.

ಭರತಭೂಮಿಯಲ್ಲಿ ಒಂದುಗೂಡಿಸಿದ ಇಂಥ ಹಲವು ಮಂದಿರಗಳನ್ನು ಕಂಡು — ಇವುಗಳನ್ನೇಕೆ ಕಟ್ಟಿಸಿದರು ಎಂಬ ಯೋಚನೆಯಾಯಿತು. ಪ್ರಾಯಶಃ ಇವುಗಳ ಯಜಮಾನರಿಗೆ ತಮ್ಮ ಕಿಸೆಯ ಭಾರವನ್ನು ಕಡಿಮೆ ಮಾಡಲು ಬೇರೆ ಹಾದಿ ದೊರೆಯಲಿಲ್ಲೆಂದು ನಿಶ್ಚಯಿಸಿದನು. ಆದರೆ ದುರ್ದೈವಿ ಪ್ರಾಣಿಯು ಒಂದು ದಿನ ವಾಸ್ತುಶಿಲ್ಪವೆಂಬೊಂದು ಗ್ರಂಥವನ್ನು ಕೊಳ್ಳಲು ಈ ಮಂದಿರಗಳ ಚಿತ್ರಗಳೆಲ್ಲ ಅದರಲ್ಲಿದ್ದುವು ಗ್ರಂಥಕರ್ತನು — "ಇವನ್ನು ಕಂಡು ಸಾಯಬೇಕು" ಎಂದು ಬರೆದಿದ್ದನು. ಬಡ ವಿಶ್ವಕರ್ಮನಿಗೆ ಕೆಲಸವಾಗದೆ ಸಾಯುವ ಇಷ್ಟವಿಲ್ಲದುದರಿಂದ — ಬೇಗಬೇಗ ಆ ಪುಸ್ತಕವನ್ನು ಮುಚ್ಚಿಸಿದನು

ಅವನಿಗೀಗ ಶಿಲ್ಪಪರೀಕ್ಷೆಯ ಮನಸ್ಸಾಯಿತು. ಪ್ರತಿ ಸ್ಥಳ ಹುಡುಕಿ ಹುಡುಕಿ ಬೇಸರವಾಗುವುದೆಂದು ಒಂದೆರಡು ಪ್ರಾಚೀನ ದೇವಾಲಯಗಳಿಗೆ ಹೋದನು. ಆದರೆ ವಿಗ್ರಹಗಳನ್ನು ನೋಡಲು ಹಾತೊರೆದುಹೋದ ಇವನ ಕಣ್ಣುಗಳಿಗೆ, ಹೂವು, ಗಂಧ, ಚಿನ್ನ, ಬೆಳ್ಳಿ ಇವುಗಳಲ್ಲದೆ ಬೇರೇನೂ ಕಾಣಿಸಲಿಲ್ಲ. ಕೆಲವು ಕಡೆಗಳಲ್ಲಿ ದೇವರ ಕಣ್ಣನ್ನೇ ಕಿತ್ತು ಪಚ್ಚೆ ಹರಳುಗಳನ್ನಿರಿಸಿದ್ದರು. ಪ್ರಾಯಶಃ ಬೆಳಕಿನಿಂದ ಅವನ ಕಣ್ಣುರಿಯು

ಬಾರದೆಂದೂ ಏನೋ! ಒಂದು ಕಡೆ ಇವನಿಗೆ ಒಳಗೇ
ನಿದೆಯೆಂದು ನೋಡುವ ಹಟವಾಯಿತು. ಆದರೆ ಪೂಜಾ
ರಿಯು ಶೃಂಗಾರವಿಲ್ಲದೆ ದೇವರನ್ನು ಕಾಣಗೊಡುವಂ
ತಿಲ್ಲ. ಶೃಂಗಾರ ಹಾಕಿದ ಗೊಂಬೆ ಕಂಡರೆ ಗರ್ಭಿಣಿ
ಯರು ಹೆರಬೇಕು. ಹಾಗೂ ಹೀಗೂ ದಕ್ಷಿಣಾಬಲ
ದಿಂದ ಆ ಗಳಿಗೆಯನ್ನು ಗಳಿಸಿಕೊಂಡು ಗರ್ಭಗುಡಿಗೆ
ಹೋಗಿನಿಂತನು; ವಿಸ್ಮಯಗೊಂಡನು! ತಿರುಗಿ ಚೇತನ
ಗೊಳ್ಳುವಾಗ ಅದೇ ಕರಾಳ ಸ್ವರೂಪವಿತ್ತು.

ಹೀಗೆ ಯತ್ನಿಸಿ ಉಪಯೋಗವಿಲ್ಲೆಂದು ಒಂದು
ಪ್ರಸಿದ್ಧವಸ್ತು ಸಂಗ್ರಹಾಲಯಕ್ಕೆ ತೆರಳಿದನು ತೋಟ
ದಲ್ಲೆಲ್ಲಾ ಅರ್ಧ ಮುಕ್ಕಾಲು ಪ್ರತಿಮೆಗಳಿದ್ದುವು. ಕೈ
ಯನ್ನು ನೋಡಿದರೆ ಕಾಲಿಲ್ಲ, ಕಾಲನ್ನು ನೋಡಿದರೆ
ಮುಖವಿಲ್ಲ ಪ್ರಾಯಶಃ ಅವನ್ನು ಮೆಡಿಕಲ್ ಕಾಲೇ
ಜಿನ ಹುಡುಗರ ಕೈಯಲ್ಲಿರಿಸಿದ್ದರೆಂದು ಎಣಿಸಿಕೊಂ
ಡನು. ಪ್ರದರ್ಶನಾಲಯದ ಮುಂದೊಂದು ಚಿಕ್ಕ ಉ
ದ್ಯಾನವಿತ್ತು. ಆ ಉದ್ಯಾನದ ನಡುವೆ ಒಂದು ಬುದ್ಧ
ದೇವನ ಮೂರ್ತಿಯನ್ನಿರಿಸಿದ್ದರು ವಿಶ್ವಕರ್ಮನು
ಅದರ ಸುತ್ತಿದ್ದ ಕಟ್ಟೆಗೆ ಒರಗಿ, ನೋಡುತ್ತ ನಿಂತನು.
ತಾಸುಗಳು ಕಳೆದರೂ ಅವನೇಳನು. ಅವನಿಗೆ ಬಿಸಿ
ಲಿನ ಜಳವು ಸಹ ಸುಡಲಿಲ್ಲ. ಪ್ರಾಯಶಃ ಅವನು,
ಈ ಬುದ್ಧನು ಎಷ್ಟು ಕಾಲದಿಂದ ಈ ಚಳಿಬಿಸಿಲುಗಳಿಗೆ
ಎದೆಯೊಡ್ಡಿ ನಿಂತಿರುವನೆಂದು, ಚಿಂತಿಸುತ್ತಿರಬೇಕು.
ಅದೇ ವೇಳೆಗೆ—ಒಬ್ಬ ದೊಡ್ಡ ಮನುಷ್ಯನು ಕೆಲವು

ಅನುಯಾಯಿಗಳೊಂದಿಗೆ ಬಂದನು. ಅವರಲ್ಲೊಬ್ಬ ಬಾಲಕನು ದೊಡ್ಡವರೊಡನೆ "ಪಂಡಿತಜೀ, ಅಲ್ಲೊಂದು ಸುಂದರ ಬುದ್ಧ ವಿಗ್ರಹವಿದೆ"—ಎಂದನು. ಪಂಡಿತವರ್ಯರು—"ಆ ಮೂರ್ತಿಗಳನ್ನು ಸುಡಲಿ!" ಅಂದರು. ವಿಶ್ವಕರ್ಮನ ಸಮಾಧಿ ಭಂಗವಾಯಿತು. ಬಾಲಕನು ಹಟಹಿಡಿದು-"ಹೀಗೇಕೆನ್ನುವಿರಿ?" ಎಂದು ಕೇಳಿದನು. "ವೇದಗಳಲ್ಲಿ ಮೂರ್ತಿಪೂಜೆಗಳಿಲ್ಲ" ಎಂದುತ್ತರ ಬಂದಿತು ಸರಿ, ಎಲ್ಲರೂ ಹಾಗೇ ಮಂದಿರದೊಳಕ್ಕೆ ಹೋದರು. ವಿಶ್ವಕರ್ಮನ ತಪವು ತಿರುಗಿ ತೊಡಗಿತು. ಅಷ್ಟಕ್ಕೆ ಒಬ್ಬ ಕಾಲೇಜು ವಿದ್ಯಾರ್ಥಿಯು ಆ ಹಾದಿಯಾಗಿ ಬಂದನು ಇವನು ನಿಂತುದನ್ನು ಕಂಡು ಅವನೂ ವಿಗ್ರಹ ನೋಡಲು ಬಂದನು. ಅದನ್ನು ಕಂಡನು! ತನ್ನಷ್ಟಕ್ಕೆ "ಇದನ್ನಿಲ್ಲೇಕೆ ಇರಿಸಿದರು? ಇದೀ ಉದ್ಯಾನದ ಸೌಂದರ್ಯವೇ ಕೆಟ್ಟಿತು. ಶರೀರ ರಚನೆಯ ತಿಲಾಂಶ ಕಲ್ಪನೆಯಿಲ್ಲದ ಮಂಕರ ಕೆಲಸ" ವೆಂದನು . . . . ಈ ಗುಟುಕನ್ನು ವಿಶ್ವಕರ್ಮನು ನುಂಗಿದನು. ವಸ್ತುಸಂಗ್ರಹಾಲಯಕ್ಕೆ ಹೋಗಿ ಶಿಲ್ಪ ವಿಭಾಗವನ್ನು ನೇರಿದನು. ದಾರಿಯುದ್ದಕ್ಕೂ ಹಳೇ ಕಂಚಿನ ಮತ್ತು ಕಲ್ಲಿನ ಪ್ರತಿಮೆಗಳನ್ನು ಕಂಡನು. ಇವನ ಮುಂದೆ ಆ ಸುಶಿಕ್ಷಿತ ತರುಣನು ಹೋಗುತ್ತಿದ್ದನು. ಇವನು ಅವನನ್ನು ಹಿಂಬಾಲಿಸಿದನು. ನಡುವೆ ಆ ತರುಣನ ಗೆಳೆಯನೊಬ್ಬನು ಬೆಟ್ಟಿಯಾಗಿ—'ಏನು ಇಂದು ನಿಮ್ಮ ಆರ್ಟ್ಸ್ ಸ್ಕೂಲಿಗೆ ರಜೆಯೇ'? ಎಂದನು. "ಇಲ್ಲ,

ನನ್ನ 'ಸೌಂದರ್ಯ ರಾಣಿ' ಎಂಬ ಚಿತ್ರಕ್ಕೆ ತಕ್ಕ ಮಾದರಿ ಸಿಗುವುದೋ ಎಂದು ನೋಡಲು ಪ್ರಿನ್ಸಿಪಾಲರಿಂದ ರಜೆ ತಗೆದುಕೊಂಡು ಬಂದೆ" ಎಂದನು.

ಇವನು ಕಲಾಶಾಲೆಯು ವೀರನೆಂದು ತಿಳಿದ ಬಳಿಕ ವಿಶ್ವಕರ್ಮನ ಆತುರ ಹೆಚ್ಚಿತು. ಅವನ ಹಿಂದೆ ಹೋದನು; ಅವನು ನಿಂತಲ್ಲಿ ನಿಂತನು; ನೋಡಿದ್ದನ್ನು ನೋಡಿದನು. ಕೊನೆಗೆ ನಮ್ಮ ಕಲಾವಿದ್ಯಾರ್ಥಿಯ ದೃಷ್ಟಿಯು ಒಂದು ಚಂದ್ರಕಾಂತ ಶಿಲಾ ವಿಗ್ರಹದ ಮೇಲೆ ಬಿತ್ತು. ಅದರ ಕೆಳಗೆ-"ಆದರ್ಶ ನಾರಿ" ಎಂಬ ಶಿರೋಲೇಖವೂ, ಅದರ ಕೆಳಗೆ ಶ್ರೀ - ರು. ೧೫,೦೦೦ ಪವನಿಗೆ ಕೊಂಡು ಈ ಪ್ರದರ್ಶನಶಾಲೆಗೆ ಬಹುಮಾನವಿತ್ತುದೆಂದೂ ಬರಹವಿತ್ತು. ಈ ಬರಹವನ್ನೋದಿ ವಿಗ್ರಹದ ಸುತ್ತಿನ ಆಸನ ಪಂಕ್ತಿಯಲ್ಲಿ ಕುಳಿತನು. ಇವನಿಗೆ ನಾಲ್ಕು ಅಡಿ ದೂರದಲ್ಲಿ ನಮ್ಮ ಕಲಾವಾಲನಿದ್ದನು. ಇನ್ನೂ ಅನೇಕ ಸ್ತ್ರೀಪುರುಷರು ಸುತ್ತ ನೆರದಿದ್ದರು. ಕೆಲವರಿಗೆ ಅದನ್ನು ಧೈರ್ಯದಿಂದ ನೋಡುವ ಸಾಹಸವಾಗದೆ, ಊಮುಬತ್ತಿಯುಳಿಯುತ್ತ, ಓರೆಗಣ್ಣಿನಿಂದ ಬೇರೆಯವರಿಗೆ ತಿಳಿಯದಂತೆ ನೋಡುತ್ತಿದ್ದರು ಪ್ರಾಯಶಃ "ಆದರ್ಶನಾರಿಯು" ಪಾತಿವ್ರತ್ಯ ಭಂಗವಾದೀತೆಂಬ ಭೀತಿಯಿಂದಲೋ ಏನೋ ನಮ್ಮ ಚಿತ್ರಕಾರನು --"ಆದರ್ಶನಾರಿಯೆನ್ನುವುದರ ಒಡಲು ನಾನದನ್ನು ದೈವೀ ನಾರಿ"-ಎನ್ನುತ್ತಿದ್ದೆನೆಂದು ತನ್ನಷ್ಟಕ್ಕೆ ನುಡಿದನು. ಇನ್ನೊಂದು ಮೂಲೆಯಲ್ಲಿ ಓರ್ವ ರಮಣಿಯು ಕುಳಿತಿದ್ದಳು ಅವಳು

ತನ್ನ ಗೆಳತಿಯೊಡನೆ "ಆದರ್ಶ ಪುರುಷನ ಪ್ರತಿಮೆ ಯಿಲ್ಲವೇ?" ಎಂದು ಕೇಳಿದಳು. ವಿಶ್ವಕರ್ಮನ ದೃಷ್ಟಿ ಇಷ್ಟರ ತನಕ ಈ ಮಾತುಗಳ ಕಡೆಗೇ ಹರಿಯಿತಲ್ಲದೆ ವಿಗ್ರಹಕ್ಕೆ ಹೋಗಿದ್ದಿರಲಿಲ್ಲ. ಈಗವನು ಅದನ್ನು ನೋಡ ತೊಡಗಿದನು. ಕಲೆಯ ನಗ್ನ ಸ್ವರೂಪವೇ ಅದು! ಅವಳ ಆದರ್ಶನಡತೆಯು ಅವಳಿಗೆ ಬಟ್ಟೆಯ ಚಿಂತೆ ಯನ್ನೂ ಇಲ್ಲದಾಗಿ ಮಾಡಿಸಿತ್ತು. ವೈರೂಪು, ಶುಕ ನನ್ನೂ ಬೆರಗುಮಾಡುವಂತಿತ್ತು. ಈ ಆದರ್ಶನಾರಿಯ ಚಿತ್ರಕಲ್ಪನೆಯು ವಿಶ್ವಕರ್ಮನಿಗೆ ಎಂದೆಂದೂ ಮರವೆ ಯಾಗಲಾರದು. ಅದು ದೇಶದ ಬ್ರಹ್ಮಚಾರಿಗಳಿಗೆ ನಿಜ ವಾದ ಆದರ್ಶವಾಗಿತ್ತು!

ಒಂದು ದಿನ ಈ ದೇವಶಿಲ್ಪಿಯ ಸವಾರಿಯು ಬಡೋ ದೆಯ ಅರಮನೆಗೆ ಸಾಗಿತ್ತು. ಅಲ್ಲೊಂದು ಚಿಕ್ಕ ಸ್ನಾ ನದ ಕೊಳವಿದೆ. ಬಳಿಯಲ್ಲಿ ಒಂದು ಸೊಗಸಾದ ಪ್ರತಿಮೆಯಿದೆ. ಅದನ್ನೂ ಕಂಡನು. ಇನ್ನೋರ್ವ ರಾಜಕುಮಾರರ ಶಯ್ಯಾಗೃಹದಲ್ಲಿದ್ದ ಒಂದೆರಡು ಚಂದ್ರ ಕಾಂತ ಶಿಲಾ ವಿಗ್ರಹಗಳನ್ನು ಕದ್ದು ನೋಡಿದನು. ಆಗವನಿಗೆ ಶಿಲ್ಪದ ಕಲ್ಪನೆ ಹುಟ್ಟಿತು. ಕಲೆಯ ಬೆಡಗು ಪೂರ್ಣವಾಗಿ ತೋರಲು ಬಟ್ಟೆಬರೆಗಳಿರಬಾ ರದು, ಅದು ಕೇವಲ ತಾದ್ರೂಪಿಕವಾಗಿರಬೇಕು ಪ್ರೇಕ್ಷಕರ ಮನವನ್ನು ಆನಂದದ ನರಕಕ್ಕೆ ತಳ್ಳು ವಷ್ಟು ಪ್ರಜ್ವಲ ಆಕರ್ಷಕ ಶಕ್ತಿಯಾಗಿರಬೇಕು— ಎಂದು.

ಆವನ ಒಂದೆರಡು ಕಲಸಗಳಾದುವು; ಈಗವ ನಿಗೆ ಚಿತ್ರಕಲೆಯನ್ನು ಅರಿಯುವ ಆಸೆ. ಹಿಂದೆ ಹೇಳಿದ ವಸ್ತುಸಂಗ್ರಹಾಲಯದಲ್ಲಿಯೇ ನಿರೀಕ್ಷಿಸಿದನು. ಅಲ್ಲಿ ನೂರಾರು ಐರೋಪ್ಯಚಿತ್ರಕಾರರ ಚಿತ್ರಗಳಿದ್ದುವು. ಅವುಗಳೆಲ್ಲ ಸ್ಥಾನಭ್ರಷ್ಟ ನಕ್ಷತ್ರಗಳಂತೆ ಅಲ್ಲಿ ರಂಜಿಸು ತ್ತಿದ್ದುವು. ಆಗವನು ಅತೃಪ್ತನಾಗಿ— ಬಳಿಯಲ್ಲಿರುವ ಒಬ್ಬನನ್ನು ಕರೆದು— ಗೆಳೆಯ, ಭಾರತವರ್ಷದಲ್ಲಿ ಚಿತ್ರ ಕಾರರಿಲ್ಲವೇ ಎಂದು ಕೇಳಿದನು! 'ಇರುವರು-- ಆದರೆ . . .' ಎಂದು ಅಲ್ಲಿಗೆ ನಿಲ್ಲಿಸಿದನು 'ಇರಲಿ, ಅವರ ಹೆಸರೇನು?'–ಎಂದು ತಿರುಗಿ ಪ್ರಶ್ನೆಮಾಡಲು– "ಓಹೋ ರವಿವರ್ಮ, ದುರಂಧರ, ಮುಜುಮುದಾರ ಠಾಕೂರಸಿಂಗ ಎಂಬವರು. ಮೊದಲಿನವನಿಗೆ ದೇವರನ್ನು ಬಿಟ್ಟರೆ ಬೇರೆ ವಸ್ತುಗಳೇ ಇಲ್ಲ. ಚಿತ್ರಗಳೇನೋ ಸಾಧಾರಣ ಇವೆ— ಆದರೆ ನಾನು ಕ್ರಿಸ್ತಿಯನು ಹಿಂದೂಚಿತ್ರಗಳನ್ನು ಕಂಡೇನು ಮಾಡಲಿ!"— ಎಂದನು. "ಇರಲಿ, ನಿಮ್ಮ ಮನಕ್ಕೊಪ್ಪಿದ ಹಿಂದೀ ಚಿತ್ರ ಕಾರರಾರು?" ಎಂದು ಪ್ರಶ್ನೆಮಾಡಲು— "ಹುಂ, ಮುಜುಮುದಾರನೇ". ಎಂಬ ಉತ್ತರ

ಈ ಹೇಳಿಕೆಯ ಮೇಲಿಂದ ಮುಂಬಯಿಗೆ ಬಂದು ಅಲ್ಲಿನ ಚಿತ್ರದಂಗಡಿಗಳನ್ನು ತಿರುಗಿದನು. ರವಿವರ್ಮನ ಚಿತ್ರಗಳು ಬಿಕರಿಯಾಗುವ ಸ್ಥಳಕ್ಕೆ ಹೋಗಿ ಅಲ್ಲಿನ ಉತ್ಕೃಷ್ಟ ಚಿತ್ರಗಳನ್ನು ಕೇಳಿದನು ಸರಿ, ೫೦ ಚಿತ್ರಗಳನ್ನು ಕೊಂಡುಕೊಂಡನು ಅವುಗಳನ್ನು ಅಲ್ಲೇ

ನೋಡುವ ಗೋಜಿಗೆ ಹೋಗಲಿಲ್ಲ. ಹೋದರೆ ಕೊಂಡುಕೊಳ್ಳುವ ಮನಬಂದೀತೊ ಇಲ್ಲವೋ ಎಂದು ಸಂಶಯ. ಅಲ್ಲಿ, ಇಲ್ಲಿ ರೈಲ್ವೆ ಪೋಸ್ಟರುಗಳಲ್ಲಿ—ದುರಂಧರನ ಕಲಾ ಪರಿಚಯವಾಯಿತು. ಆ ಬಳಿಕ ಒಂದು ಸೆಟ್ಟು—ಮುಜುಮದಾರನ ಚಿತ್ರಗಳನ್ನು ಕೊಂಡನು. ತಂದು, ವಾಲ್ಮೀಕಿಯಂತೆ ಬೇರೆಯೊಂದು ಮನೆಮಾಡಿಕೊಂಡು, ಶಾಂತತೆಯಿಂದ ಪರಿಶೀಲಿಸ ತೊಡಗಿದನು. ರವಿವರ್ಮನ ಚಿತ್ರ ಕಂಡಂತೆ ಹಲವು ದೇವರ, ಅವರ ಪತ್ನಿಯರ, ಕಾವ್ಯವರ್ಣಿತ ಪುರುಷರ, ವ್ಯಕ್ತಿಗಳ ಚಿತ್ರಗಳನ್ನು ಕಂಡನು. ಪ್ರತಿ ಚಿತ್ರವನ್ನು ಕಂಡರೂ - "ಛೀ ಇವಳು ಸೀತೆಯೇ! ಇಂಥ ಒಂದು ವ್ಯಕ್ತಿಯನ್ನು ನಾನು ಮೊನ್ನೆ ಪುಣೆಯಲ್ಲಿ ಕಂಡಿದ್ದೆ, ಇವಳು ನಮ್ಮ ಕೇಶವ ಮೆಸೋನರ ಮಗಳು, ಇವಳು ಪ್ರಸಿದ್ಧ ಗಾಯಕಿಯೆನಿಸಿಕೊಂಡ ಅವಳಲ್ಲವೇ" ಎನ್ನ ತೊಡಗಿದನು. ಅವನ ರಾಮಕೃಷ್ಣರನ್ನು ನೋಡಿ "ಇವರು ಈ ನಾರಿಯರಂತೇ ನನಗೆ ಪರಿಚಿತರು!" ಎಂದಂದನು. ಈಗವನ ಕೈಗೆ ಶೇಷನ ಮೇಲೆ ಕುಳಿತ ವಿಷ್ಣು, ಬಳಿ ಯಲ್ಲೀರ್ವರು ಪತ್ನಿಯರಿದ್ದ ಚಿತ್ರ ಬಂದಿತು. (ಒಬ್ಬಳು ಲಕ್ಷ್ಮಿ; ಇನ್ನೊಬ್ಬಳು?) ಚಿತ್ರ ಕಂಡನು; ಕಂಡು ಕಂಡು—"ವಿಷ್ಣುವು ಈ ಸಹೋದರಿಯರನ್ನು ಮದುವೆ ಯಾದನೇಕೆ?" ಎಂದು ಪ್ರಶ್ನೆಮಾಡಿದನು. ಚಿತ್ರ ಗಳನ್ನು ನೋಡಿ—'ನಿಜವಾಗಿ ಈ ಚಿತ್ರಕಾರನಲ್ಲಿ

ಸಮತಾಬುದ್ಧಿಯಿದೆ. ದೇವರನ್ನು ಮನುಷ್ಯರಂತೆಯೇ ಚಿತ್ರಿಸಿರುವನು. ಅವರೂ ಅದೇ ಮನೋವಿಕಾರಗಳಿಗೆ ಬಲಿಯಾಗುವಂತೆ ಮಾಡಿರುವನು!"—ಎಂದು ಅವನ ನವಭಾವನೆಗಳನ್ನು ಕೊಂಡಾಡಿದನು.

ಪುರಂಧರನ ಚಿತ್ರಗಳಲ್ಲಿ ಒಂದು ರೀತಿಯ ಏಕತೆಯಿದೆ. ಅವನ ಚಿತ್ರಗಳ ಎಲ್ಲಾ ಪಾತ್ರಗಳನ್ನೂ ಕೇವಲ ಒಂದೆರಡು ವ್ಯಕ್ತಿಗಳು ಅಭಿನಯಿಸುತ್ತಿದ್ದಿರಬೇಕು. ಅವನ ಕಲೆಯ ಪರಿಸಮಾಪ್ತಿಯು ಆ ರಾಮಪಟ್ಟಾಭಿಷೇಕದಲ್ಲಿತ್ತು. ಶರೀರರಚನಾಶಾಸ್ತ್ರದ ಶಿಷ್ಯನೆನಿಸಿದ ಅವನು, ಈ ಚಿತ್ರದಲ್ಲಿ ಅದನ್ನು ಮುರಿದು ಒಕ್ಕಾಪಾಲಾಗಿರಿಸಿ, ತನ್ನ ಸ್ವಾತಂತ್ರ್ಯವನ್ನು ತೋರಿಸಿರುವನು.

ಇವರಿಗಿಂತ ಒಂದು ಹೆಜ್ಜೆ ನಮ್ಮ ಮುಜುಮದಾರನು ಸಾಗಿರುವನು. ಇವನು ಬರೆದ ಪೌರಾಣಿಕ ಚಿತ್ರಗಳು ಕಡಿಮೆ. ಒಮ್ಮೆ ಬರೆದರೂ ಅವನ ರಾಧೆಯು ಗ್ರ್ಯಾಂಟ ರೋಡಿನಿಂದ ಬಂದವಳೆಂದೇ ಕಾಣುವುದು. ಅವನಿಗೆ ಕುಂಚಿನಿಂದ ಬಣ್ಣವನ್ನು ಪಸರಿಸುವ ವಿಶೇಷ ಶಕ್ತಿಯಿದೆ. ಅದರ ಅಪಾರ ಬಲವು ಎಂಥ ವೃದ್ಧನಲ್ಲಿಯೂ ನವಯೌವನವನ್ನು ತುಂಬಬಲ್ಲದು. ಅವನು ಹಲವು ಚಿತ್ರಗಳನ್ನು ಬರೆದಿರುವನು. ಅವುಗಳಿಗೆ ಚಮತ್ಕಾರದ ಹೆಸರುಗಳನ್ನೂ ಕೊಟ್ಟಿರುವನು "Loves dart" ಎಂಬ ಅದ್ಭುತ ಚಿತ್ರವು ಅವನದೇ! ನಿಜವಾಗಿಯೂ ಅವನ ಚಿತ್ರಪುಸ್ತಕವನ್ನು ತೆರೆದವನಿಗೆ ಮಡಿಸಲು ಮನಬಾರದು.

ಕಣ್ಣನ್ನು ಕುಕ್ಕುವ ಬಣ್ಣಗಳನ್ನು ಬಡಿಸಬಲ್ಲವವನು. ಆ ಉಡುಗೆತೊಡಿಗೆಗಳನ್ನು ಕಂಡರೆ ಮರುದಿನ ಅವೇ ವಸ್ತ್ರಗಳನ್ನು ಧರಿಸುವ ಆಸೆ ನಮಗಾಗಬೇಕು ಅದೇರೀತಿ ಕುಪ್ಪಸಗಳನ್ನು ವ್ಯವಸ್ಥೆಗೊಳಿಸಿ–ಶರೀರದ ನಿಸರ್ಗಶೋಭೆಯನ್ನು ಮರೆಮಾಡಬಾರದು — ಎಂದು ಆಸೆಯಾಗಬೇಕು. ಅತಿ ಶೀತದ ದಿನಗಳಲ್ಲೂ ಸಹ, ಆ ಚಿತ್ರ ಪ್ರೇರಿತ ರಮಣಿಗೆ ತನ್ನ ಸೀರೆಯ ಭಾರ ಅತಿ ಹೆಚ್ಚೆಂದು ಕಾಣಿಸಬೇಕು. ಜನಾಂಗಕ್ಕೆಂತಹ ನವಸ್ಫೂರ್ತಿ! ಯುವಕರು, ತಮ್ಮ ಭಾವೀಸಹಧರ್ಮಿಣಿಯರನ್ನು, ಈ ಚಿತ್ರಗಳ ಮೇಲಿಂದಲೇ ಆರಿಸಬೇಕು. ಒಂದೇ ಶಬ್ದದಲ್ಲಿ ಅವನ ಕಲೆಯ ಸಾರವನ್ನು ಹೇಳಬೇಕೆಂದಿದ್ದರೆ— ಅದು "ರತಿ" ರಾಜ್ಯ!

ಇಂಥ ಅದ್ಭುತ ಪರಿಶೀಲನೆಯಿಂದಲೂ, ಆಗಾಗ ಹಜಾಮಾಲಯ, ಆರೋಗ್ಯಧಾಮಗಳಲ್ಲಿ ತೂಗುತ್ತಿರುವ ನವಶಿಲ್ಪದ ಪ್ರತಿಬಿಂಬದ ಚಿತ್ರಗಳಿಂದಲೂ, ಸಾಮಾನ್ಯ ಧೂಮಭಕ್ತನ ಸಿಗರೇಟು ಡಬ್ಬಿಯ ಮೇಲಿನ ಚಿತ್ರಗಳ ದರ್ಶನದಿಂದಲೂ, ವಿಶ್ವಕರ್ಮನು ನವಕಲಾರಾಜ್ಯದಲ್ಲಿ ವಿಹರಿಸತೊಡಗಿದನು. ಅಲ್ಲಿಂದ ಮನವನ್ನು ಸೆಳೆದು ಇತರ ಕಡೆಗಿರಿಸಲು ಬಲು ಕಷ್ಟವಾಯಿತು. ಆ ಕೆಲಸವನ್ನು ಚಿಕ್ಕದೊಂದು ಲೇಖವುಂಟುಮಾಡಿತು. "ಭಾವದೇವಿ" ಎಂಬ ಕಲಾಪತ್ರಿಕೆಯು ಅವನ ಕಣ್ಣಿಗೊಂದು ದಿನ ಬಿತ್ತು. ಅದರೊಳಗೆ 'ನಮ್ಮ ಅಜಂತದ ಪಂರಿಗಳು' — ಎಂದು ಒಂದು ಲೇಖ

ವಿತ್ತು. ಅದರಲ್ಲಿ, ಕೆಲವು ವಂಗ ಚಿತ್ರಕಾರರಿಗೂ, ಪ್ರಾಚೀನ ರಾಜಪುತ್ರ ಚಿತ್ರಕಾರರಿಗೂ ಮಂಗಳಾರತಿ ಗಳಿದ್ದುವು. ಅವನೊಮ್ಮೆ ಅಜಂತಕ್ಕೆ ಹೋಗಿದ್ದನು. ಆದರೆ ಅದು ವಾಸ್ತುವಿನ ದೃಷ್ಟಿಯಿಂದ. ಅವನಿಗೆ ಒಂದು ಹಿಡಿದರೆ ಉಳಿದ ಪ್ರಪಂಚವೇ ಕಣ್ಣಿನಿಂದ ಮಾಯ ವಾಗುವುದು. ಇದವನ ಹುಟ್ಟುಗುಣ ಹೀಗಾಗಿ, ಅಲ್ಲಿ ಚಿತ್ರಗಳಿದ್ದುವೆಂಬ ಕಲ್ಪನೆ ಸಹ ಆಗಲಿಲ್ಲ. ಈ ಕಾರಣದಿಂದವನು ತಿರುಗಿ ಆ ಸ್ಥಳವನ್ನು ಸಂದರ್ಶಿಸುವ ಯೋಚನೆಮಾಡಿದನು. ಆದರೆ ಒಮ್ಮೆಗೇ ಹೋಗುವ ಮೊದಲು—ಈ ವಂಗಭೂಪರನ್ನೂ, ಚಿತ್ರಗಳನ್ನೂ, ಕಾಣುವ ಮನವಾಯಿತು ಆ ಲೇಖಕನು ಇವರನ್ನು ಕುರಿತು—"ಈ ಮಂಗಳ ಚಿತ್ರಗಳಲ್ಲಿ ಪ್ರಮಾಣವಿಲ್ಲ. ದೃಶ್ಯೋಪಮಾನವೂ (Perspective) ಇಲ್ಲ, ಛಾಯಾತೇಜವಿಲ್ಲ, ಯಥಾತ್ಮಕತೆಯಿಲ್ಲ (Realism). ಆವ್ಯಕ್ತಿಗಳು—ಕ್ಷಾಮಪೀಡಿತ ರಾಜ್ಯದಿಂದ ಹೊರಟು, ಪ್ರೇತರಾಜ್ಯಕ್ಕೆ ಯಾತ್ರೆಯನ್ನು ಕೈಕೊಂಡಂತಿದೆ. ಹೆಚ್ಚಿನವುಗಳಿಗೆ ನಿದ್ರೆಯಿಂದ ಅರೆಗಣ್ಣು ಮುಚ್ಚಿರುತ್ತದೆ. ಹುಟ್ಟಿದಂದಿನಿಂದ ಆಹಾರವನ್ನು ಅವು ಕಂಡಿರಲಾರವು. ಸರಿಗೆಯನ್ನು ಬಗ್ಗಿಸಿದಷ್ಟು ಸುಲಭದಲ್ಲಿ ಬೆರಳುಗಳು ಬಗ್ಗಿ ಚಿತ್ರವಿಚಿತ್ರಗತಿಯನ್ನು ತೋರಿಸುತ್ತಿವೆ. ಬೆರಳು ಗಳಿಗಂತು ಪಡವಲ ಕಾಯಿಗಳಿಗೆ ಕಲ್ಲುಗಳನ್ನು ಕಟ್ಟಿ ಉದ್ದಮಾಡುವಂತೆ ಪ್ರಯೋಗಗಳು ನಡೆದಿರಬೇಕು. 'ಒಮ್ಮೆ ಒಬ್ಬ ದೇವಿಯು ಬೆರಳುಗಳನ್ನು ಕಂಡು,

ಇವೇನು ಹಾವಿನ ಮರಿಗಳೇ'! ಎಂಬ ಭ್ರಾಂತಿ ನನ ಗಾಯಿತು. ಇಷ್ಟಿದ್ದರೂ ಅವುಗಳನ್ನು ಕಲವು ಪ್ರಸಿದ್ಧ ಪತ್ರಕರ್ತರು ಪ್ರಕಟಮಾಡುತ್ತಿರುವರು; ಪ್ರಶಂಸಿಸು ತ್ತಿರುವರು! ಇದೇ ಸೌಂದರ್ಯವೆನಿಸುವುದಾದರೆ, ಪ್ರತಿಯೊಬ್ಬರು ತೀರ ಕುರೂಪಗಳನ್ನು ಕಾಣಬಯಸು ವರೇ ಹೊರತು ಸೌಂದರ್ಯದ ತಂಟೆಗೆ ಹೋಗು ವಂತಿಲ್ಲ."— ಎಂದು.

ಇವುಗಳಿಂದ ಇದೆಂಥ ಹೊಸ ಮಾದರಿಯ ಚಿತ್ರ ವೆಂದು ಬಹಳ ಪ್ರಯಾಸದಿಂದ ಕೆಲವು ಚಿತ್ರಗಳನ್ನು ಸಂಗ್ರಹಿಸಿದನು. ಕೊನೆಗೆ ಇವುಗಳಿಗೆ ಪ್ರೇರಣೆ ಯನ್ನಿತ್ತ "ಆ ಅಜಂತವೆಂತಿಹುದೋ"–ಎಂದು ಅಲ್ಲಿಗೂ ಓಡಿದನು! ಅಲ್ಲಿಂದ ಮರಳಿ ಬರಲು ಅವನಿಗೆ ಒಂದು ತಿಂಗಳು ಹಿಡಿಯಿತು!

ಅವನು ಇವುಗಳನ್ನೆಲ್ಲಾ ಕಂಡು, ತನ್ನ ಪುಸ್ತಕ ದಲ್ಲಿ— "ಈ ವಿಚಿತ್ರ ಚಿತ್ರಕಾರರು ನೆಲದ ಮೇಲೆ ಬಿದ್ದ ಮೀನಿನಂತೆ ಒದ್ದಾಡುತ್ತಿರುವರು. ಇದವರಿಗೆ ತಕ್ಕ ಶಿಕ್ಷೆ. ಕಾರಣ, ಇವರು ಸಹಸ್ರಾರು ಕಲಾವಂತ ರೆನಿಸುವವರ ಮನಮುರಿಯುವ ಸಾಹಸಕ್ಕೆ ಹೋಗ ಬೇಕೇಕ?"

## ಪ್ರಕರಣ ೨೪.

## ವೀಣಾಪಾಣಿಯ ಅನುಭವ.

ವೀಣಾಪಾಣಿ ಭಾರತಿಯು ಅಲ್ಲಲ್ಲಿ ಸಂಚರಿಸ ತೊಡಗಿದಳು. ಭಾರತದಲ್ಲಿ ತಂತಿಯು ಹೇಗೆ ಧ್ವನಿ

ಗೊಡುವುದೆಂದು ತಿಳಿಯಲು ಆವಳೀಗ ಸೊಂಟಕಟ್ಟಿರು ವಳು. ಈಗ ತಂತಿಗಳೆಲ್ಲಾ ಅಳಿಯುವ ಕಾಲ ಬಂದ "ವಾಯರ್‌ಲೆಸ್"ಹೊರಟವೆಯಂತೆ. ಎಂದೇ ಹಾರ್ಮೊನಿಯಂಗಳು ಎಲ್ಲೆಲ್ಲಿಯೂ ತುಂಬಿವೆ. 'ನವಸಾಹಸಿ' (Ameture)ಗಳು ಮಾಡುವ ಸವಾರಿಯೆಲ್ಲ ಇವುಗಳ ಮೇಲೆ. ಕತ್ತೆಯ ಕಂಠಕ್ಕೂ ಮೇಳವಾಗುವ ತಾಳ್ಮೆ ಅದರಲ್ಲಿದ್ದುದರಿಂದಲೇ ಅದಕ್ಕೆ ಪೇಳಕಾರ (Harmonium) ಎಂದು ಹೆಸರು ಬಂದಿದೆ. ಆದರೆ ಇದರ ಜನ್ಮಕ್ಕೂ ಮೊದಲು, ಅಥವಾ ಪ್ರಚಾರಕ್ಕೂ ಮೊದಲು, ಹುಟ್ಟಿನ ಗುರುಗಳಿಂದ ಸಂಗೀತ ಕಲಿತ ಶಿಷ್ಯರು ಮಾತ್ರ, ವೀಣೆ, ತಂಬೂರಿ, ಸಾರಂಗಗಳನ್ನು ಬಾರಿಸುತ್ತಿರುವರು. ಆದರೆ ಸಾಮಾನ್ಯ ಜನರ ಮನೆಯಲ್ಲೂ, ಸಹ ಈ ಸ್ವರಪೇಳದ ಡಬ್ಬಿಯಿವೆ. ನಮ್ಮೂರಿನ ಯಾವ ಗಲ್ಲಿಯಲ್ಲಿ ನೀವು ಯಾವ ಗಳಿಗೆಯಲ್ಲೇ ತಿರುಗಿಂ ನಿಮ್ಮ ಕಿವಿಗೆ ದಕ್ಷಿಣಾದಿಯ "ಆವಳೀ ತರುಣಿಮಣಿ," "ಇವನಾರೀ ಸುಕುಮಾರ", "ಸಾ ಸಾನಿನಿದ ಪದಪಮ ಗಾಮಾ"—ಉತ್ತರಾದಿಯ —"ಕೃಷ್ಣ ಪ್ರೀಯಾ ಹೈತೋ ಮೀರಾ" "ಸಾವಲ ಬನ್ಸಿವಾಲಾ"—"ಪೇಳಲೇನಾ ರಮಣಿ" ಹಾಡುಗಳನ್ನು ಕೇಳುವಿರಿ. ಇನ್ನು "ಸಗ್ಗಾ, ಸಗ್ಗಾ, ಸಗ್ಗಾ, ಮಗರಿಸ"ಗಳಿವೆ. ದಕ್ಷಿಣೋತ್ತರಾದಿಯ 'ಲಲನಾಮನಾ,ಧಿಕ್ಕಾರ ಮನಸಾಹಿನಾ,"ಗಳಿವೆ. ಸಂಜೆ ಹೊತ್ತಿಗೆ—ಭೂಪಾಳಿ, ಭೂಪ, ಬಿಭಾಸಗಳನ್ನು ಹಾಡುವ "ಗವಾಯಿ" (ಅಂದರೆ ಗಾನದ ಅವತಾರಗಳು)

ಗಳಿರುವರು. ಬೆಳಗ್ಗೆ ವಸಂತ, ಪೂರ್ವಿಗಳನ್ನು ಹಾಡುವ ಕಲಾವಂತರಿರುವರು.

ಈಗಂತು ಆ ಗ್ರಾಮಫೋನಗಳು ಬಂದುದರಿಂದ ಯಾವತ್ತು ಗಾನಕೋವಿದರ ತಂಡವನ್ನು ಸಿಮ್ಮ ಆಡುಗೆಯ ಮನೆಯ ಬುಡದಲ್ಲಿ ತುರುಕಿಸಬಹುದಾಗಿದೆ. ಸರಸ್ವತಿಯು ಒಬ್ಬರಿಂದ ಒಂದು ದಿನ ಅಂಥ ಫೋನವನ್ನು, ಕಲವು ಗಾನಫೋನೆ (Plates)ಗಳನ್ನೂ ತಂದಳು. ಅವನ್ನು ಫೋನದ ಕಾವಲಿಯ ಮೇಲರಿಸಿ, ತಿರುಗಿಸಿದಳು. ಒಮ್ಮೆಗೇ, ಪರವರ್ಧನನ ಆ "ಸಂಗೀತದ ಸರ್ಕಸ್ಸು" ಹೊರಟಿತು. ಸ್ವರಮೇಳದಿಂದ ಈ ರೀತಿ ಕಸರತ್ತು ಮಾಡಲು ಬರುವುದೆಂದು ಅವಳಿಗೆ ತಿಳಿದಿರಲಿಲ್ಲ. ಈ ಸದ್ದನ್ನು ಕೇಳಿ ಹೊರಗಿಂದ ಹಾದಿಹೋಕರು ಮನೆಯ ಸುತ್ತ ಕವಿದರು! ಸಂಗೀತದ ಮೇಲೆ ಎಂಥ ಅಭಿಮಾನ! ಜೀಬುಜಾನಳ— "ಪಿಯಾ, ಮೃತೋ" ಹಾಡು ಬರಲು ಹೊರಗಿನ ಸಭಿಕರು ಕರತಾಡನದಿಂದ ತಾಳ ಹಾಕತೊಡಗಿದರು, ಕಲವರು ಹಾಡನ್ನು ಸಿಳ್ಳಿನಲ್ಲಿ ಅನುಕರಿಸಿದರು; ಕಲವರು-'ವಹವ್ವಾ, ವಹವ್ವಾ' ಎಂದರು. ಈ ಗದ್ದಲವೇನೆಂದು ಕೇಳಲು ಹೊರಗ ಬಂದರೆ ಜನರ ಸಂತೆಯೇ ನೆರೆದಿತ್ತು. ಒಳಗಿನ ಹಾಡು ಮುಗಿದರೂ, ಹೊರಗೊಬ್ಬನ ಸಿಳ್ಳು ಮುಗಿಯಲಿಲ್ಲ!

ಒಂದು ದಿನ ಗಾನಕ್ಕಾಗಿಯೇ ಸರಸ್ವತಿಯು, ಮಿಸ್ (೪೦ ವರ್ಷದ)—ಮೋಹನಾಬಾಯಿ. ಎ-ಬ

ವಳ ಗಾನವನ್ನಾಲೈಸಲು, 'ದಿ ಗ್ರೇಂಡ್ ಥಿಯೇಟರ'ಗೆ ನಡೆದಳು. ಅವಳಿಗೆ 'ಕಲಿಯುಗದ ರಂಭಾ'— ಎಂಬ ಬಿರುದಿತ್ತು. ಅವಳಾಗ ಶಕುಂತಲೆಯಾಗಿ ಹಾಡು ತ್ತಿದ್ದಳು. ಅವಳು ತನ್ಮಯಾವಸ್ಥೆಯಲ್ಲಿದ್ದಾಗ ಒಳಗಿಂದ ಸ್ಟೇಜು ಮೆನೇಜರನು—"ಒಂದು ಘಂಟೆಯಾಯಿತು ಸಾಕುಮಾಡು" ಅನ್ನಬೇಕಾಯಿತು. ಆಗವಳು ಸಿಟ್ಟಿ ನಿಂದ, ಅಲ್ಲಿ ಅರ್ಧದಲ್ಲಿಯೇ ನಿಲ್ಲಿಸಿಬಿಟ್ಟು, ಒಳಗೆ ನಡೆ ದಳು. ಜನರು 'ಓನ್ಸ್‌ಮೋರ್' ಎಂದರು ತಿರುಗಿ ಬರಲೇ ಬೇಕಾಯಿತು! ಈಗ ದ್ವಿಗುಣಿತ ಉತ್ಸಾಹ ದಿಂದ! ಆದರೆ ಆಯಾಸವಾಗಿ ಅವಳ ಕಂಠವು ಸ್ವಲ್ಪ ಬಿರುಸಾಗತೊಡಗಿತು. ಎಡಗಡೆಯ ಪ್ರೇಕ್ಷಕರ ಸಲು ವಾಗಿ ಪಂಚಮದಲ್ಲೂ, ಬಲಗಡೆಯವರ ಸಲು ವಾಗಿ ರಿಷಭದಲ್ಲೂ ಸ್ವರವನ್ನು ಚೆಲ್ಲತೊಡಗಿತು. ಮಧ್ಯೆ — ನಡುಗಡೆಯು ಜನರ ಸಲುವಾಗಿ— ಗಾಂಧಾರವೂ ಸೇರಿತು. ಸೋತುಸುಣ್ಣವಾದಳವಳು. ೧೧ ಘಂಟೆಗೆ ತೊಡಗಿದ ಹಾಡು ೧ ಘಂಟೆಯಾದರೂ ಮುಗಿಯದು. ಜನರಿಗೆ ಕೊನೆಗೆ—'ಅವಳ ಹಾಡಿಲ್ಲ ದಿದ್ದರೆ ಹೋಗಲಿ; ಬರೆ ಅವಳನ್ನಾದರೂ ಕಾಣುವ' ಎಂಬಷ್ಟು ಆತುರವಿತ್ತು. ಆದರೆ ವೇಳೆಯಾಯಿತೆಂದು ಕೂಡಲೆ—ಅಂದರೆ ದುಶ್ಯಂತನ ಪತ್ನಿತ್ಯಾಗವಿಲ್ಲದೆ—ಅವ ರಲ್ಲಿ ವಿವಾಹಮಾಡಿಸಿ ನಾಟಕ ಮುಗಿಸಿದರು. ಸರಸ್ವತಿ ಯು ಕುಳಿತಲ್ಲೆ ಇದ್ದಳು. ಅವಳನ್ನು ಕಂಪೆನಿಯ ಕೂಲಿಗ ಳು ಬಂದು, "ಉಠೋ, ಉಠೋ," ಎಂದು ಎಚ್ಚರಿಸಿದರು.

ಒಮ್ಮೆ ಅವಳು ದ. ಹಿಂದುಸ್ಥಾನದ ರಂಗರಾಮಾನುಜ ಭಾಗವತರ ಕಚೇರಿಗೆ ಹೋಗಿದ್ದಳು. ಆ ದಿನ ಸ್ಥಳ ದೊರೆಯುವುದೇ ಕಷ್ಟವಾಗಿತ್ತು. ಅಂತು ದೊರಕಿಸಿಕೊಂಡು ಮುಂದರಿದಳು. ಭಾಗವತರ ಬಳಿಯಲ್ಲಿ ಅಖಿಲ ತಮಿಳುನಾಡಿಗೇ ಹೆಸರುಹೋದ ವೆಂಕಟಪತಿ ಅಯ್ಯರವರು ಮೃದಂಗಕ್ಕೆ ಕುಳಿತಿದ್ದರು. ಭಾಗವತರ ಭಗವತಿಯು (ಅವಿವಾಹಿತ ಪತ್ನಿ)ಯು ಪಿಟಲಿಗೆ ಕೈಕೊಟ್ಟಿದ್ದಳು. ಘಂಟೆಗಂ ಆಗಲು—"ಇಂ ಇಂಯಿ, ಇಂ ಇಯಿಂ ಇಯಿಂ." ಎಂದು ಭಾಗವತರು ಗಂಟಲನ್ನು ಸರಿಪಡಿಸತೊಡಗಿದರು. ಆಗಲೇ ಜನರು ತಲೆತೂಗಲು ಆರಂಭ ಸರಿ, ಹಾಡು ತೊಡಗಿತು. ಜನರ ಚಪ್ಪಾಳೆಯೇ ಚಪ್ಪಾಳೆ. "ಎಂತು ಟೋ . . . " ಎಂದು "ವರಾಳಿ"ಯಲ್ಲಿ ಹಾಡತೊಡಗಿದ್ದರು. ಪಲ್ಲವಿಯ ಅಕ್ಷರಗಳನ್ನು, ನಾಯಿಯು ಒಣ ಎಲುಬನ್ನು ಕಚ್ಚತೊಡಗಿದಂತೆ ಹರಿದೆಳೆಯ ತೊಡಗಿದಳು. ಇವರು ಕಚ್ಚಿ ಮುಗಿಯಲು, ಭಗವತಿ, ವೆಂಕಟಪತಿಗಳು ಇನ್ನೊಂದು ಕಡೆಯಿಂದ ಹರಿದೆಳೆಯುವರು. ಈ ಸ್ಪರ್ಧೆಯು ಎ೩ ತಾಸಿನ ತನಕ ನಡೆಯಿತು. ಇಷ್ಟರಲ್ಲಿ ಭಾಗವತರ ಗುಡಾಣವತ್ ಶರೀರದಿಂದ ಎರಡು ಗುಡಾಣ ನೀರು ಹರಿಯಿತು. ಈಗ ಬಂತು—ಚರಣ. ಇದನ್ನು ೧೦ ನಿಮಿಷಗಳಲ್ಲಿ ಮುಗಿಸಿದರು. ಮುಂದೆ ಶ್ರೀರಾಗ, ಗರುಢಧ್ವನಿ, ಧನ್ಯಾಸಿ, ಪಂತುರಾವಳಿಗಳು ನಡೆದುವು. ಕೊನೆಯ ಗಳಿಗೆಗೆ ಮಂಗಳವಾಯಿತು. ಮಂಗಳಕ್ಕೆ

ಒರೇ ಅಕ್ಷಣ ತಗುಲಿತು. ಮರುದಿನ ಆ ಊರಲ್ಲಿ ಅಮೃತಾಂಜನ ಡಬ್ಬಿಗಳಿಗೆ ತುಂಬಾ ಗಿರಾಕಿ! ಗಾನಕ್ಕೆ ಬಂದವರೆಲ್ಲಾ ಒಂದೊಂದನ್ನು ತಪ್ಪದೆ ಕೊಂಡರು. ಅವರೆಲ್ಲರ ಕತ್ತುಗಳೂ ಹಿಂದಿನ ರಾತ್ರಿ, ತೂಗಿ ತೂಗಿ ಬಾತು ಹೋಗಿದ್ದುವು. ಸರಸ್ವತಿಗೂ ಇದೇ ಪಾಡು. ಅವಳಷ್ಟರಿಂದಲೇ ತೃಪ್ತಳಾದಳು. "ಸಂಗೀತವೆಂದರೆ ಸ್ವರಗಳ ಸರ್ಕಸು" — ಎಂದು ಬರೆದಳು.

ಅವಳ ಹುಚ್ಚು ನಾಟಕಗಳ ಕಡೆಗೆ ಹರಿಯಿತು. ಕರ್ಣಾಟಕದ ಕಂಪೆನಿಗಳೆಲ್ಲವನ್ನೂ ತಿರುಗಿದಳು. ತಮಿಳು, ಮಹಾರಾಷ್ಟ್ರ, ವಂಗ ದೇಶಗಳ ಶಾಲೆಗಳನ್ನೂ ಸಂಚರಿಸಿದಳು. ಕನ್ನಡದ "ಕೃಷ್ಣಲೀಲೆ". ಬೆಳ್ಳಾವೆ ಕವಿಗಳ "ಪಾರಿಜಾತ"–ಮರಾಠಿಯಲ್ಲಿ ತರುಣ ಪತ್ನಿ,– ಇವನ್ನೆಲ್ಲಾ ಕಂಡು ಅವಳು ಮುಗ್ಧಯಾದಳು. ಆ ಘರದೆ, ಡ್ರೆಸ್ಸು ಸೀನರಿ, ಮನವನ್ನು ಕದಲಿಸದ ಅಗಾಧ ಅಭಿನಯಗಳೇನು! ಮಿಸ್। ತಾರೆ, ಮಿಸ್। ಗುಣವತಿಯರು ಮೇಲ್ತರಕದ—ಆಕ್ಟ್ರೆಸ್ಸುಗಳು. ಮಿ। ಗುಲಾಬಳಿಗಂತೂ ರಾಮಾಯಣದ ಸೀತೆಯನ್ನು ಗ್ರ್ಯಾಂಟ್ ರೋಡಿನಲ್ಲಿ ನಿಲ್ಲಿಸುವ ಶಕ್ತಿಯಿದೆ! ಮಿ। ಗಂಧರ್ವರ— ವಸಂತಸೇನೆಯ ಭೂಮಿಕೆಯು ಮೃಚ್ಛಕಟದಲ್ಲಿ ಅದ್ವಿತೀಯ! ಆ ಬೌದ್ಧಕಾಲೀನ ನಾಟಕಕ್ಕೆ, ೨೦೩೦ನ ಇಸವಿಯ ಒಪ್ಪನ್ನು ಕೊಟ್ಟು, ವಸಂತಸೇನೆಯ ಶರೀರ ಸೌಂದರ್ಯವನ್ನು ಪ್ರತಿಬಿಂಬಿಸುವ ಉಡುಗೆಯಲ್ಲಿ, ಮಳೆಗೆ ಮೈಯೊಡ್ಡಿ, ಕೋಮಲ ಮೈಯ್ಯ ಥರಥರತೆ

ಋನ್ನು ತೋರಿಸುವಾಗ ಅದೆಷ್ಟು "ಒನ್ಸ್ ಮೋರು"ಗಳು ಬೇಕು.! ಆದರೆ 'ಇಂಥ ಆದರ್ಶನಾಟಕಾಲಯುಗಳು ಇಂದು–ಮೂಕನಾಟಕಗಳ ದೆಸೆಯಿಂದ ಕೆಡುತ್ತಿವೆ ಯೆಂದು' ಒಬ್ಬ ವಿಮರ್ಶಕರು ಬರೆದಿರುವರು (ಈಗೀಗ ಮೂಕಚಿತ್ರಗಳು ನೂತನಾಡ ತೊಡಗಿವೆಯುಂತ!) ಈ ಚೋದ್ಯವನ್ನು ನೋಡಲು ಅವಳಿಗೆಷ್ಟು ಆತುರವಾ ಗಿರಬೇಡ. ಅವಳು— ವಾಲ್ಮೀಕಿ, ವಿಶ್ವಕರ್ಮರನ್ನು ಕರೆದುಕೊಂಡು, ಮಂಗಳೂರಿನ ಹಿಂದುಸ್ಥಾನ ಸಿನೆ ಮಾಕ್ಕ, ಸಾಗಿದಳು. ಆ ದಿನ ಅವರ ಅದೃಷ್ಟವನ್ನು ಬೇಕು. ಇಂಪೀರಿಯಲ್ ಕಂಪೆನಿಯ ಅತ್ಯದ್ಭುತ, ಅಗಾಧ, ಅನುಪಮ, ಅಪೂರ್ವ, ಅನೀರಿಕ್ಷಿತ, ಅತ್ಯು ತ್ತಮ ಚಿತ್ರಪರವಾದ—"ಮೋಹನ ಮುರಲೀ" ಎಂಬ ಮೂಕಚಿತ್ರವನ್ನು ಪ್ರದರ್ಶಿಸುವವರಿದ್ದರು! ಹನುಮಂ ತನ ಬಾಲದಷ್ಟು ಉದ್ದವಿರುವ ಆ ಚಿತ್ರವನ್ನು ಕಾಣಲು– ಮಂಗಳೂರು ನಗರವೇ ಸೇರಿತ್ತು. ಆ ದಿನದ "ಪತಿ ಭಕ್ತಿ"ಯನ್ನು ವಿಚಾರಿಸುವ ಜನಸಂದಣಿ. ಒಂದನೇ ಪ್ರದರ್ಶನಕ್ಕ ನಮ್ಮ ತ್ರಯರು ಪ್ರವೇಶದೊರೆಯದ ಮರಳಿದರು; ತಿಸೇದು ಅದರಂತ. ಮೂರನೇ ದಿನದ ವರೆಗೆ ಅವರ ಆಸೆ ಉಕ್ಕಿ ಉಕ್ಕಿ, ಆತುರದಿಂದ ಬಿಕ್ಕಿ ಬಿಕ್ಕಿ ಅಳುವಂತಾಯಿತು. ಕ್ಷಾಮಪೀಡಿತನ ಮುಂದ ಅನ್ನಹರಿಸಿ, ತಿನ್ನಬೇಡೆಂದರೆ ಅವರಿಗೆ ಎಷ್ಟು ವ್ಯಥೆಯಾ ಗಬೇಡ! ಅಂತು ಮೂರನೇ ದಿನದ ಕೊನೆಯ ಪ್ರದರ್ಶ ನಕ್ಕ ಪ್ರವೇಶದೊರೆಯಿತು. "ಮೋಹನ ಮುರಲೀ"

ಎಂಬ ಹೆಸರನ್ನು ಕೇಳಿ ಇದು "ಕೃಷ್ಣನದೇ" ಎಂದು ಯೋಚನೆಯಾಯಿತು. ಆದರೆ ಕಥೆ ತೊಡಗಲು ಆವಳ ಭ್ರಮೆ ಬಯಲಾಯಿತು. ಹೆಂಡತಿಯ ಕಾಟ ಸಹಿಸದ ಸಮಗಾರನೊಬ್ಬನಿಗೆ ಸಿಕ್ಕಿದ ಒಂದು ಜಾದು ಕೊಳಲಿನ ಕಥೆ! ಆ ಕೊಳಲನ್ನು ಊದಲು ಅದನ್ನು ಕೇಳಿದವರೆಲ್ಲ ಸುತ್ತ, ತಿರುಗತೊಡಗುವರು! ಎಂಥ ಯೋಚನೆ ಹೆಚ್ಚೇನು—ನೋಡನೋಡುತ್ತ ಎರಡು ರೀಲುಗಳು ಸಂದುವು ಆ ಮುರಲಿ ಧ್ವನಿಗೋ ಏನೋ—ಸರಸ್ವತಿಯ ತಲೆಯೂ ತಿರುಗತೊಡಗಿತು ಆವಳು ಅಲ್ಲಿ ಕುಳಿತಿರಲಾರದೆ ಒಮ್ಮೆಗೇ ಹೊರಗೋಡಿಬಂದಳು. ಇದರ ಗುಟ್ಟು ವಾಲ್ಮೀಕಿ ವಿಶ್ವಕರ್ಮರಿಗೆ ತಿಳಿಯಲಿಲ್ಲ. ತಿರುಗಿ ಸರಸ್ವತಿಯು ಬರುವುದರೊಳಗೆ ಕಥೆಯು ಎಷ್ಟೋ ದೂರ ಸಾಗಿತ್ತು. ಸಮಗಾರನು ಹೆಂಡತಿಯಿಂದೋಡಿ ಹಡಗನ್ನೇರಿಯಾಗಿತ್ತು. ಬಂದವಳು—ತಲೆಯನ್ನು ಅಮೃತಾಂಜನದಿಂದ ತಿಕ್ಕಿಕೊಳ್ಳತೊಡಗಿದಳು! ಅದರ ಪರಿಮಳವು ಸುತ್ತಲಿದ್ದ ಜನರಿಗೂ ಸ್ವಲ್ಪ ವಿಶ್ರಾಂತಿಯನ್ನು ಕೂಡಿಸಿತು. ಸರಿ, ಸಮಗಾರನು ಸಜೀವ ತಿಮಿಂಗಿಲವನ್ನು ಏರುತ್ತಾನೆ; ದಡ ಕ್ಕಿಳಿಯುತ್ತಾನೆ, ಅರಸನಿಗೆ ಭೇಟಿಯಾಗುತ್ತಾನೆ! ಅರಮನೆಗೊಯ್ಯಲ್ಪಟ್ಟು ಅರಸುಮಗಳಿಗೆ ಇವನೇ ಅವನಾಗುತ್ತಾನೆ. ಅಹಾ ಎಂಥ ಅರಮನೆ! ಕಥೆಯು ಹಾರೂನು ಅಲ್ರಾಶ್ಚಿಡ್‌ನ ಕಾಲದ್ದು. ಆದರೆ ಕಾಲ್ಪೆ ಕೃತೆಪುಬಗ್ಗೆ ಈ ಮಿತಿಯ ಅರಮನೆಗೆ ಎಳೆಯಲ್ಪ

ಟ್ಟನು. ಆ ಅರಸನು ಯುವನನಾದರೂ, ದೇಶಾಭಿಮಾ ನದ ಸಂಕುಚಿತ ದೃಷ್ಟಿಯಿಲ್ಲವೆ. ಐರೋಪ್ಯರು ಕಟ್ಟಿಸಿದ ಅರಮನೆಯಲ್ಲಿ ವಾಸಮಾಡುತ್ತಿರುವನು ಅವನ ಮಗಳೆಂದರೆ ಅಪ್ಸರಕನ್ಯೆ. ಅವನಿಗಾಗಿಯೇ ಅವಳು ಪ್ಯಾರಿಸಿನಿಂದ ಬಂದಿರಬೇಕು. ಎಂಥ ದೇಶೈಕ್ಯತೆ! ಅರಮನೆಯಲ್ಲಷ್ಟೇ! ನರ್ತನವಿಲ್ಲದೆ ಕಾಲಕಳೆಯದು. ಮಿಶ್ರದೇಶದ ನರ್ತಕಿಯರು ಬಂದರು; ಚೀನಿಯರು ಬಂದರು; ಸ್ವದೇಶದವರು ಬಂದರು. ರಾಜಕುವರಿಗೆ ಇದಾವುದರಿಂದಲೂ ತೃಪ್ತಿಯಾಗಲಿಲ್ಲ. ಅವಳು ಖಾಸಗಿ ಬೈರಕುಮಾಡಿಸಿ ಈ ಮಿತಿಯ ಶ್ವೇತಮುಖಿ ನರ್ತಕಿಯರನ್ನು ಕರೆದಳು. ಈ ನಿಸರ್ಗ ಭಕ್ತರು ಅನಾವಶ್ಯಕದ ಉಡಿಗೆಯನ್ನು ತೆಗೆದುಹಾಕಿ ಕುಣಿಯ ತೊಡಗಿದರು. ನೋಡುವ ಉತ್ಸಾಹದಲ್ಲಿ ಪ್ರೇಕ್ಷಕರ ಕತ್ತು ಕೂಕ್ಕರೆಯ ಕಂರದಂತಾಗುತ್ತಿತ್ತು. ಕೊನೆಗೆ ನಿಷ್ಕರುಣಿ ಅರಸನು ಸಮಗಾರ ರಾಜಕುವರನನ್ನು ಶೂಲಕ್ಕೇರಿಸುವ ಯೋಜನೆಮಾಡಿದನು. ಇದಕ್ಕೆ ಅವನ ಜರ್ಮನ್ ಸೇನಾನಿಯೇ ಕಾರಣ. ಭಾವಿ ಪತಿಯ ಆಗಮನ, ನರ್ತನದ ಸವಿಸ್ವಾದನ, ಪತಿಯ ಭೀಕರ ಮರಣಪ್ರಸಂಗ—ಇಂಥ ಮೂರು ಕಾಲಗಳಲ್ಲೂ ರಾಜಕುವರಿ(ಸುಲೋಚನಾ)ಯ ಮುಖಭಾವವು ಸ್ಥಿತಪ್ರಜ್ಞಾವಸ್ಥೆಯನ್ನು ತೋರುತ್ತಿತ್ತು. ಈಕೆಯ ನಟನೆಯು ಜಗತ್ಪ್ರಸಿದ್ಧವಾಗಿದೆ. ಅವಳ ಅಭಿನಯದ ತುರೀಯಾವಸ್ಥೆಯನ್ನು ಕಾಣಲು—"ಅನಾರಕಳೀ"

ಚಿತ್ರ ಕಾಣಬೇಕು. ಅಲ್ಲಿ ಮರಣದ ಮುಂದೆ, ಎಂಥೆಂಥ ವೀರನ ಹೃದಯವೂ ಸಹ ಕಣ್ಣೀರಿನಿಂದ ತಬ್ಬಿಬ್ಬಾಗುವ ಪ್ರಸಂಗಗಳ ಮುಂದೆ, ಸುಲೋಚನೆಯು ಅನಾದರಕಳಿಗಾಗಿ ನಕ್ಕುದನ್ನು ಕಂಡರೆ ಯಾರಿಗಾದರೂ ಅವಳ ಕೀರ್ತಿಯು ಮಂದಟ್ಟಾದೀತು!

ಒಹೋ! ಮರೆತೆವು! ಚಿತ್ರಪಂಕ್ತಿಯು ಸಾಗುವಾಗ ಆ ಚಿರಸ್ಮರಣೀಯ ನರ್ತನ ಬಂದಿತು; ಬಳಿಕ ಸಕತಾಳಲಾರದ ಕೋಮಲಾಂಗಿಯರ ಜಲವಿಹಾರ ಬಂದಿತು. ಇವನ್ನು ಕುತೂಹಲದಿಂದ ನಿರೀಕ್ಷಿಸುವ ಸಮಗಾರ; ಅವನಿಗೂ ಮಿಗಿಲಾದ ಕುತೂಹಲ ತಾಳಿ, ಪರದೆ ಬಳಿಗೋಡಲು ಸಿದ್ಧರಾದ ಪ್ರೇಕ್ಷಕರನ್ನೆಲ್ಲಾ ಕಂಡು—ವಾಲ್ಮೀಕಿಯು 'ಇದು ನಾನು ಓದಿದುದರ ಪ್ರತಿಬಿಂಬ!' ಎಂದನು. ವಿಶ್ವಕರ್ಮನು—'ನಾನು ಕಂಡುದರ ಪ್ರತಿಬಿಂಬ' ಎಂದನು. ಆಗ ಸರಸ್ವತಿಗೆ ನಗು ಬಂತು. ಅವಳೆಂದಳು: "ನೀವೆಂಥ ತೈಲಬುದ್ಧಿಯವರು. ಇದರಲ್ಲೇನು ಆಶ್ಚರ್ಯವಿದೆ? ಕಲೆಯು ಸೊಗಸನ್ನು ತೋರಿಸುವುದು.

> ಸೌಂದರ್ಯವೇ ಸತ್ಯ; ಸತ್ಯವೇ ಸೌಂದರ್ಯ.
> ನೀನು ಓದಿದ್ದು ಸೊಗಸು = ಸತ್ಯ.
> ನೀನು ಕಂಡದ್ದು ಸೊಗಸು = ಸತ್ಯ.
> ಇಲ್ಲಿ ಕಾಣುವುದು ಸೊಗಸು = ಸತ್ಯ.
> ಸತ್ಯವಾವಾಗಲೂ ಒಂದೇ!"

ಇನ್ನು ಮೂಕನಾಟಕವು ಮುಗಿದ ಬಗೆಯನ್ನು ಹೇಳು

ವೆವು. ಸಮಗಾರನು ಇಷ್ಟೆಲ್ಲವನ್ನು ಸ್ವಪ್ನದಲ್ಲಿ ಕಂಡು ದುಃಡಂತೆ* ಕಥೆಯ ಆರಂಭವು ಕೊಳಲೂದುವ ಸಮಗಾರನಲ್ಲಿ ತೊಡಗಿ ಕೊಳಲೂದುವ ಅವನಲ್ಲಿ ಐಕ್ಯಗೊಂಡಿತು. ಇದು ಕಥಾ ಐಕ್ಯತೆ.

ಹೀಗೆ ಪತ್ತೆಂಟು ಹಿಂದೂ ಚಿತ್ರಗಳನ್ನು ಕಂಡು, ಇದು ವಿಲಾಯತಿಯಿಂದ ಬಂದ ಕಲೆಯೆಂಬುದರಿಂದ ಅದರ ಪಿತರು ಹೇಗೆ ಅದನ್ನು ಚಿತ್ರಿಸುವರೆಂದು ಕಾಣುವ ಆತುರವಾಯಿತು ಹೀಗಾಗಿ ಕೆಲವು — ಇಂಗ್ಲಿಷು ಮತ್ತು ಅಮೇರಿಕದ ಚಿತ್ರಗಳನ್ನು ಕಾಣಲು ಮುಂದಾದರು ಅವರು ಕಂಡ ಆ 'ಸೆರೇನ್ಸ್ ಅಫ್ ದಿ ಸೀ' ಎಂಬುದರಲ್ಲಿ ತುಂಬಾ ನಿಸರ್ಗಭಕ್ತರಿದ್ದರು, ಅದರ ಹಿಂದೆ ಅವರಿಗೆ ಪಾಥೆಯುವರು 'ಸುಪರೋಸುಪರ್' ಜ್ಯುವೆಲ್—'ವಾಂಡರರ್' ಎಂಬ ಚಿತ್ರ ಸಿಕ್ಕಿತು. ಸುಶೀಲ ತರುಣನೊಬ್ಬನು ಹಾದಿಹೋಕ ನಾರಿರಾಣಿಯೊಬ್ಬಳನ್ನು ಕಂಡು ಓಡುತ್ತಾನೆ! ಅವಳಿಗೆ ಇವನ ಮೇಲೆ ಅತ್ಯಧಿಕ ಹುಚ್ಚು. ಅವಳ ಸಂಚಾರವು ತೀರ ಉಷ್ಣ ಪ್ರದೇಶವಾದ ಅರೇಬಿಯಕ್ಕೆ ತಾಗಿದ ನಾಡುಗಳಲ್ಲಿ ನಡೆಯುವುದರಿಂದ ಅವಳು ಹೇಗಿರಬಹುದೆಂದು ನೀವೆ ಯೋಚಿಸಿರಿ . . . ಈ ಚಿತ್ರದ ಅರ್ಧ ಆನಂದವನ್ನು ಸಹ ಜೀರ್ಣಿಸಿಕೊಳ್ಳಲಾರದೆ ಮುಂಡಳದವರು ಮರಳಿ ಬಂದರು.

---

* ಇದಕ್ಕೂ ಕೆಟ್ಟಿನ ಸ್ವಪ್ನಗಳು ಈ ಸಿನೆಮಾ ಕಂಡ ಜನರಿಗೆ ಬೀಳಬಹುದು.

ಆಮೇಲೊಂದು ದಿನ 'ವೆಂಜೆನ್ಸ' ಎಂಬ ಚಿತ್ರಪಠ ವನ್ನು ಕಂಡರು. ನಿಮಗೆಷ್ಟು ಕಳ್ಳರು ಬೇಕು; ಕಾಕರು ಬೇಕು; ಪೋಕರು ಬೇಕು! ಇವರ ಕೈಯಲ್ಲಿ ಸಿಕ್ಕುವ ಕಥಾನಾಯಕನ ಸಾಹಸವೆಷ್ಟು! ರೈಲಿನಿಂದ ದೋಣಿಗೆ, ದೋಣಿಯಿಂದ ವಿಮಾನಕ್ಕೆ, ವಿಮಾನದಿಂದ ಬೆಂಕಿಗೆ, ಬೆಂಕಿಯಿಂದ ನೀರಿಗೆ ಹಾರುವನು. ನಿಮ ಗಾಗಿ ಎರಡು ತಾಸಿನ ಅವಧಿಯಲ್ಲಿ ಕನಿಷ್ಠ ನೂರು ಸಾರಿ ಸಾಯುವನು! (ತಿರುಗಿ ಹುಟ್ಟುವನು.) ಆದರೆ ಇಷ್ಟಕ್ಕೂ ನಿಸರ್ಗಭಕ್ತಳೊಬ್ಬಳು ಕಾರಣಳು.

ಕೊನೆಯದೊಂದು ರ್‍ಯಾಡರ್ ಹೆಗ್ಗಾರ್ಡನ "She" (Who must be obeyed). ಯಾರಿಗೆ ವಿಧೇಯ ತೆಯು ಸಲ್ಲಲೇ ಬೇಕೋ—"ಅವಳು" – ಈ ಕಾದಂ ಬರಿಯ ಮೂಕಚಿತ್ರ ಕಾಣಲು ಹೋದರು. ಶಾಲಾ ವಿದ್ಯಾರ್ಥಿಗಳಿಗೆ ಈ ಕಾದಂಬರಿಯ ಮೇಲೆ ಮಮತೆ ಯಧಿಕ. ಈ ಕಾರಣದಿಂದ ಪ್ರತಿಯೊಬ್ಬ ಶಾಲಾ ವಿದ್ಯಾರ್ಥಿಯ ಹಾಜರಿಯಿತ್ತು. ಮಂಡಳದವರೂ ಆ ಸಭೆಯಲ್ಲಿ ಸೇರಿಕೊಂಡರು. "ಅವಳು— ಇವನ ಕುಲ ಪಿತಾಮಹನನ್ನು ತನ್ನ ಅನುರಾಗತೃಪ್ತಿಪಡಿಸದ್ದಕ್ಕಾಗಿ ಕೊಲ್ಲುವಳು. ಇವನಿಗೆ ಆ ಪಿತಾಮಹನು ಇದರ ಸೇಡನ್ನು ತೀರಿಸಲು ಒಂದು ಶಾಸನ ಬರೆದಿಟ್ಟಿದ್ದನು. ಶಾಸನದ ಮೇಲಿಂದ ಅವಳಿರುವ ನೆಲೆಗೆ ಇವನು ತನ್ನ ಬಂಧುವಿನೊಡನೆ ಹೋಗುವನು. ಅಲ್ಲಿ ಸೆರೆಸಿಗು ವನು. ಬಂಧಮುಕ್ತನಾಗುವನು. ಬಂಧುವು ಅವಳಿಗೆ

ತಲೆವಾಗುವನು. ಇವನು ಅವಳ ಮುಂದೆ ಬರಲು ಅವನ ಕುಲಪಿತಾಮಹನ ಪುನರವತಾರವಿವನೆಂಬ ತಿಳುವಳಿಕೆಯಾಗಿ—ಅವಳ ಅನುರಾಗದ ಸೀಮೆ ಎಣ್ಣೆ ಕೆರೆಗೆ ಬೆಂಕಿಹತ್ತುವುದು. ಆ **ಸೆಕೆಗೆ** ಸಿಲುಕಿದ ಅವಳು ಇವನನ್ನು ಕಣ್ಸನ್ನೆಯಿಂದ ಕರೆಯುವಳು. ಇವನು ಬಳಿಗೆ ಹೋಗುವನು.—ವಿಧೇಯನಾಗಿ ಚುಂಬನವನ್ನೀಯುವನು. ಕಾರಣ-**ಅವಳಿಗೆ** ವಿಧೇಯ ತೆಯು ಸಲ್ಲಲೇ ಬೇಕು. ಮುಂದವಳು ಇವನನ್ನು ಕರೆದೊಯ್ಯುವಳು. ಸೀತಾದೇವಿಯಂತೆ ಚಿತೆಗೆ ಹಾರುವಳು. ತಿರುಗಿ ಬರಲಿಲ್ಲ"—ಇದು ಕಥೆಯ ಸಾರ.

ವೈರಿಯಾಗಿ ಸೇಡನ್ನು ಸಲ್ಲಿಸಲು ಹೋದ ಇವನು **ಅವಳನ್ನು** ಕಂಡು ವಿಧೇಯನಾಗಿ ಚುಂಬನಕೊಡುವ ವೇಳೆಗೆ, ಸರಸ್ವತಿಗೆ ಚಿತ್ರವು ಕಣ್ಮರೆಯಾಯಿತು. ಏಕೆಂದು ಪರಿಶೀಲಿಸಲು, ಇವಳ ದೃಷ್ಟಿಪಥಗಳು ಎರಡು ತಲೆಗಳಿಂದ ಅಡ್ಡವಾಗಿದ್ದುವು. ಪಾಪದ ತರುಣರವರು! ಜನರ ಕಿಕ್ಕಿರಿಯುವಿಕೆಯಿಂದ ಅಲ್ಲಿಗೆ ಹೋಗಿ ಅವನಂತೆ-ವಿಧೇಯತೆಯನ್ನು ಸಲ್ಲಿಸಲಾರದೆ, ತಂತಮ್ಮೊಳಗೆ ವಿಧೇಯತೆಯನ್ನು ಸಲ್ಲಿಸುತ್ತಿದ್ದರು! **ಅವಳಲ್ಲವೆ!** ವಿಧೇಯತೆಯು ಸಲ್ಲಲೇಬೇಕು! ಎಂಥ ಅದ್ಭುತ ಚಿತ್ರ! ಪ್ರೇಕ್ಷಕರಿಗೆ ತನ್ನಲ್ಲಿ ಅಷ್ಟೊಂದು ಪರಿಯಿಂದ ಕೇವಲ ಮಾನಸಿಕ ತಲ್ಲೀನತೆಯನ್ನಷ್ಟೇ ಅಲ್ಲ, ಕ್ರಿಯಾತ್ಮಿಕ ತಲ್ಲೀನತೆಯನ್ನು ಹೊಂದಿಸಲು!

ಚುಂಬನ—ವೆಂಬಲ್ಲಿಗೆ ನೆನಪಾಯಿತು ಯಾವು ದೊಂದು ದೃಶ್ಯದಲ್ಲಿ ಅದಿಲ್ಲವೋ—ಅದು ಕಲೆಯ ಅಭಾವವನ್ನು ಸೂಚಿಸುವುದೆಂದು ಆಧುನಿಕರ ತತ್ವ. ಕೆಲವು ಉತ್ತಮ ಚಿತ್ರಗಳಲ್ಲಿ ಮಾನವರ ಚುಂಬನ ಪದ್ಧತಿಯು ಕುದುರೆಗಳ ಪದ್ಧತಿಯನ್ನು ಅನುಕರಿಸುವು ದುಂಟು!

ಇಂಥ ಚಿತ್ರಗಳಿಂದಲೇ ತರುಣರು ವಿದ್ಯಾವಂತ ರಾಗಬೇಕು. ಒಬ್ಬ ಕಾಲೇಜಿನ ಪ್ರೊಫೆಸರರು—"ಅವ ಳನ್ನು ಕಾಣಲೇಬೇಕು" ಎಂದಾಜ್ಞೆಯಿತ್ತಿದ್ದರಂತೆ ಅಷ್ಟಿದ್ದ ಬಳಿಕ ಹುಡುಗರು 'ಅವಳನ್ನು' ಎಲ್ಲಾದರೂ ಹುಡುಕದೆ ಇರಲಾರರು.

* * * *

ನರ್ತನದ ಕುರಿತು ಒಂದೆರಡು ಮಾತುಗಳು. ಇವಳನ್ನು ಸಜೀವಸ್ವರೂಪದಲ್ಲಿ, ಹೈದ್ರಾಬಾದಿನ ರಸಿ ಕರ ಸಿನೆಮಾ ಮಂಟಪಗಳಲ್ಲಿ ಕಾಣಬಹುದು. ಮೂಕ ಚಿತ್ರಗಳಲ್ಲಂತೂ ಇವಿಲ್ಲದೆ ಜೀವವೇ ಇಲ್ಲ.

ಈಗಿನ ದೇವಾಲಯಗಳಲ್ಲಿ ಈ ನರ್ತನದ ಮರಿಗ ಳನ್ನು ಉಂಬಳಿಕೊಟ್ಟು ಸಾಕುತ್ತಿರುವರು. ದೇವರಿಗೆ ಈ ನರ್ತನದ ಮಮತೆ ಹೆಚ್ಚಂತೆ! ಇದು ಎಷ್ಟರಮಟ್ಟಿಗೆ ನಿಜವೆನ್ನಲು ಬಾರದು. ಕಾರಣ—ನರ್ತಕಿಯರಿಗೆ ನರ್ತನದ ಅರ್ಥ ತಿಳಿಯದಿರುವಾಗ ಆ ಪ್ರೇಕ್ಷಕ ಸ್ವ ರೂಪದ ದೇವನಿಗೇನು ತಿಳಿಯಬೇಕು? ಪ್ರಾಯಶಃ ಅವನು ನರ್ತಕಿಯರ ಭಕ್ತಿಗೆ ಮೆಚ್ಚಿರಬೇಕು. ಹಾಗೆ

ಸಂಭಾವಿಸಲು ತನಗೇ ಅವಕಾಶವಿಲ್ಲದುದರಿಂದ, ಅವನ ಈ ಕೆಲಸವನ್ನು, ತನ್ನ ಇಹಲೋಕದ ವ್ಯಾಸರಾಯಿ ಯಾದ ಪೂಜಾರ್ಯನಿಗೆ ಒಪ್ಪಿಸಿರುವನೆಂದು ವರ್ತ ಮಾನ ಪತ್ರಗಳು ಸಾರುತ್ತವೆ!

(ಈ ಕೆಲಸ ಮುಗಿಸುವಷ್ಟರಲ್ಲಿ, ಸರಸ್ವತಿಯ ಟ್ರಂ ಕಿನಲ್ಲಿ ೬ಲ—ಖಾಲಿ ಅಮೃತಾಂಜನ ಡಬ್ಬಿಗಳು ಸಂಗ್ರ ಹಿಸಲ್ಪಟ್ಟದುವು. ಪ್ರಾಯಶಃ ಕಲೆಯನ್ನು ತುಂಬಿಸಿ ಒಯ್ಯಲಿಕ್ಕಿರಬೇಕು.)

## ಪ್ರಕರಣ ೨೫. (ಇನ್ನಿಲ್ಲ.)

# ಅವರು ಈ ಸಿದ್ಧಾಂತಕ್ಕೆ ಬರುವರು.

ಭಿನ್ನ ಭಿನ್ನ ಮಂಡಲಗಳು ತಂತಮ್ಮ ಕೆಲಸಗಳನ್ನು ಮುಗಿಸುವುದರೊಳಗಾಗಿ ಮಾನವನ ಎರಡು ವತ್ಸರ ಗಳು ಸಂದುವು. ಈಗ ಅವರು ಮೊದಲೇ ನಿಶ್ಚಿತವಾ ದಂತೆ ಚಾಮುಂಡಿ ನಗರದಲ್ಲಿ ತಿರುಗಿ ಒಬ್ಬೊಬ್ಬರಾಗಿ ಬಂದು ಸೇರಿದರು. ಎಲ್ಲರೂ ಕೂಡಿದೊಡನೆ ಮುಂದಿನ ಯೋಚನೆ ಮಾಡಬೇಕಾಗಿ ಬಂತು. ಅವರ ಮೊದಲ ನೆಯ ಕೆಲಸವು ತಮಗಿಷ್ಟೊಂದು ಧನಸಹಾಯಮಾಡಿದ ಧರ್ಮಪ್ರಕಾಶರ ಉಪಕಾರಸ್ಮರಣೆಮಾಡಲು ಅವರ ಬಳಿಗೆ ಹೋಗಿಬರುವುದು. ಹೀಗೆಂದು— ಏನೂ ತಡ ಮಾಡದೆ, ಜನರಲ್ಲಿ ಗದ್ದಲ ಬೇಡೆಂದು ಸಂಜೆ ಕತ್ತಲೆ ಹಿಡಿದಮೇಲೆ ಅವರ ಮನೆಯಕಡೆ ಸಾಗಿದರು. ಮನೆಯ ಹಿತ್ತಿಲಿನೊಳಗೆ ಕಾಲಿಡುವುದೇ ತಡ—

ಎರಡು ಬೇಟೆನಾಯಿಗಳು "ಗೌ ಗೌ" ಎಂಬು ಮುಂದೆ ಬಂದುವು. ಗದ್ದಲವನ್ನು ಕೇಳಿ ಒಳಗಿಂದ ಒಬ್ಬ ಮನುಷ್ಯನು, ಈ ಜನರ ತಂಡವನ್ನು ಕಂಡು—"ಯಾರದು, ಹೊರಗೆಹೋಗಿರಿ"—ಎಂದಾಜ್ಞೆಯಿತ್ತನು. ಅದು ಚನ್ನಪ್ಪನವರ ಕರಿವೋರೆಯಾಗಿರಲಿಲ್ಲ ಅಚ್ಚ ಬಿಳಿ ಮೋರೆ. ಇವರು ಬೆರಗಾದರು. "ಇಲ್ಲಿ, ಚನ್ನಪ್ಪನವರು ವಾಸವಾಗಿಲ್ಲವೇ?" ಎಂದು ಕೇಳಿದರು. "ಓ— ಅವರು ಸತ್ತು ಆರು ತಿಂಗಳಾಗುತ್ತಬಂದಿತು" ಎಂದರು. ಮಂಡಲದವರ ಎದೆ ಧಸಕ್ಕೆಂದಿತು. ಸ್ವಲೋಕಕ್ಕೆ ಮರಳಿದೊಡನೆ ಯಮರಾಯನಿಗೆ ಮನಬಂದಂತೆ ಶಪಿಸಬೇಕೆಂದು ನಿರ್ಣಯಿಸಿರುವರು. ಅಲ್ಲಿಂದ ಮರಳಿಬಂದು ತಮ್ಮ ಪೂರ್ವಪರಿಚಿತ ಗೆಳೆಯನೊಬ್ಬನ ಕಡೆಗೆ ಶಿವರಾಯನು ಮಿಕ್ಕವರನ್ನು ಕರೆದೊಯ್ದನು. ಅವರಲ್ಲಿ ಚನ್ನಪ್ಪನವರ ಸುದ್ದಿಯನ್ನೆಲ್ಲಾ ಪ್ರಸ್ತಾಪಿಸಲು— ಅವನು ಇವರ ಪ್ರಶ್ನೆಗೆ ಉತ್ತರವನ್ನೀಯುವ ಮೊದಲು— "ಏನು? ಯಾವಾಗ ಬಂದಿರಿ, ಎಲ್ಲಾ ಸೌಖ್ಯವೆ, ಊಟವಾಗಿದೆ ತಾನೆ? ಹಾಗಾದರೆ, ಬನ್ನಿ ಕುಳಿತಿರಿ" ಎಂದು — "ನೋಡಿರಪ್ಪಾ — ಕೆಲವು ದಿವಸಗಳಿಂದ ಮೈಯೇ ಚೆನ್ನಾಗಿಲ್ಲ" — ಎಂದೆಲ್ಲಾ ಹರಟತೊಡಗಿದನು. ಅಂತು ಅವನ ಪುರಾಣ ಮುಗಿಯುವ ತನಕ ಬಾಯಿ ಬಿಗಿಹಿಡಿದು, ಅದು ಮುಗಿಯಲು ತಿರುಗಿ ಚನ್ನಪ್ಪನವರ ಸುದ್ದಿಯೆತ್ತಿದರು.

"ಓಹೋ, ಅದೇ ದೊಡ್ಡ ಕಥೆ ಇದೆಯೇ, ಒಂದು ದಿನ

ನಮ್ಮ ರಾಯರು ಕುರ್ಚಿಯಿಂದ ಪಕ್ಕನೆ ಬಿದ್ದುಬಿಟ್ಟರು. ಅಲ್ಲೇ ಪಕ್ಷವಾತತೊಡಗಿತು ನೋಡಿ. ಮುಂದೆ ಮಲಗಿದಲ್ಲೆ, ನಿಂತಲ್ಲೆ ಈ ಕಾರಣದಿಂದ ಮಂದಿ, ಮನೆ, ವಹಿವಾಟನೆಲ್ಲ ಮಗನ ಹೆಸರಿಗೆ ಮಾಡಿದರು. ಮಗನನ್ನು ನೀವು ಕಂಡಿಲ್ಲ ಅಂತ ಕಾಣುತ್ತದೆ ಅಹುದು. ಸಂತರ್ಪಣೆ ನಡಿಯುವಾಗ ಅವನು ಬಾರ-ಅಟ್‌ಲಾ ಪಾಸು ಮಾಡಲಿಕ್ಕೆ ವಿಲಾಯತಿಗೆ ಹೋಗಿದ್ದ. ಇವರ ಅಸ್ವಸ್ತ ಶುರುವಾಗಲು ಅಲ್ಲಿಗೆ ಕೇಬಲ್ ಹೋಯಿತು. ಸರಿ ಒಂದು ತಿಂಗಳಲ್ಲಿ ಮಗರಾಯರು ಬಂದರು. ಬಂದರು. ಹಾಗೆ ವಹಿವಾಟು ವಹಿಸಿಕೊಂಡರು. ಅದೇ ಒಂದು ತಿಂಗಳಲ್ಲಿ—ಇವರು ಪಾಸಾದ ಪರೀಕ್ಷೆ ಬೂಕು ಬಂತು"—ಎಂದರು.

ಶಿವ:—ಅಂದರೆ

ಗೆಳೆಯ:—ಅಂದರೆ, ಈ ವಿಲಾಯತಿಗೆ ಹೋಗೋ ಮಂದಿಯೆಲ್ಲ ಬರುತ್ತಾ ಒಂದೊಂದು ಬೂಕು ತರುವ ಪದ್ಧತಿ. "ಬೂಕು"- ಅಂದರೆ "ಬೆಸ್ಟ್ ಕಂಪೇನಿಯನ್" (ಉತ್ತಮ ಗೆಳೆಯ) ಎಂದರ್ಥ. ತಿಳಿಲಿಲ್ಲವೇ? ದೊರೆಸಾನಿ, ದೊರಸಾನಿ. ಅಲ್ಲೇ ಮದುವೆ ಆಗಿದ್ರಂತೆ. ಅಪ್ಪನಿಗೇನು ಗೊತ್ತು? ಇಲ್ಲಿ ಬಂದರೂ ಇದರ ಗುಟ್ಟು ಒಬ್ಬರಿಗೂ ಹತ್ತಲಿಲ್ಲಾ. ಅವರೇ ಬೇರೆ ಬಂಗ್ಲೆಯಲ್ಲಿದ್ರು. ಮಗರಾಯರ ಸವಾರಿ ಆಗಾಗ ಭೇಟಿಗೆ ಹೋಗುತ್ತಾ ಇತ್ತು. ಬಳಿಮಂದಿ ಪಾದಸೇವೆ ಮಾಡೋದಂದ್ರೆ ನಮ್ಮಂದಿಗೊಂದು ಗೌರವಾ—ಅಂತಿವೆ. ಹಾಂಗೇ

ಅಪ್ಪ ತಿಳಿದ ಮಗ ಗೌರವಾ ಸಂಪಾದಿಸುತ್ತಾನೆ— ಎಂದ ತಿಳಿದ. ಇತ್ತ ಆಕೆಗೆ ತಿಳಿಯಿತು, ಚನ್ನಪ್ಪನವರ ಮಕ್ಕಳಿಗೆ ಆ ವರ್ಷದಲ್ಲೆ ಮದುವೆ ಆಗಿತ್ತು ಅಂತ. ಅವಳು ಕೂಡ್ಲೆ ಡ್ಯಾವೊರ್ಸ ಕೇಳಿದಳು.

ಶಿವ:— ಡ್ಯಾವೋರ್ಸ ಅಂದರೆ ಸಾಯುವ ಕುದುರೆಯುಂಡೇ.

ಗೆಳೆಯ:— ಡ್ಯಾಹೋರ್ಸಲ್ಲ ಅದು; ಡೈವೋರ್ಸ್ ಅಂತ. ಅಂದರೆ ದಾಂಪತ್ಯ ಭಂಗಮಾಡಲಿಕ್ಕೆ ಅಧಿಕಾರ. ಸರಿ—ಊರೆಲ್ಲಾ ಆಯಿತು ಗದ್ದಲ. ಅಪ್ಪನ ಕಿವಿಗೂ ಸುದ್ದಿ ಬತ್ತು. ಆದರೆ ಮಿಂಚಿದಕ್ಕೆ ಅತ್ತರೇನೆಂದು, ಚೇನೆ ಜತೆಯಲ್ಲಿ ಇದನ್ನು ನುಂಗಿಕೊಂಡು ಕುಳಿತರು. ಅಷ್ಟರಿಂದಲೇ ಕೆಲಸ ಮುಗಿಯಲಿಲ್ಲ. ಈ ರಾಯರು ತಮ್ಮ ಕೈಗೆ ಅಧಿಕಾರ ಬಂದೊಡನೆಯೇ ಎಲ್ಲಾ ಆಕೆ ಹೆಸರಿಗೆ ಟ್ರಾನ್ಸಫರ್ ಮಾಡಿದ್ರು. ಹೀಗಾಗಿ ಆಕೆ ಅವುಗಳ ಸ್ವಾಧೀನತೆಗೆ ದಾವಾ ಮಾಡಿದ್ದು. ಇದೆಲ್ಲಾ ಹೊಲಸಾಯ್ತಲ್ಲಾ ಎಂದು ಮಗನು ವಿಷ ತಿಂದು ಸತ್ತ. ನಮ್ಮ ಚನ್ನಪ್ಪನವರು ಹಾಗೇ ಉರುಳಾಡ್ತಾ ಭಾವಿಗೆ ಬಿದ್ದು ಸತ್ತರು—ಇಷ್ಟಿದೆ ನೋಡಿ ಅಂದರು. ಅಲ್ಲವರು ಹೆಚ್ಚು ಹೊತ್ತು ಕಳೆಯದೆ ಕಾಲು ಕಿತ್ತರು. ಧರ್ಮಪ್ರಕಾಶರು ತಾವೇ ಹೊರಟು ಬಂದುದಕ್ಕೆ ಯಮನನ್ನು ಬೈದು ಉಪಯೋಗವೇನೆಂದು ಅನಿಸಿತವರಿಗೆ. ಇನ್ನುಮುಂದೆ ಅವರು ಜನಸಂಚಾರವಿಲ್ಲದ ಪಶ್ಚಿಮಘಟ್ಟದ ಒಂದು ಕಾಡಿನ ಸಂದುಹಿಡಿ

ದರು. ಅಲ್ಲಿದ್ದು — ತಾವು ಸಂಗ್ರಹಿಸಿದ ವಿಷಯಗಳ ಮೇಲೆ ತಮ್ಮ ಅಭಿಪ್ರಾಯ ಪ್ರಕಟಿಸುವ ನಿರ್ಧಾರಮಾಡ ಕೆಲಸವನ್ನೂ ತೊಡಗಿದರು. ದೇವಲೋಕಕ್ಕೆ ಹೋಗು ವಾಗ ಕೈಬೀಸಿಕೊಂಡು ಹೋಗುವ ಆಸೆ. ಸ್ವಾಮಿನ ಭೂಪರ ಹಾಗೆ ವಿಲಾಯತಿಯಲ್ಲಿ ಕುಳಿತು ಆಶೀರ್ವಾದ ಮಾಡುವುದು ಬೇಡ ಎಂದು ಎನ್ನಿಸಿತವರಿಗೆ. ಸರಿ, ಆಯಾಯ ಮಂಡಳಗಳು ಕೆಲಸತೊಡಗಿದುವು. ತಮ್ಮ ಅಭಿಪ್ರಾಯಗಳೂ, ಸೂಚನೆಗಳೂ ತೀರ ಚುಟಕಿರ ಬೇಕು; ಹೆಚ್ಚು ದೀರ್ಘವಿದ್ದರೆ, ಅಮರರು ಕೇಳ ಲಾರರು— ಎಂಬುದರಿಂದ ಚುಟುಕಿನ ಚಟಕಮಾಡಲು ನಿಶ್ಚಯಿಸಿದರು.

## ಧಾರ್ಮಿಕಮಂಡಲದವರ ಸೂಚನೆಗಳು.

(ಬೇ = ಬೇನೆ. ಚಿ = ಚಿಕಿತ್ಸೆ.)

ಬೇ. (೧). ಬ್ರಾಹ್ಮಣರು ಭೋಜನಪ್ರಿಯರು.

ಚಿ. — ಈಗಿದ್ದ ಹೊಟ್ಟೆಯನ್ನು ತೆಗೆದು ಒಂಟೆ ಹೊಟ್ಟೆಯನ್ನು ಇರಿಸಬೇಕು.

ಬೇ. (೨). ವರ್ಣಧರ್ಮವು ಚೆನ್ನಾಗಿಲ್ಲ ಎಂದು ಜಾತಿ ಧರ್ಮ ರೂಢಿಗೆ ಬಂದಿದೆ ರೂಪವ್ಯತ್ಯಾಸವಿಲ್ಲದಕಾರಣ ತಿರುಗಿ ಇದೂ ಸಂಕರವಾಗುವುದೆಂದು ಅವರ ಅಂಜಿಕೆ.

ಚಿ. — ಬೇರೆ ಬೇರೆ ಜಾತಿಯವರನ್ನು ಗುರುತಿಸಲು ಅನುಕೂಲಿಸುವಂತೆ ಕೊಂಬು, ರೆಕ್ಕೆ, ಗೊರಸು, ಬಾಲ ಇತ್ಯಾದಿಗಳನ್ನು ಮೂವವರಿಗೂ ಕೊಡಬೇಕು.

ಬೇ. (೩). ಜನರಿಗೆ ಯಮನಿಯಮಗಳು ಕಡಿಮೆಯಾದರೂ ಸನ್ಯಾಸಿಗಳ ಮೇಲೆ ಮಮತೆ ಅಧಿಕ. ಸನ್ಯಾಸಿಗಳಿಗೆ ಸ್ತ್ರೀಭಕ್ತರ ಮೇಲೆ ಅನುರಾಗ ಹೆಚ್ಚು.

ವೇಶ್ಯೆಯರನ್ನೂ, ಪತಿತ್ಯಾಗಿಗಳನ್ನೂ ಇನ್ನು ಮುಂದೆ ಸನ್ಯಾಸಿನಿಯರೆಂದು ಪರಿಗಣಿಸಿ, ಸನ್ಯಾಸಿಸನ್ಯಾಸಿನಿಯರಿಗೆ ಯಾವ ವಿಧದ ವ್ಯವಹಾರ ಸ್ವಾತಂತ್ರ್ಯವಿದೆಯೋ ಅದನ್ನು ಕೊಡಬೇಕು — ಇದು ಅವರ ಇಚ್ಛೆ.

ಚಿ.— ಈ ವರ್ಗದವರು ಜನಿಸುವಾಗುವಾಗಲೇ, ವೀರ್ಯಕೋಶ, ಗರ್ಭಕೋಶಗಳಿಲ್ಲದವರನ್ನಾಗಿ ಮಾಡಿದಲ್ಲಿ ಉಭಯತರೂ ನಿಶ್ಚಿಂತೆಯಿಂದಿರಬಹುದು.

ಬೇ. (೪). (ಅ) ತರಕಾರಿ ತಿನ್ನುವ ರೂಢಿಯನ್ನು ಯಜ್ಞದ ನೆಪದಿಂದಲಾದರೂ ಮುರಿಯುವ ಆಸೆ ಬ್ರಾಹ್ಮಣರಿಗೆ.

(ಆ) ಬೇರೆ ಪ್ರಾಣಿಗಳ ಪ್ರಾಣತ್ಯಾಗದಿಂದ ತಾವು ಸ್ವರ್ಗವಡೆಯಬೇಕೆಂದವರ ಆಸೆ

ಚಿ.—(ಅ) ಆಡು ಕುರಿ ಮೊದಲಾದುವುಗಳನ್ನು ಸಂಚರಿಸುವ ತರಕಾರಿಯೆಂದು ತಿಳಿದರಾಯಿತು.

(ಆ) ನರಕದಲ್ಲೇ ಒಂದು ವಿಭಾಗವನ್ನು ಸ್ವರ್ಗವೆಂದು ಇವರಿಗಾಗಿ ಕರೆದರಾಯಿತು.

ಬೇ.—(೫). (ಅ) ತಮ್ಮ ದೇವರನ್ನು ನಂಬದವರಿಗೆ ಮಾತ್ರ ಸ್ವರ್ಗ ಎಂದು ತಿಳಿಯುವರು.

(ಆ) ಕೆಲವರು ದೇವರೇ ಇಲ್ಲವೆನ್ನುವರು.

(ಇ) ದೇವರ ಸಾಕಾರ ಪೂಜೆಯು ಅಪರಾಧ.

೭೩.—(ಅ) ಉಳಿದವರನ್ನು—ಮಹಾರಾಜರ ಮನೆಗೆ ಕಳುಹಿಸಿದರಾಯಿತು.

(ಆ) ಅಂದವರ ಕಣ್ಣಿಗೆ ದೇವರು ಕಾಣಿಸದಿದ್ದರಾಯಿತು.

(ಇ) ದೇವರನ್ನು ನೋಡುವವನಿಗು ಉದ್ದ ಅಳತೆ ಇಲ್ಲದಂತೆ ಮಾಡಬೇಕು.

ಬೀ.—(೬) (ಅ) ಬಾಲ್ಯವಿವಾಹವಿಲ್ಲದೆ ಧರ್ಮದ ಪಾಲನೆಯಿಲ್ಲ.

(ಆ) ವಿವಾಹವೇ ಬೇಡ. ಅದು ಮಾನವನ ಸ್ವಾತಂತ್ರ್ಯಕ್ಕೊಂದು ತಡೆ.

(ಇ) ವಿವಾಹಸುಖ ಬೇಕು. ಸಂತತಿಯ ಜವಾಬುದಾರಿ ಬೇಡ.

ಚಿ.—(ಈ) ಪುರುಷನು ಎಷ್ಟೂ ಮದುವೆಯಾಗಬಹುದು. ಸ್ತ್ರೀಯರು ಒಮ್ಮೆ ಗಂಡ ಸಾಯಲಾಗಿ ವಿಧವೆಯರೇ.

ಚಿ.—(ಅ) ೧೬ನೇ ವಯಸ್ಸಿನ ವರೆಗೆ ಹೆಣ್ಣಾರು ಗಂಡಾರು ಎಂದು ಸೃಷ್ಟಿಕ್ರಮವು ತಿಳಿಸಬಾರದು.

(ಆ) ಎಲ್ಲರನ್ನೂ ಸ್ತ್ರೀಯರನ್ನೂ, ಪುರುಷರನ್ನೂ ಆಗಿ ಮಾಡಿದರಾಯಿತು.

(ಇ) ಮಾನವರು ಶಿಶುಗಳನ್ನು ಹಡೆಯುವ ಬದಲು—ಮುಂದೆ ಪೋಷಿಸಿದಲ್ಲಿ, ಶಿಶುವಾಗುವಂತಹ ಬೀಜಗಳನ್ನು ಹೆರುವ ವ್ಯವಸ್ಥೆಮಾಡಬೇಕು.

(ಈ) ಆ ಅಭಿಪ್ರಾಯದ ಪುರುಷರನ್ನೆಲ್ಲಾ ಒಮ್ಮೆಗೆ

ವಿಧವಾಸ್ತ್ರೀಯರಾಗುವಂತೆ ಮಾರ್ಪಡಿಸಬೇಕು. ಇಲ್ಲವೆ ಪುರುಷರು ಅವರ ವಿಧವೆಯರು ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸಬೇಕೆಂದು ಹೊಸ ಶಾಸ್ತ್ರವನ್ನು ಕಳುಹಿಸಿದರಾಯಿತು.

ಬೇ.—(೭). ಪ್ರಪಂಚವೆಲ್ಲ-ವರ್ಣ, ಭೇದಗಳಿಲ್ಲದೆ ಕರ್ತವ್ಯವನ್ನು ಮರೆತು, ಕಾಂಚನದ ಹಂಬಲದಲ್ಲಿರುವುದು.

ಚಿ.—ಕಾಂಚನವನ್ನು ಕೆಂಡಕ್ಕಿಂತ ಬಿಸಿಯಾಗಿರಿಸಿದರಾಯಿತು.

ಬೇ.—(೮). ಕ್ಷೇತ್ರಗಳಲ್ಲಿರುವ ಪಂಡರಕರಗಳಲ್ಲಿ ಸ್ವರ್ಗದ್ವಾರದ ಕೀಲಿಯು ಸಿಕ್ಕಿದೆ. ಉಳಿದವರಿಗೆ ಪ್ರವೇಶಕೊಡುವುದೂ ಬಿಡುವುದೂ ಅವರ ಇಷ್ಟ.

ಚಿ.—ಅವರನ್ನು ಬೇಗ ಮೊದಲು ಸೂಚಿಸಿದ ಸ್ವರ್ಗಕ್ಕೆ ಕರೆಯಿಸಿಕೊಂಡರಾಯಿತು.

## ಆರೋಗ್ಯವಿಭಾಗ.

ಬೇ.—(೧). ಬದುಕುವುದು ತಿನ್ನುವುದಕ್ಕಾಗಿ.

ಚಿ.—ಯಾವತ್ತು ವಸ್ತುಗಳಿಗೂ ಒಂದೇ ರುಚಿಯನ್ನು ಕೊಡಬೇಕು. ಇಲ್ಲವೆ ನಾಲಿಗೆಗೆ ರುಚಿ ನೋಡುವ ಶಕ್ತಿಯಿಲ್ಲದಂತೆ ಮಾಡಬೇಕು.

ಬೇ.—(೨). (ಅ) ಈಶ್ವರದತ್ತ ೧೦೦ ವರುಷ ಆಯುಸ್ಸು ಹೆಚ್ಚಾಯಿತೆಂದು ಅದರಲ್ಲಿ ತ್ಯಾಗಕ್ಕೆ ತೊಡಗಿರುವರು.

(ಅ) ಭೂಮಿಗೆ ಭಾರವಾಗಲು ಅವರಿಗಿಷ್ಟವಿಲ್ಲ.

(ಇ) ಮಾತಾಪಿತೃತ್ವಗಳ ಕರ್ತವ್ಯವನ್ನು ಆದಷ್ಟು ತೀವ್ರ ಮುಗಿಸಬೇಕು.

(ಈ) ಪುರುಷದಾಂಪತ್ಯದ ಲವಲವಿಕೆಗಳು ವಿಶೇಷ ಬೆಳದಿವೆ. ಮೊದಲಾದ ಅನ್ಯೈಸರ್ಗಿಕ.

ಟಿ.—(೨). (ಅ) ಉತ್ತರ (ಇ)ಯಲ್ಲಿ ಸಮಾವೇಷ ಗೊಂಡದೆ.

(ಅ) ಇನ್ನುಮುಂವೆ ನರರನ್ನು ವಾಯುಪದಾರ್ಥ ಗಳಿಂದ ರಚಿಸಬೇಕು.

(ಇ) ಹಂದಿಯು ಆಯುಷ್ಯವನ್ನೂ, ಸಂತತಿ ಶಕ್ತಿಯನ್ನೂ ಕೊಟ್ಟರಾಯಿತು.

(ಈ) ಪುರುಷರಿಗೂ ಒಂದೊಂದು ಗರ್ಭಕೋಶ ವನ್ನಿರಿಸಿದರಾಯಿತು.

ಬೇ.— (೩) ಮದ್ಯಪಾನವು ಆರೋಗ್ಯಹಿತವೆಂ ಬುದರಿಂದ ನೀರಿನ ಬದಲು ಅದನ್ನೇ ಕುಡಿಯುವ ಯೋಚನೆ — ಇನ್ನು ಮುಂದೆ ಹೆಂಡದ ಮಳೆಯೇ ಆಗಬೇಕು. ಆದರೆ ಮತ್ತತೆಯುಂಟಾಗಬಾರದೆಂದು, ಮಾನವರಿಗೆ ಮಿದುಳಿಲ್ಲದಂತೆ ಮಾಡಬೇಕು.

ಬೇ.—(೪). (ಅ). ಊಟಪಾಠಗಳ ಸ್ವಾತಂತ್ರ್ಯ ಬೇಕು. ಬೇನೆಬರಬಾರದು.

(ಅ.) ಸಾವು ಇರಬಾರದು.

(ಇ.) ಹಸಿವು ಆಗಬಾರದು.

ಟಿ.—(ಅ)–ಕಲ್ಲಿನ ಶರೀರವತ್ತರಾಯಿತು.

(ಆ)—ಜೀವವಿಲ್ಲದೆ ಹುಟ್ಟಿಸಿದರಾಯಿತು.

(ಇ.)—ಉತ್ತರ(ಅ)ದಲ್ಲಿ ಸೇರಿಕೊಂಡಿದೆ.

**ಆರ್ಥಿಕ ಮಂಡಲ.**

ಬೇ.—೧ (ಅ) ಸುಧಾಮರಲ್ಲಿ ಕಾರ್ಯಶಕ್ತಿಯಿಲ್ಲ.

(ಆ) ಲಕ್ಷ್ಮೀಪುತ್ರರಿಗೆ ಧನದಿಂದ ತೃಪ್ತಿಯಿಲ್ಲ.

ಚಿ.—(ಅ) ಅವರ ಹೊಟ್ಟೆಯಲ್ಲಿ ಮಿದುಳನ್ನಿರಿಸಬೇಕು.

(ಆ) ಮಿದುಳಿನ ಬದಲು ಚಿನ್ನದ ಗಟ್ಟಿಯನ್ನಿರಿಸಬೇಕು.

ಬೇ.—(೨). (ಅ) ಹಿಂದೀ ಅರಸರಿಗೆ ಇಲ್ಲಿನ ಹವೆಯು ಉಷ್ಣವಾಗುವುದು.

(ಆ) ಅವರಿಗೆ ಇಲ್ಲಿನ ಕನ್ನಿಕೆಯರು ಒಗ್ಗುವುದಿಲ್ಲ.

ಚಿ.—(೩). (ಅ) ಉತ್ತರಧ್ರುವಕ್ಕಾಗಲಿ, ದಕ್ಷಿಣಧ್ರುವಕ್ಕಾಗಲಿ ಇವರನ್ನು ಸಾಗಿಸಬೇಕು.

(ಆ) ಅವರ ಜನ್ಮವನ್ನು ಶ್ವೇತ ಮಾತಾಪಿತೃಗಳಿಂದ ಮಾಡಿಸಿದರಾಯಿತು.

**ವಿದ್ಯಾಮಂಡಲ.** ವಿದ್ಯಾರ್ಥಿಗಳಿಗೆ ತಲೆಯೊಂದಲ್ಲದೆ ಉಳಿದ ಅವಯವಗಳ ಉಪಯೋಗವಿಲ್ಲದಂತಾಗಿದೆ.

ಚಿ.—(೧) ಬರೀ ತಲೆಬುರುಡೆಯನ್ನು ಕೊಟ್ಟು ಹುಟ್ಟಿಸಬೇಕು. ಒಳಕ್ಕೆ ಸಾಕಷ್ಟು ಪುಸ್ತಕಗಳನ್ನಿರಿಸಲು ಅನುಕೂಲವಾಗುವಂತೆ ಖಾಲಿ ಸ್ಥಳವಿರಬೇಕು.

ಬೇ — (೨) ಉತ್ತಮ ಗ್ರಂಥವು ಹೊರಡಲು-ರತಿ ಮದನರೇ ಬೇಕು.

(೩) (೨) ಗೀರ್ವಾಣದಲ್ಲಿ ಬರೆದುವೆಲ್ಲವೂ ಶಾಸ್ತ್ರ. ಅವನ್ನು ತಮಗಾಚರಿಸಲಾಗದಿದ್ದರೂ — ಉಳಿದವರು ಆಚರಿಸಲೇಬೇಕು.

(೮) ಅಂಥ ಗ್ರಂಥವನ್ನು ಓದುವವರ ಮೇಲೆ ಈ ಕೆಳಗಿನ ವರಗಳ ಅನುಗ್ರಹವಾಗಬೇಕು.

ಬಿ. — (೩) ರತಿಯೂಸಿಗಾಗಿ ಓದುವ ನರರು ನಾಯಕರಾಗಿಯೂ ಮದನನಾಸೆಯಿಂದ ಓದುವ ನಾರಿಯರು ನರರಾಗಿಯೂ, ಇವರೀರ್ವರ ಆಸೆಯಿಂದ ಓದುವವರು ಬ್ರಹನ್ನಳೆಯರಾಗಿಯೂ — ಓದು ಮುಗಿಯುವಷ್ಟರಲ್ಲಿ ಪರಿವರ್ತನೆಗೊಳ್ಳಬೇಕು. ಅಂದರೆ ಅವರವರ ಅಭೀಷ್ಟ ಅವರಲ್ಲೇ ನೆರವೇರಿದಂತಾಯಿತು.

(೮) ಅದಕ್ಕೇನು, ಅವರ ಪಾಲಿಗೆ ಗೀರ್ವಾಣವೇ ಇಲ್ಲದಂತೆ ಮಾಡಿದರೆ?

ಬೇ. — (೩) ಏನಾಯಿತು ವಾಸ್ತುಶಿಲ್ಪದ ಮೇಲೆ ಜನರಿಗಭಿರುಚಿ ಹೆಚ್ಚು.

ಬಿ. — ಅವರಲ್ಲೂ ಅಷ್ಟೇ ಸಂಖ್ಯೆಯಲ್ಲಿ ವಿಧವಿಧ ಪ್ರಾಣಿಗಳ ಅಂಗಾಂಗಗಳಮೇಳವನ್ನುಂಟುಮಾಡಿದರಾಯಿತು

ಬೇ. — (೮) ಶಿಲ್ಪಚಿತ್ರಗಳಲ್ಲೆಲ್ಲ. ಕಲೆಯನಗ್ನತೆಯು ಕಾಣಿಸಬೇಕು. ಯಥಾವತ್ ನಗ್ನತೆಯಿಲ್ಲದ ಆನಂದವಿಲ್ಲ.

ಚಿ.—ಅಂಥವರಿಗೆ ಉತ್ತಮೋತ್ತರದ ತಿಲಾಂಜಲಿಯನ್ನು ಗಳನ್ನು ಪಾಲಿಸಬೇಕು, ಇಲ್ಲದೆ—ಅವರೂ (ಚಿ) ೨ (ಅ) ವರಗಳಿಗೆ ಭಾಗಿಯಾಗಬೇಕು.

ಬೇ.—(೫) ಸಂಗೀತವೆಂದರೆ ಒಂದು ಸ್ವರತಾಳಗಳ ಸಂಸರ್ಗ. ಶೃಂಗಾರರಸ ಸೇರಿಸಿದಲ್ಲಿ ಅದಕ್ಕೆ ಚೇತನಪ್ರಾಪ್ತಿ.

ಚಿ.—ಸಪ್ತಸ್ವರಗಳು ಇನ್ನುಮುಂದೆ ಹೊರಡಂತಾಗಲಿ.

ಬೇ.—(೬) ನರಲೋಕದ ನರನಾರಿಯರಿಗೆ ಸೆಕೆಯ ಕಾಟದಿಂದ ಬಟ್ಟೆಯ ಧರಿಸುವಿಕೆಯು ಸಹಿಸದು.

ಚಿ.—ಅಂಥವರನ್ನು ನಿಸರ್ಗದಲ್ಲಿ ಅವರ ಇಷ್ಟೆಯಂತಿರುವ ಚತುಷ್ಪಾದ ನರರ ವರ್ಗಕ್ಕೆ ಸೇರಿಸುವುದು. ಇಲ್ಲವೆ ಇಳೆಯ ಉಷ್ಣತೆಯನ್ನು—೪೦. Cಗೆ ಇಳಿಸುವುದು.

ಬೇ.—(೭) ಚುಂಬನವು ನಾಟಕಸಿನೆಮಗಳ ಸರ್ವಸ್ವ. ಇದಕ್ಕಾಗಿ ಅವರು ಬಹಳ ಕಷ್ಟಪಡಬೇಕಾಗುವುದು.

ಚಿ.—ಮಾನವೀ ಅಧರಗಳ ಬದಲು, ಆನೆಯ ಸೊಂಡಿಲುಬಾಯಿಗಳನ್ನು ಕೊಡಿಸಿದಲ್ಲಿ, ಪರಾಶ್ರಯಕ್ಕೆ ಪ್ರಯಾಸಪಡುವ ಆವಶ್ಯಕತೆಯಿಲ್ಲ.

* * * *

ಪಾಪದ ವ್ಯಕ್ತಿಗಳು ಇಷ್ಟೊಂದನ್ನು ಬರೆದು ಕೆಲವು ಹಣ್ಣುಹಂಪಲುಗಳನ್ನು ತಿಂದು [ಕಾರಣ—ಚನ್ನ

ಪ್ಪನವರು ಕೊಟ್ಟ ಹಣದಲ್ಲಿ ಏನೂ ಉಳಿದಿರಲಿಲ್ಲ.) ಅಲ್ಲೇ ಮಲಗಿಕೊಂಡರು. ಎದ್ದು ನೋಡುತ್ತಾರೆ— ವರದಿಗಳೂ ಇಲ್ಲ; ವರದಿಗಳಮೇಲಿನ ಟೀಕೆಯೂ ಇಲ್ಲ! ಬೆರಗಾದರು. ಅತ್ತಿತ್ತ ನೋಡಿದರು. ದೂರದಲ್ಲಿ ಒಬ್ಬನು ನಗುತ್ತ ನಿಂತಿದ್ದನು. ಕದ್ದವನು ಅವನೇ ಎಂಬ ತಿಳಿವಿನಿಂದ—ದೂರ್ವಾಸನು ಕಣ್ಣು ಕಿಡಿಕಿಡಿಮಾಡಿ "ಮೂರ್ಖ, ಶಾಪವನ್ನು ಕೊಡುವೆ. ಎಲ್ಲಿದೆ ನಮ್ಮ ಬರಹ" ಎಂದನು.

"ನಿಮ್ಮ ಬರಹ ನಿಮ್ಮಲ್ಲಿಲ್ಲದಿದ್ದರೆ ಬ್ರಹ್ಮನಲ್ಲಿರಬೇಕು"—ಎಂದುತ್ತರಬಂದಿತು. ಕೂಡಲೆ ಸಿಳ್ಳಾಯಿತು. ನೂರುಮಂದಿ ಸಿಪಾಯಿಗಳು ಬಂದೂಕುಗಳನ್ನು ಹಿಡಿದು ಮುಂದೆ ಬಂದರು. ನಮ್ಮ ಪೃಥ್ವಿಯ ವೀರನು ಮುಂದೆ ಬಂದು – "ಎರಡು ವರುಷಗಳಿಂದ ನಿಮ್ಮ ನೆರಳಿನಂತೆ ಹಿಂಬಾಲಿಸುತ್ತಿದ್ದವು. ನಾವೇನು ಸುಮ್ಮನೆ C. I. D. ಗಳಲ್ಲ. ನಿಮ್ಮನ್ನೀಗ ದೇಶದ್ರೋಹ, ರಾಜದ್ರೋಹಗಳ ಆರೋಪದಿಂದ ಕೈದುಮಾಡಿರುವೆವು. ನಿಮ್ಮ ವರದಿಯು ಈಗಾಗಲೇ ನಮ್ಮ ವರಿಷ್ಠ ಅಧಿಕಾರಿಗಳ ಕರವನ್ನು ಸೇರಿದೆ"—ಎಂದು ಮುಂದೆ ಬಂದು ದೇವಲೋಕದ ಆಸಾಮಿಗಳಿಗೆಲ್ಲಾ ಬಳೆತೊಡಿಸಿದರು. "ಮಾರ್ಚ್" ಎಂದು ಹುಕುಮಾಯಿತು. ನೋಡುವುದೇನು? ಬರೇ ಬಳೆಗಳು ಮುಂದೆ ಸಾಗುತ್ತಲಿದ್ದುವು. ಅದನ್ನು ಧರಿಸಿದವರು ಅದೃಶ್ಯರಾಗಿ ಪರಾರಿಯಾದರು. ಕೂಡಲೆ ಕಾದಿದ್ದ ಎರಡು ವಿಮಾನಗಳು ಸುಮ್ಮನೆ

ಗುಂಪನ್ನು ಹಾರಿಸುತ್ತ, ಎಂಟು ದಿನಗಳ ತನಕ ನಭೋಮಂಡಲವನ್ನು ಸುತ್ತಿ ಮರಳಿಬಂದುವು.

ವರದಿಯ ಬರವಣಿಗೆಯಿಂದ ಅವರು ದೇವ ಲೋಕದವರೆಂದು ತಿಳಿದು— ಈಗ ಅಲ್ಲಿಗೊಂದು ಬಲ ವಾದ ವೈಮಾನಿಕ ದಂಡಯಾತ್ರೆಯನ್ನು ಸಾಗಿಸುವ ವ್ಯವಸ್ಥೆಯಾಗುತ್ತಿದೆ ಯಶಸ್ವಿಯಾದರೆ ಅಪರಾಧಿಗಳ ಗತಿ ತೀರ ಕಠಿಣವಿದೆಯೆಂದು ಹೇಳಬೇಕಾಗಿಲ್ಲವಷ್ಟೆ.

ಸುದೈವದಿಂದ ನಮಗೆ ಅವರ ವರದಿಯನ್ನು ಇಣು ಕಿನೋಡುವ ಪ್ರಸಂಗ ಸಿಕ್ಕಿದ ನಿಮಿತ್ತ ಅದರ ಈ ಸಾರ ಸಂಗ್ರಹವನ್ನು ನಿಮ್ಮ ಸಲುವಾಗಿ ಬರೆಯುವಂಥವರಾ ಗುವಂಥವರಾಗಿದ್ದೇವೆ. ಅವರ ವೈಮಾನಿಕ ಪ್ರವಾಸವು ಯಶಸ್ವಿಯಾದರೆ— ನಾವಾದರೂ ಅಲ್ಲಿಗೇ ಹೋಗಿ ಇನ್ನು ಹೆಚ್ಚಿನ ವಿಷಯಗಳನ್ನು ತಿಳಿಯಲು ಸಾಧ್ಯ ವಿದೆ. ವಾಚಕರು—ಆತುರರಾಗುವುದು ಬೇಡ, ಆ ಕಾಲ ನಮನಿಮಗೆಲ್ಲಿ ಬಾರದಿರದೆಂದು ಆಶಿಸುವ.

ಇಲ್ಲಿಗೆ ತತ್ಕಾಲಕ್ಕೆ ಮುಗಿದುದಂತೆ!